**Author Guidelines**

- Online submission of the article should be sent as an attachment only in MS word to: editor@srujani.in
- Articles should be in Kannada or English
- Article should be 4,000 - 8,000 words in length
- It should be typed in Times New Roman Font for English and Nudi 01 e Font for Kannada Article, Text type should be 12 Font size, 1.5 lines spaced.
- Covering letter declaring that the submitted article is original work of the author and is unpublished must be sent on a separate page
- Abstract of 150 words along with key words should be given on the separate sheet
- Text Organization: The main text should begin on a separate page preferably divided into separate sections such as Introduction, Materials and Methodology, main Subject of the article and conclusion.
- References must be according to APA 7th Edition guidelines.
- Visit our website for more details: www.srujani.in

MOB: +91-7411851852 and +91-9164061581

| | ಅನುಕ್ರಮಣಿಕೆ– Contents | ಪು.ಸಂ |
|---|---|---|
| | **Part-A** | P. No |

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp. 1-8
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಜಕ್ಕಣ ಏಕಾಂಕ ನಾಟಕದಲ್ಲಿ ಮೌಲ್ಯಗಳ ಜಿಜ್ಞಾಸೆ

ವಿಜಯ್ ಕುಮಾರ್ ಟಿ.[1] ಮತ್ತು ಡಾ. ಬಿ.ಎಸ್. ಸುದೀಪ್[2]
[1]ಸಂಶೋಧನಾ ವಿದ್ಯಾರ್ಥಿ, [2]ಸಹಾಯಕ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಕನ್ನಡ ಸ್ನಾತಕೋತ್ತರ ವಿಭಾಗ, ಜೆಎಸ್ಎಸ್ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು, ಮೈಸೂರು.

***Abstract:***
*ಅಂತರಂಗ ಮತ್ತು ಬಹಿರಂಗ ಜೀವನಗಳು ಮಾನವನ ಜೀವನದ ಎರಡು ಪ್ರಮುಖ ಮುಖಗಳಾಗಿವೆ. ಈ ಮುಖಗಳನ್ನು 'ಸಂಸ್ಕೃತಿ' ಮತ್ತು 'ನಾಗರಿಕತೆ' ಎಂಬ ಶಬ್ದಗಳು ಸೂಚಿಸುತ್ತವೆ. ನಾಗರಿಕತೆಯು ಮಾನವನ ಬಹಿರಂಗ ಜೀವನಕ್ಕೆ ಸಂಬಂಧಿಸಿದ ಅಂಶಗಳನ್ನು ನಿರ್ದೇಶಿಸಿದರೆ; ಸಂಸ್ಕೃತಿಯು ಆತನ ಅಂತರಂಗದ ಜೀವನದ ಕನ್ನಡಿಯಾಗಿ ಪ್ರತಿಫಲಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ದೇಶೀಯ ಚಿಂತನೆಗಳನ್ನು ತಮ್ಮ ಸಾಹಿತ್ಯದ ಅಂತಃಸತ್ವವನ್ನಾಗಿಸಿಕೊಂಡು ಪ್ರಭಾವ ಬೀರಿರುವ ಲೇಖಕರಲ್ಲಿ ಚಂದ್ರಶೇಖರ ಕಂಬಾರರೂ ಒಬ್ಬರು. ಇವರ ಕೆಲವು ನಾಟಕಗಳು ಐತಿಹಾಸಿಕ ವಸ್ತುವನ್ನೊಳಗೊಂಡ ಸುಂದರ ಕಲಾಕೃತಿಗಳಾಗಿವೆ. ಇವುಗಳಲ್ಲಿ 'ಜಕ್ಕಣ' ಐತಿಹಾಸಿಕ ಸನ್ನಿವೇಶದ ವಸ್ತುವನ್ನೊಳಗೊಂಡ ವಿಶೇಷ ಏಕಾಂಕ ನಾಟಕವಾಗಿದೆ. ಈ ನಾಟಕವು ಜಕಣಾಚಾರಿ ಮತ್ತು ಅವನ ಮಗ ಡಂಕಣಾಚಾರಿಯ ಜೀವನದ ವೃತ್ತಾಂತವನ್ನು ಆಧರಿಸಿದೆ.*

***Keywords:*** *ಚಂದ್ರಶೇಖರ ಕಂಬಾರ, ಜಕ್ಕಣ, ಏಕಾಂಕ ನಾಟಕ, ಜಕಣಾಚಾರಿ, ಡಂಕಣಾಚಾರಿ, ಸಂಸ್ಕೃತಿ ಮತ್ತು ನಾಗರಿಕತೆ.*

**ಪೀಠಿಕೆ**

"ಸಂಸ್ಕೃತಿಯೆಂಬುದು ವ್ಯಕ್ತಿಯ ಸ್ವಭಾವಕ್ಕೆ ಸಂಸ್ಕಾರವನ್ನು ಕೊಡುವ ಶಕ್ತಿಯಾಗಿದೆ."[1] "ಒಳ್ಳೆಯದನ್ನು ಬಯಸುವುದೂ, ಒಳ್ಳೆಯದನ್ನು ಪ್ರೀತಿಸುವುದೂ ಸಂಸ್ಕೃತಿಯ ಸಲ್ಲಕ್ಷಣವಾಗಿದೆ."[2] ವ್ಯಕ್ತಿಯ ಮನಸ್ಸಿನ ಮೇಲೆ ಒಂದು ಸಂಸ್ಕಾರವನ್ನುಂಟುಮಾಡಿ ಆತನನ್ನು ಪೂರ್ಣತೆಯ ಕಡೆಗೆ ನಡೆಯುವಂತೆ ಮಾಡುವುದೇ ಸಂಸ್ಕೃತಿಯ ಪರಮ ಪ್ರಯೋಜನವಾಗಿದೆ.[3] ಕನ್ನಡ ಸಾಹಿತ್ಯದಲ್ಲಿ ದೇಶೀಯ ಚಿಂತನೆಗಳನ್ನು ತಮ್ಮ ಸಾಹಿತ್ಯದ ಅಂತಃಸತ್ವವನ್ನಾಗಿಸಿಕೊಂಡು ಪ್ರಭಾವ ಬೀರಿರುವ ಲೇಖಕರಲ್ಲಿ ಚಂದ್ರಶೇಖರ ಕಂಬಾರರೂ ಒಬ್ಬರು. ಇವರ ಕೆಲವು ನಾಟಕಗಳು ಐತಿಹಾಸಿಕ ವಸ್ತುವನ್ನೊಳಗೊಂಡ ಸುಂದರ ಕಲಾಕೃತಿಗಳಾಗಿವೆ. ಇವುಗಳಲ್ಲಿ 'ಜಕ್ಕಣ' ಐತಿಹಾಸಿಕ ಸನ್ನಿವೇಶದ ವಸ್ತುವನ್ನೊಳಗೊಂಡ ವಿಶೇಷ ಏಕಾಂಕ ನಾಟಕವಾಗಿದೆ. "ನಮ್ಮ ದೇಶದಲ್ಲಿ ಯಾವುದಾದರೂ ಸುಂದರ ದೇವಾಲಯ ಕಂಡುಬಂದರೆ ಅದು 'ಜಕಣಾಚಾರಿ ಕಟ್ಟಡ' ಎಂಬ ಪ್ರತೀತಿಗೆ ಗುರಿಯಾಗಿದೆ. ಒಂದು ವೇಳೆ, ಅದು ಜಕಣಾಚಾರಿಯದಲ್ಲ ಎಂದು ಹಟ ಹಿಡಿದರೆ 'ಹೋಗಲಿ ಬಿಡಯ್ಯ, ಅದು ಅವನ ಮಗ ಡಂಕಣಾಚಾರೀದು' ಎಂಬ ಮಾತು ಕಿವಿಗೆ ಬೀಳುತ್ತದೆ. ಈ ತಂದೆ ಮಕ್ಕಳಿಬ್ಬರೂ ನಮ್ಮ ದೇಶದ

***Please cite this article as:*** ವಿಜಯ್ ಕುಮಾರ್ ಟಿ. ಮತ್ತು ಬಿ.ಎಸ್. ಸುದೀಪ್. (2024). ಜಕ್ಕಣ ಏಕಾಂಕ ನಾಟಕದಲ್ಲಿ ಮೌಲ್ಯಗಳ ಜಿಜ್ಞಾಸೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 2(6), 1–8.

ಐತಿಹ್ಯಗಳಲ್ಲೊಂದಾಗಿ ಪರಿಣಮಿಸಿದ್ದಾರೆ."[4] ಇವರಿಬ್ಬರ ಜೀವನ ವೃತ್ತಾಂತವನ್ನು ಆಧರಿಸಿ ಈ ನಾಟಕವನ್ನು ರಚಿಸಲಾಗಿದೆ. ಇತಿಹಾಸ ಪ್ರಸಿದ್ಧ 'ಬೇಲೂರು' ಇದರ ಮುಖ್ಯ ಭೂಮಿಕೆಯಾಗಿದೆ. ಮನುಷ್ಯನ ವಿದ್ಯೆ ಅಥವಾ ಪಾಂಡಿತ್ಯ ಆತನನ್ನು ವಿನಯವಂತನಾಗಿ; ಸಮಾಜದ ಕಾಳಜಿ ಇರುವ ಸಾಮಾಜಿಕ ಜೀವಿಯಾಗಿ ಮಾಡಬೇಕೆ ವಿನಾ ಅಹಂಕಾರದಿಂದ ಮನುಷ್ಯತ್ವವನ್ನು ಕಳೆದುಕೊಂಡು ಕಲ್ಲಿನಂತಾಗಬಾರದು ಎಂಬ ಜೀವನ ತತ್ವವನ್ನು ನಾಟಕ ಸಾರುವುದಲ್ಲದೆ ಶಾಸ್ತ್ರದ ಕುರಿತು ಜಕ್ಕಣನಿಗಿದ್ದ (ಅಥವಾ ಜಕ್ಕಣನಂತೆ ಶಾಸ್ತ್ರವನ್ನು ಕುರುಡಾಗಿ ನಂಬುವ ಜನರಿಗಿರುವ) ನಂಬಿಕೆಯನ್ನು ಪ್ರಶ್ನಿಸುವ ಆಶಯವನ್ನೂ ಸಹ ಹೊಂದಿದೆ.

ಜಕ್ಕಣ ಶಿಲ್ಪಕಲಾಶಾಸ್ತ್ರದಲ್ಲಿ ಶ್ರೇಷ್ಠ ಪಂಡಿತನಾಗಿದ್ದರೂ ನಿಜ ಜೀವನದಲ್ಲಿ ಹೆಂಡತಿ ಮಕ್ಕಳನ್ನು ಅರಿಯುವ ಮನಃಶಾಸ್ತ್ರವನ್ನು ಅರಿಯದೆ ಹೋಗುತ್ತಾನೆ. ತನ್ನ ಹೆಂಡತಿ ಭವಾನಿಗೆ ಹುಟ್ಟಿದ ಗಂಡು ಮಗುವನ್ನು ನೋಡಿ, ಆಡಿ, ಜೊತೆಗಿದ್ದು ಸುಖಿಸುವ ಬದಲು, ಮಗುವಿನ ಜನ್ಮಜಾತಕವನ್ನು ಕಂಡು ಅದರಲ್ಲಿದ್ದ ಶಾಸ್ತ್ರದೋಷವನ್ನು ನಂಬಿ, ಹುಟ್ಟಿದ ಮಗುವನ್ನೂ ಹೆಂಡತಿಯನ್ನೂ ಕ್ರೀಡಾಪುರದಲ್ಲಿ ಬಿಟ್ಟು ಬೇಲೂರಿಗೆ ಬಂದು ಸೇರುತ್ತಾನೆ. ಅಲ್ಲಿ ತನ್ನ ಹೆಸರು, ಊರು ಹಾಗೂ ಸ್ವಂತ ವಿಷಯಗಳನ್ನು ಹೇಳಿಕೊಳ್ಳದೆ ಮುಖ್ಯ ಸ್ಥಪತಿಯಾಗಿ ಕಾರ್ಯನಿರ್ವಹಿಸುತ್ತಿರುತ್ತಾನೆ.

ಇತ್ತ ಕಡೆ ಬೆಳೆದು ದೊಡ್ಡವನಾದ ಅವನ ಮಗ ಡಂಕಣ ತನ್ನ ತಾಯಿಯಲ್ಲಿ ತನ್ನ ತಂದೆಯ ಪರಿಚಯವನ್ನು ಕುರಿತು ಕೇಳಲಾಗಿ ಅವನಿರುವ ವಿಳಾಸ ಅವಳಿಗೂ ತಿಳಿಯದ ಕಾರಣ ಸ್ವಯಂ ತಾನೇ ಹುಡುಕಲು ಮುಂದಾಗಿ ಹುಟ್ಟಿದ ಊರನ್ನು ಬಿಟ್ಟು ಊರಿಂದ ಊರಿಗೆ ಅಲೆಯುತ್ತಾನೆ. ತನ್ನ ತಂದೆ ಶ್ರೇಷ್ಠ ಶಿಲ್ಪಕಾರನೆಂದು ತನ್ನ ತಾಯಿಯಿಂದ ಕೇಳಿ ತಿಳಿದಿದ್ದ ಅವನು ಎಲ್ಲೆಲ್ಲಿ ದೇವಾಲಯಗಳು ನಿರ್ಮಾಣವಾಗುತ್ತಿರುತ್ತವೋ ಅಲ್ಲೆಲ್ಲ ಹೋಗಿ ತಂದೆಯ ಹುಡುಕಾಟ ನಡೆಸುತ್ತಾನೆ. ಇತ್ತ ಗಂಡನನ್ನೂ ಮಗನನ್ನೂ ಕಳೆದುಕೊಂಡ ಭವಾನಿ ಅವರಿಬ್ಬರನ್ನೂ ಅರಸುತ್ತಾ ಅಲೆಯುತ್ತಾ ಬಳಲುತ್ತಾಳೆ. ದೇವರ ಕೃಪೆ ಎಂಬಂತೆ ಆ ಮೂವರ ಸಂಗಮವು ಬೇಲೂರು ಚೆನ್ನಕೇಶವನ ಸನ್ನಿಧಿಯಲ್ಲಿ ಏರ್ಪಡುತ್ತದೆ. ತನ್ನ ಗಂಡನು ನಿರ್ಮಿಸುತ್ತಿರುವ ದೇವಾಲಯಕ್ಕೆ ಬಂದ ಭವಾನಿ "ನಡು ಹಗಲು ಸುಡುಬಿಸಿಲಲ್ಲಿ ಕೆಂಪು ಹೂವರಳಿ ಉರಿಯುವ ಮರದ ನೆರಳಲ್ಲಿ ಕೂರಲಾರದೆ ಮುರಿದ ಮಾತು ಹರಿದ ಕನಸುಗಳ ಕನವರಿಸುತ್ತಾ ಮಲಗಿರುತ್ತಾಳೆ."[5] ಈ ವೇಳೆಗೆ ಆಕೆಯ ಮಗ ಡಂಕಣನೂ ಅಲ್ಲಿಗೆ ಬಂದು ದೇವಾಲಯವನ್ನು ವೀಕ್ಷಿಸುತ್ತಿರುತ್ತಾನೆ. ಹೀಗೆ ದೇವಾಲಯವನ್ನೂ ಅಲ್ಲಿರುವ ಕೆತ್ತನೆಗಳನ್ನೂ ನೋಡುತ್ತಾ ಮುಂದುವರಿದ ಡಂಕಣನಿಗೆ ಅಲ್ಲಿದ್ದ ಚೆನ್ನಕೇಶವನ ಮೂರ್ತಿಯಲ್ಲಿ ದೋಷವಿರುವುದು ತಿಳಿಯುತ್ತದೆ. ಅದನ್ನು ಅದರ ಮುಖ್ಯಶಿಲ್ಪಿಯಾದ ಜಕ್ಕಣನಿಗೆ ತಿಳಿಸುತ್ತಾನೆ. ಆದರೆ ಪಾಂಡಿತ್ಯ ಮದದಿಂದ ಅಹಂಕಾರಕ್ಕೊಳಗಾಗಿದ್ದ ಜಕ್ಕಣ ಅದನ್ನು ಒಪ್ಪದೇ ತಾನು ಶಾಸ್ತ್ರವನ್ನು ನಂಬಿರುವುದಾಗಿಯೂ ಆ ಶಾಸ್ತ್ರದ ಪ್ರಕಾರದಂತೆಯೇ ನಿಯಮಗಳನ್ನು ಪಾಲಿಸಿ ಆ ಮೂರ್ತಿಯನ್ನು ನಿರ್ಮಿಸಿರುವುದಾಗಿಯೂ ವಾದಿಸುತ್ತಾನೆ. ಜಕ್ಕಣನು ತಾನು ಮಾಡಿರುವ ಕೆಲಸವನ್ನು ಸಮರ್ಥಿಸಿಕೊಳ್ಳಲು ಶಾಸ್ತ್ರದ ಮೊರೆ ಹೋದಾಗ ಅದಕ್ಕೆ ಉತ್ತರವಾಗಿ ಡಂಕಣನು "ಶಾಸ್ತ್ರ ಮೂರ್ತಿಯ ಪ್ರಮಾಣವನ್ನು ಹೇಳಬಲ್ಲದು. ಅದು ಅಂತರಂಗವನ್ನು ತೋರಿಸಲಾರದು. ನಿಮಗೆ ಕಲ್ಲಿನ ಶಾಸ್ತ್ರ, ಕಲೆಯ ಶಾಸ್ತ್ರ ಎರಡೂ ಗೊತ್ತಿದೆ ಆದರೆ ಈ ಮೂರ್ತಿಯ ವಿಷಯದಲ್ಲಿ ಮಾತ್ರ ಕಲ್ಲಿನ ಅಂತರಂಗ ತಿಳಿದಿಲ್ಲವೆಂದೇ ಹೇಳಬೇಕಾಗುತ್ತದೆ"[6] ಎನ್ನುತ್ತಾನೆ.

ಇಲ್ಲಿ 'ಕಲ್ಲಿನ ಅಂತರಂಗ' ಎಂಬ ಮಾತು ಕೇವಲ ಕಲ್ಲಿನ ಅಂತರಂಗವಾಗಿರದೆ ಮನುಷ್ಯನ ಅಥವಾ ಜಕ್ಕಣನ 'ಆತ್ಮರಂಗ'ವಾಗಿದೆ. ಶಾಸ್ತ್ರದ ಹಿಂದೆ ಬಿದ್ದಿರುವ ಜಕ್ಕಣನ ಮನಸ್ಥಿತಿಯನ್ನು ಸರಿಪಡಿಸಿ ಅದು ಮಾನವಿಕ ಸಂಬಂಧಗಳತ್ತ ಹರಿಯುವಂತೆ ಮಾಡುವುದು ಈ ನಾಟಕದ ಉದ್ದೇಶವಾಗಿದೆ.

ಮಾತನಾಡದ ಕಲ್ಲುಗಳ ಶಾಸ್ತ್ರವನ್ನು ಅರಿತಿರುವ ಜಕ್ಕಣ ಜೀವವಿರುವ ತನ್ನ ಹೆಂಡತಿ ಹಾಗೂ ಮಗನ ಭಾವನೆಗಳನ್ನು ಅರಿಯುವಲ್ಲಿ ವಿಫಲನಾಗಿದ್ದಾನೆ. ಈ ಕಾರಣದಿಂದಲೇ ಅವನು 'ಕಲ್ಲಿನಲ್ಲಿ ದೋಷವಿದೆ' ಎಂಬ ಡಂಕಣನ ವಾದವನ್ನು ಒಪ್ಪದೇ ಅವನನ್ನು ಹೀಯಾಳಿಸುತ್ತಾನೆ. ಈ ಸಂದರ್ಭದಲ್ಲಿ ಜಕ್ಕಣನಿಂದ ಪ್ರಯೋಗವಾಗಿರುವ "ಉತ್ತರದ ಗೋದಾವರಿಯಿಂದ ದಕ್ಷಿಣದ ಕನ್ಯಾಕುಮಾರಿಯ ತನಕ ವಿಜಯ ಧ್ವಜ ಹಾರಿಸಿದ ಈ ಆಚಾರ್ಯನಿಗೆ ಕಲ್ಲಿನ ಅಂತರಂಗ ತಿಳಿದಿಲ್ಲವೆಂದು, ಕವಡೆ ಆಡುವ ಹುಡುಗನೊಬ್ಬ ಹೇಳುವಂತಾದುದು ಈ ನೆಲದ ಮಹಿಮೆಯಲ್ಲವೆ?"[6] ಎಂಬುದು ಒಂದು ಅಣಕದ ಮಾತಾಗಿದ್ದರೂ ಅದು ಕನ್ನಡದ ಆದ್ಯ ಲಕ್ಷಣಗ್ರಂಥ ಎನಿಸಿರುವ 'ಕವಿರಾಜಮಾರ್ಗ' ಕೃತಿಯಲ್ಲಿ ಬರುವ "ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್" ಎಂಬ ಮಾತನ್ನು ನೆನಪಿಸುತ್ತದೆ.

ತನ್ನ ಅಪಾರ ಪಾಂಡಿತ್ಯ ಕುರಿತು ಅಹಂಕಾರ ಹೊಂದಿರುವ ಜಕ್ಕಣನಿಗೆ ಮಾನವೀಯ ಗುಣಗಳು ದೂರವೇ ನಿಂತಿರುತ್ತವೆ. ಆತ ತನ್ನೆದುರು ಕೇಶವನೇ ರೂಪದರ್ಶಿಯಾಗಿ ಬಂದು ನಿಂತು ತಿಂಗಳುಗಳ ಕಾಲ ಜೊತೆಗಿದ್ದರೂ ಸಹ ಅವನನ್ನು ಗುರುತಿಸಲಾಗದೇ ಹೋಗುತ್ತಾನೆ. ಅವನು ಶಿಲಾಬಾಲಿಕೆಯರ ಮೂರ್ತಿಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಕೆತ್ತುವಾಗ 'ಸವುತೇ' ಎಂದು ನಟಿಕೆ ಮುರಿದು ಮತ್ಸರ ಹಾಗೂ ನೋವಿನಿಂದ ಗೋಳಾಡುವ ತನ್ನ ಹೆಂಡತಿಯ ಕೂಗನ್ನು ಕೇಳಿಸಿಕೊಳ್ಳದವನಾಗಿದ್ದಾನೆ. ಅದಲ್ಲದೆ ತನ್ನ ರೂಪವನ್ನೇ ಧರಿಸಿ ತನ್ನೆದುರು ಬಂದು ನಿಂತು ಮಾತನಾಡುವ ತನ್ನ ಮಗನನ್ನು ಗುರುತು ಹಿಡಿಯದೆ ಹೋಗುತ್ತಾನೆ. ಈ ಎಲ್ಲಾ ನಿದರ್ಶನಗಳಿಂದ ಅಹಂಕಾರವು ನಮಗೆ ಕಿವಿಗಳಿದ್ದರೂ ಕೇಳದಂತೆಯೂ; ಕಂಗಳಿದ್ದರೂ ಕಾಣದಂತೆಯೂ ಮಾಡಿಬಿಡುತ್ತದೆ ಎಂಬ ಮನೋವೈಜ್ಞಾನಿಕ ಸಂದೇಶ ಇಲ್ಲಿ ಗೋಚರಿಸುತ್ತದೆ.

ಜೀವವಿರುವ ಹೆಂಡತಿ ತಾನಿರುವಾಗ ತನ್ನನ್ನು ತಿರಸ್ಕರಿಸಿ ತನ್ನ ಗಂಡ ಹೆಣ್ಣಿನ ರೂಪದ ಒಂದು ಶಿಲೆಯನ್ನು ಮುಟ್ಟಿದರೂ ಸಹಿಸಲಾಗದ ಅಂತಃಕರಣವನ್ನು ನಾವು 'ಭವಾನಿ'ಯಲ್ಲಿ ಕಾಣುತ್ತೇವೆ. ನಮ್ಮ ಸಮಾಜದಲ್ಲಿ ಒಬ್ಬ ಸಾಮಾನ್ಯ ಹೆಣ್ಣು ಬಯಸುವ ಆಭರಣವೆಂದರೆ ಅದು ತನ್ನ ಗಂಡನ ಸಾನ್ನಿಧ್ಯ ಮತ್ತು ಒಲುಮೆಯನ್ನಲ್ಲದೆ ಮತ್ತೇನು? ಈ ಕಾರಣದಿಂದಾಗಿ ಆಕೆ ಭಾವವಿಲ್ಲದ ಆತನ ಎದೆಯಲ್ಲಿ ಭಾವ ಮೂಡಿಸಲು 'ದೇವರಿಲ್ಲದ ಗರ್ಭಗುಡಿಗೆ' ಮಂಗಳಾರತಿ ಮಾಡುತ್ತಾಳೆ.

'ಇದುವರೆಗೂ ಯಾರೂ ನನ್ನ ಪಾಂಡಿತ್ಯವನ್ನು ಪ್ರಶ್ನಿಸಿರಲಿಲ್ಲ!' ಎಂಬುದು ಜಕ್ಕಣನ ಅಹಂಕಾರಕ್ಕೆ ಕಾರಣವಾಗಿರುತ್ತದೆ. ಈ ಕಾರಣದಿಂದಲೇ ಡಂಕಣನು ಬಂದು ಆತನನ್ನು ಪ್ರಶ್ನಿಸಿದಾಗ ಆತನ ಆತ್ಮಬಲ ಕುಗ್ಗಿಹೋಗಿ ನಾನೂ ಒಬ್ಬ ಮನುಷ್ಯ. ನಾನೂ ಸಹ ಸಮಾಜದ ಜೀವಿ. ನಾನೂ ಸಹ ತಪ್ಪು ಮಾಡಿರಬಹುದು ಎಂಬ ಸುಳಿವು ಆತನ ಸ್ವಗತದಲ್ಲಿ ಮೂಡಿ "ನನ್ನನ್ನು ಮೀರಿದ ಒಂದರಿಂದ ವಿಪರೀತವಾದದ್ದೇನೋ ನಡೆಯುತ್ತಿದೆ ಅಂತ ಅನ್ನಿಸುತ್ತಿದೆಯಲ್ಲಾ!"[7] ಎಂದು ಆತ್ಮಾವಲೋಕನ ಮಾಡಿಕೊಳ್ಳುತ್ತಾನೆ. ಅಲ್ಲಿಗೆ ಈ ಸಂದರ್ಭದಲ್ಲಿ ಅವನಿಗೆ 'ತನ್ನನ್ನು ಮೀರಿದ ಯಾವುದೋ ಒಂದು ಶಕ್ತಿ ಇದೆ' ಎಂಬ ಅರಿವು ಚಿಗುರೊಡೆಯುತ್ತದೆ. ಆತನಿಗೆ ತನ್ನ ಕಲೆಯನ್ನು; ಪಾಂಡಿತ್ಯವನ್ನು; ಜ್ಞಾನವನ್ನು ಪ್ರಶ್ನಿಸುವವರು ಯಾರೋ ಬಂದರಲ್ಲ ಎಂಬ ಅಭದ್ರತೆ ಕಾಡುತ್ತದೆ. ಆದರೆ ಡಂಕಣ ಸಮಾಧಾನವಾಗಿ 'ದೋಷವಿರುವುದು ಕಲ್ಲಿನಲ್ಲಿ ಹೊರತು ವಿಗ್ರಹದಲ್ಲಲ್ಲ' ಎಂದು ಹೇಳುತ್ತಾನೆ.

ಇಲ್ಲಿ ನಾಟಕಕಾರರು 'ವಿಗ್ರಹ', 'ಕಲ್ಲು' ಎಂಬ ಪದಗಳನ್ನು ಸಾಂಕೇತಿಕವಾಗಿ ಬಳಸಿರುವುದನ್ನು ಗಮನಿಸಬೇಕಾಗುತ್ತದೆ. 'ವಿಗ್ರಹ' ಎಂದರೆ ಮೂರ್ತಿಯ ಹೊರ ರೇಖೆ. ಅದನ್ನು ವ್ಯಕ್ತಿಯಾಗಿ ಹೋಲಿಸಿ ನೋಡಿದರೆ ಅದು ವ್ಯಕ್ತಿಯ ಹೊರಚಹರೆಯನ್ನಷ್ಟೇ ತಿಳಿಸಿಕೊಡುತ್ತದೆ. ಆದರೆ

'ಕಲ್ಲು' ವಿಗ್ರಹದ ಮೂಲ ಸ್ವರೂಪ. ಇದನ್ನು ವ್ಯಕ್ತಿಯ 'ಅಂತರಾತ್ಮ' ಅಥವಾ 'ಆತ್ಮಸಾಕ್ಷಿಗೆ' ಹೋಲಿಸ ಬಹುದಾಗಿದೆ. ಹಾಗಾಗಿ ಇಲ್ಲಿ ದೋಷವಿರುವುದು ವಿಗ್ರಹದಲ್ಲಲ್ಲ. ಎಂದರೆ ಜಕ್ಕಣನ ಹೊರನೋಟದಲ್ಲಲ್ಲ. 'ಕಲ್ಲಿನ ಅಂತರಂಗದಲ್ಲಿ' ಎಂದರೆ ಆತನ 'ಆಂತರ್ಯ'ದಲ್ಲಿ ಎಂಬುದು ಸಿದ್ಧವಾಗುತ್ತದೆ. ಈ ಸಂದರ್ಭವು "ಶಾಸ್ತ್ರದಲ್ಲಿ ದೋಷವಿದ್ದರೆ ಹೃದಯದಲ್ಲಿ ತಿದ್ದಬಹುದು; ಆದರೆ ಹೃದಯದಲ್ಲಿ ದೋಷವಿದ್ದರೆ ಶಾಸ್ತ್ರ ಏನು ಮಾಡುವುದು?" ಎಂಬ ವರಕವಿ ಬೇಂದ್ರೆಯವರ ಮಾತನ್ನು ನೆನಪಿಸುತ್ತದೆ. ಅಥವಾ ಈ ಸನ್ನಿವೇಶಕ್ಕೆ ಆ ಮಾತು ಸರಿಯಾಗಿ ಹೊಂದುತ್ತದೆ. ಇಲ್ಲಿ ಜೀವವಿರುವ ಹೆಂಡತಿಯನ್ನು ನಂಬದ ಜಕ್ಕಣ ಶಾಸ್ತ್ರವನ್ನು ನಂಬಿರುವುದನ್ನು ನೋಡಿದರೆ ಅವನ ಹೃದಯದಲ್ಲಿ ದೋಷವಿರುವುದು ತಿಳಿಯುತ್ತದೆ. ಅದನ್ನೇ ಪ್ರಸ್ತುತ ನಾಟಕವು ತನ್ನ ವಸ್ತುವಾಗಿ ಸ್ವೀಕರಿಸಿದೆ. ಈ ಹೇಳಿಕೆಗಳು "ಯಾವ ಕಾಲದ ಶಾಸ್ತ್ರವೇನು ಹೇಳಿದರೇನು? ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು?" ಎಂಬ ಕುವೆಂಪು ಅವರ ಮಾತನ್ನೂ ನೆನಪಿಸುತ್ತವೆ.

ಜಕ್ಕಣನ ಈ ಸ್ವರೂಪವನ್ನು ನಾಟಕದಲ್ಲಿ ಬರುವ

***"ಡಂಕಣ:*** ಸ್ಥಪತಿಗಳ ಬಗ್ಗೆ ನನಗೆ ಅಪಾರವಾದ ಗೌರವವಿದೆ ತಾಯಿ. ನನ್ನ ತಾಯಿಯಾಣೆಗೂ ಅವರನ್ನು ಅವಮಾನಿಸುವುದು ನನ್ನ ಉದ್ದೇಶವಲ್ಲ. ಸ್ಥಪತಿಗಳು ಹೇಳಿದಂತೆ ಮೇಲುನೋಟಕ್ಕೆ ಕಲ್ಲು ದೋಷರಹಿತವಾಗಿಯೇ ಇದೆ. ಆದರೆ ದೋಷವಿರುವುದು ಕಲ್ಲಿನ ಅಂತರಂಗದಲ್ಲಿ! ಒಳಗೆ ಹುಸಿ ಮುಚ್ಚಿಕೊಂಡು ಹೊರಗೆ ಸಜ್ಜನಿಕೆ ಮೆರೆವ ಡಾಂಭಿಕನಂತೆ ಕಲ್ಲು ಇವರೊಂದಿಗೆ ಆಟವಾಡಿದೆ ತಾಯಿ!

**ಶಾಂತಲೆ:** ಆ ದೋಷ ನಿನ್ನ ಕಣ್ಣಿಗೆ ಹ್ಯಾಗೆ ಬಿತ್ತು?

**ಡಂಕಣ:** ಬಾಲ್ಯದಿಂದಲೂ ಕಲ್ಲಿನೊಂದಿಗೇ ಬೆಳೆದಿದ್ದೇನೆ, ಪಟ್ಟಮಹಾದೇವಿಯವರೆ, ಅವು ತಮ್ಮ ಅಂತರಂಗವನ್ನು ತೆರೆದು ತೋರಿಸಿ ನನಗೆ ತಮ್ಮ ಕಥೆಯನ್ನು ಹೇಳುತ್ತವೆ.

**ಶಾಂತಲೆ:** ಆ ಕಲ್ಲು ಸ್ಥಪತಿಗಳಿಗೂ ತನ್ನ ಅಂತರಂಗವನ್ನು ತೋರಿಸಿರಬೇಕಲ್ಲ?

**ಡಂಕಣ:** ಇವರು ನೋಡಿಲ್ಲ. ನೋಡಿದ್ದರೆ ಆ ಕಲ್ಲನ್ನು ಆರಿಸುತ್ತಿರಲಿಲ್ಲ.

**ಜಕ್ಕಣ:** (*ವ್ಯಂಗ್ಯದಿಂದ*) ನಿನಗಿನ್ನಾವುದೋ ಮೂರನೆಯ ಕಣ್ಣಿದ್ದಂತೆ ಮೊಳಗುವ ನುಡಿಗಳನ್ನು ಆಡುತ್ತಿರುವೆ ಬಾಲಕಾ. ನಿನಗೆ ಮಾತ್ರ ಕಂಡಿರುವ ಕಲ್ಲಿನ ದೋಷವನ್ನು ನಾವೂ ನೋಡಬಹುದೆ?

**ಡಂಕಣ:** (*ಅಷ್ಟೇ ವ್ಯಂಗ್ಯದಿಂದ*) ನೋಡಬಹುದು ನೋಡುವ ಕಣ್ಣಿದ್ದರೆ."[8]

ಎಂಬ ಸಂಭಾಷಣೆಯಲ್ಲಿ ಇನ್ನಷ್ಟು ವಿಸ್ತಾರವಾಗಿ ಕಾಣಬಹುದು. ಇಲ್ಲಿರುವ "ನೋಡುವ ಕಣ್ಣಿದ್ದರೆ" ಎಂಬ ಮಾತು ಶ್ರೀ ಕನಕದಾಸರ "ನಾನು ಹೋದರೆ ಹೋದೇನು" ಎಂಬ ಅಹಂಕಾರವನ್ನು ಕಳಚಿಕೊಳ್ಳುವ ತತ್ವಪೂರಿತ ಮಾತನ್ನೂ ಶ್ರೀ ಕುವೆಂಪುರವರ "ದೃಷ್ಟಿಯಂತೆ ಕಾಣ್ಕೆ" ಎಂಬ ಮಾತನ್ನೂ ಧ್ವನಿಸುವಂತಿದೆ.

ಈ ಸನ್ನಿವೇಶದಲ್ಲಿ ಡಂಕಣನು ಶಾಂತಲೆಯಲ್ಲಿ ತನ್ನ ವಾದವನ್ನು ಮುಂದಿರಿಸಿ ಅಲ್ಲಿಂದ ಹೊರಡುವ ಪ್ರಸಂಗ ಬರುತ್ತದೆ. ಆಗ ಜಕ್ಕಣನು "ನಿಲ್ಲು. ಪಟ್ಟಮಹಾದೇವಿಯವರ ಅಪ್ಪಣೆ ಇಲ್ಲದೆ ಹೊರಟಿದ್ದೀಯಲ್ಲ, ಎಷ್ಟಯ್ಯಾ ನಿನ್ನ ಕೊಬ್ಬು? ಹೇಳಿಕೊಳ್ಳಲು ಒಬ್ಬ ಗುರುವಿನ ಗುರುತು ಕೂಡ ಇಲ್ಲದ ನೀನು ರೂವಾರಿಯ ಕುಲದಲ್ಲಿ ಹುಟ್ಟಿದವನೆಂಬುದೂ ಹುಸಿ, ಯಾವನೋ ಅಡ್ಡ ಕಸುಬಿಗೆ ಹುಟ್ಟಿ..."[9] ಎಂಬ ತೀರಾ ಅಸಹನೀಯ ಮಾತುಗಳನ್ನಾಡುತ್ತಾ ಅವನನ್ನು ತಡೆಯುತ್ತಾನೆ. ಇಲ್ಲಿ ಡಂಕಣನು ಜಕ್ಕಣನ ಪಾಂಡಿತ್ಯವನ್ನು ಪ್ರಶ್ನಿಸಿದನು ಎಂಬ ಅಸಮಾಧಾನ ಒಂದು ಕಡೆಯಾದರೆ; 'ಹಿರಿಯರೊಂದಿಗೆ ಮಾತನಾಡುವಾಗ ಅವರ ಅಪ್ಪಣೆ ಇಲ್ಲದೆ ಅಲ್ಲಿಂದ ಹೊರಡಬಾರದು' ಎಂಬ ಸಾಂಸ್ಕೃತಿಕ ಪ್ರಜ್ಞೆಯನ್ನು ಗಮನಿಸಬಹುದಾಗಿದೆ.

ಜಕ್ಕಣನು ಈ ಮಾತುಗಳನ್ನು ಕೆರಳಿ ಆಡಿದ್ದನ್ನು ನೋಡಿದರೆ ಇಲ್ಲಿ ಪ್ರಮಾದವಾಗಿರುವುದು ಅನುಮತಿ

ಇಲ್ಲದೆ ಹೊರಟಿದ್ದಕ್ಕೋ ಅಥವಾ ಅವನ ಪಾಂಡಿತ್ಯವನ್ನು ಪ್ರಶ್ನಿಸಿದನೆಂಬ ಅಸಹನೆಗೋ ತಿಳಿಯುವುದಿಲ್ಲ, ಆದರೆ ಈ ಒಂದೇ ಮಾತಿನಲ್ಲಿ ಸಮಾಜದೆದುರು ಶ್ರೇಷ್ಠನೆಂದು ಬೆಳೆದು ನಿಂತಿರುವ ಒಬ್ಬ ಪಂಡಿತನನ್ನು, ಹೇಳಲು ಹೆಸರು, ಕುಲ, ಗೋತ್ರಗಳಾವುವೂ ಇಲ್ಲದ 'ಕವಡೆ ಆಡುವ ಹುಡುಗ'ನು ಪ್ರಶ್ನಿಸುವಷ್ಟು ಸಾಮಾಜಿಕ ಸ್ವಾತಂತ್ರ್ಯವನ್ನು ಅಂದಿನ ನಮ್ಮ ಕನ್ನಡ ನಾಡಿನ ರಾಜರು ನೀಡಿದ್ದರು ಎಂಬುದು ಗಮನಾರ್ಹ ಸಂಗತಿ. ನಮ್ಮ ನೆಲದ ಶ್ರೇಷ್ಠತೆ ಪ್ರತಿಯೊಬ್ಬ ಪ್ರಜೆಗೂ ಶಕ್ತಿಯನ್ನು; ಸ್ವಾತಂತ್ರ್ಯವನ್ನು ನೀಡಿರುವುದು ಇಲ್ಲಿ ಗೋಚರಿಸುತ್ತದೆ. ಪುರಾಣದಲ್ಲಿ ನೋಡಿದರೂ ಸಹ ನಮ್ಮ ನೆಲದ ಶ್ರೇಷ್ಠ ಪೌರಾಣಿಕ ಕೃತಿ 'ರಾಮಾಯಣ'ದಲ್ಲಿ ಅಗಸನೊಬ್ಬನ ಅಭಿಪ್ರಾಯವನ್ನು ಪರಿಗಣಿಸಿದ ಶ್ರೀರಾಮನು ತುಂಬು ಗರ್ಭಿಣಿಯಾಗಿದ್ದ ಸ್ವಂತ ಹೆಂಡತಿ ಸೀತಾಮಾತೆಯನ್ನು ಕಾಡಿಗೆ ಬಿಟ್ಟು ಬರುವಂತೆ ಆದೇಶಿಸುವ ಪ್ರಸಂಗ ನೆನಪಾಗುತ್ತದೆ. ಇಲ್ಲಿಯೂ ಸಹ ಅದೇ ಪ್ರಾಧಾನ್ಯತೆ ರೂವಾರಿಗೆ ದೊರೆತು ಮರುದಿನ ರಾಜನೆದುರು ಸಭೆಯೇ ನಡೆದು ಚೆನ್ನಕೇಶವನ ಮೂರ್ತಿಯಲ್ಲಿರುವ ದೋಷಪರೀಕ್ಷೆ ನಡೆಯುವಂತಾಗುತ್ತದೆ.

ಈ ಪರೀಕ್ಷೆಗೆ ಏನನ್ನು ಪಣವಾಗಿಡಬೇಕು ಎಂಬ ಪ್ರಶ್ನೆ ಬಂದಾಗ ಡಂಕಣನ "ನಿಲ್ಲಿಸಿ ಸ್ಥಪತಿಗಳೇ. ಪಣ ಸಮಾನರಲ್ಲಿರಬೇಕು. ನಾನು ನಿಮ್ಮ ಸಮಾನನಲ್ಲ. ವಯಸ್ಸಿನಲ್ಲಿ, ಅನುಭವದಲ್ಲಿ, ವಿದ್ಯೆಯಲ್ಲಿ ಕೂಡ ನಾನು ಹುಡುಗ. ಇದು ನನ್ನ ವಿದ್ಯೆಯ ಪರೀಕ್ಷೆ. ನಿಮ್ಮದಲ್ಲ. ನಿಮ್ಮ ಪಣವನ್ನು ನಾನು ಒಪ್ಪಲಾರೆ"[9] ಎಂಬ ಮಾತು ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಜ್ಞೆಯ ಪ್ರತೀಕವಾಗಿದೆ. ವಾಸ್ತವದಲ್ಲಿ ಪಾಂಡಿತ್ಯದ ಅಭಿಪ್ರಾಯಗಳ ನಡುವೆ ಪರೀಕ್ಷೆ ನಡೆಯುತ್ತಿದ್ದರೂ ಸಹ ಡಂಕಣ ಶಾಂತ ಸ್ವರೂಪಿಯೂ ವಿನಯವಂತನೂ ಆಗಿ ವರ್ತಿಸುತ್ತಾನೆ. ಆದರೆ ವಯಸ್ಸಿನಲ್ಲೂ ಅನುಭವದಲ್ಲೂ ಪಾಂಡಿತ್ಯದಲ್ಲೂ ಹಿರಿಯನೂ ಶ್ರೇಷ್ಠನೂ ಎನಿಸಿರುವ ಜಕ್ಕಣ ತಾಳ್ಮೆ ಕಳೆದುಕೊಂಡವನಾಗಿ ಅಸಭ್ಯವಾಗಿ ವರ್ತಿಸುತ್ತಾನೆ. ಚುಚ್ಚುವ ಮಾತುಗಳಿಂದ ಡಂಕಣನನ್ನು ಮೂದಲಿಸುತ್ತಾನೆ. ಇಲ್ಲಿ, ನಾವು ಕಲಿತ ವಿದ್ಯೆಯ ಮೌಲ್ಯವನ್ನು ಲೋಕವು ನಾವು ಸಮಾಜದೊಂದಿಗೆ ವ್ಯವಹರಿಸುವಾಗ ತೋರುವ ಔದಾರ್ಯ, ವಿನಯತೆ ಹಾಗೂ ಸಂಸ್ಕಾರಗಳಲ್ಲಿ ಗುರುತಿಸುತ್ತದೆ ಎಂಬ ಲೋಕಾಭಿಮತದ ನಿಲುವನ್ನು ನೆನೆಯಬೇಕಾಗುತ್ತದೆ.

ಈಗ ನಡೆಯುತ್ತಿರುವ ಪರೀಕ್ಷೆಯ ನಿರ್ಣಯವೇನೆಂದು (ಗೊಲ್ಲರ ಹುಡುಗನ ವೇಷದಲ್ಲಿರುವ) ಕೇಶವನು ಶಾಂತಲೆಯನ್ನು ಕೇಳಿದಾಗ ಆಕೆ "ಇದೆಲ್ಲ ನನಗೆ ಹ್ಯಾಗೆ ತಿಳಿದೀತಯ್ಯ? ಕೇಶವನೇ ತೋರಿಸುತ್ತಾನೆ ಇರು. ದೇವರು ಕೊಟ್ಟ ನಿರ್ಣಯ ಶತಮಾನಗಳಿಗೆ ಕೇಳಿಸುತ್ತದೆ. ಮನುಷ್ಯ ಕೊಟ್ಟ ನಿರ್ಣಯ ಹೆಚ್ಚೆಂದರೆ ಒಂದು ಗಂಟೆ ಮಾತ್ರ"[10] ಎಂದಾಗ ಗೊಲ್ಲರ ಹುಡುಗ "ಬಹಳ ದೊಡ್ಡ ಮಾತನ್ನು ಹೇಳಿದಿರಿ. ದೇವರಿಗೇ ದೇವರ ಜವಾಬ್ದಾರಿ ಹೇಳಿ ಎಚ್ಚರಿಸಿದಿರಿ. ತಾಯಿ!"[10] ಎಂದು ಹೇಳುವ ಮಾತುಗಳಲ್ಲಿ ವಾಸ್ತವದಲ್ಲಿ ನಿರ್ಣಯವೆಂಬುದು ದೇವರದೇ ಹೊರತು ಮನುಷ್ಯನದಲ್ಲ; ಮನುಷ್ಯನ ಕರ್ತವ್ಯವೇನಿದ್ದರೂ ಫಲಿತಾಂಶದ ಹಂಗಿಲ್ಲದೆ ಕರ್ಮಗಳನ್ನು ಮಾಡುವುದು ಎಂಬ ತತ್ವದರ್ಶನವಾಗುತ್ತದೆ. ಈ ಸಂದರ್ಭವು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳಿರುವ "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂಬ ಮಾತನ್ನು ನೆನಪಿಸುತ್ತದೆ.

ನಾಟಕದಲ್ಲಿ ಬರುವ ಮೇಳದವರು "ಶಿಲೆಯೊಳಗಿನ ನಿಜವ ಎಬ್ಬಿಸಿರಯ್ಯಾ ನಂಬಿದವರ ಗತಿಯೇನೆಂದು ಅಂಜಿ ಆಲಸಿಯಾಗಿ ಮಲಗಿದರೆ ಹೇಳಿರಯ್ಯಾ..."[10] ಎಂದು ಹಾಡುವ ಮೂಲಕ ಸತ್ಯ ಶಿಲೆಯೊಳಗೆ ಅಡಗಿದೆ, ಅದನ್ನು ಹೊರ ತರಬೇಕು ಎಂದು ಸಾಂಕೇತಿಕವಾಗಿ ಹಾಡುತ್ತಾರೆ. ಇಲ್ಲಿ ಶಿಲೆಯೊಳಗೆ ಇರುವ ನಿಜವೆಂದರೆ ಹೊರನೋಟಕ್ಕೆ ವಿಗ್ರಹದ ಅಂತರಂಗದಲ್ಲಿರುವ ಸತ್ಯ. ಆದರೆ

ವಾಸ್ತವದಲ್ಲಿ ಇದು ಮಾನವನ (ಜಕ್ಕಣನ) ಹೃದಯದಲ್ಲಿರುವ ಮಾನವೀಯತೆಯಾಗಿದೆ. ಯಾರು ತಮ್ಮಲ್ಲಿರುವ ಮಾನವೀಯತೆಯನ್ನು ಎಚ್ಚರ ಗೊಳಿಸುವರೋ, ಜಾಗೃತಗೊಳಿಸುವರೋ, ಅವರಿಗೆ ಸತ್ಯದ ಅರಿವಾಗುತ್ತದೆ, ನಿಜಾನಂದ ಉಂಟಾಗುತ್ತದೆ ಎಂಬುದು ಇಲ್ಲಿನ ಧ್ವನಿಯಾಗಿದೆ.

ಇದೇ ಸಂದರ್ಭದಲ್ಲಿ ರಾಣಿ ಶಾಂತಲೆ "ಬೆಳ್ಳಂ ಬೆಳಗು ನಿದ್ರೆಯಿಲ್ಲ ಸ್ವಾಮಿ. ಎರಡು ಗಾಳಿಗಳು ಎದುರೆದುರೆ ಅಪ್ಪಳಿಸಿ ಸುಂಟರಗಾಳಿಯಾಗಿ ಸುತ್ತಿ, ಕೇಶವನ ಕಲ್ಲಿನ ಕಣ್ಣಿನಲ್ಲಿ ಮಿಂಚಿನ ಬೆಳಕಾಡಿದಂತೆ ಕನಸಾಯಿತು"[10] ಎಂದು ಹೇಳುತ್ತಾಳೆ. ನಮ್ಮ ಕನ್ನಡ ನಾಡಿನ ಸಾಹಿತ್ಯ ತಂತ್ರಗಳಲ್ಲಿ ಕನಸಿನ ಬಳಕೆಯೂ ಉಂಟು. ಪ್ರಸ್ತುತ ನಾಟಕದಲ್ಲಿ 'ಗಾಳಿ', 'ಕಣ್ಣು' ಎಂಬ ಪದಗಳನ್ನು ವಿಶೇಷವಾಗಿ ಗಮನಿಸಬೇಕಾಗುತ್ತದೆ. 'ಎರಡು ಗಾಳಿಗಳು' ಎಂಬ ಮಾತಿನಲ್ಲಿ ಗಾಳಿಯಿಂದ ಜನಿಸಿದ ಗಾಳಿಯೇ ಸುಂಟರಗಾಳಿಯಾಗಿದೆ. ಎಂದರೆ 'ಒಂದು ಗಾಳಿ', 'ಎರಡು ಗಾಳಿ' ಎಂಬುದೇನೂ ಇಲ್ಲ. ಇರುವುದು ಒಂದೇ ಗಾಳಿ. ಆ ಗಾಳಿ ತನ್ನಿಂದ ತಾನೇ ದೂರವಾಗಿ ಮತ್ತೆ ಒಂದಾಗುವ ಕಥೆಯನ್ನು ಇದು ಸಾಂಕೇತಿಕವಾಗಿ ಹೇಳುತ್ತಿದೆ. ಅಲ್ಲದೆ 'ಕೇಶವನ ಕಣ್ಣು' ಎಂಬ ಮಾತನ್ನು ಗಮನಿಸಿದರೆ 'ಕಣ್ಣು'– ಸತ್ಯದರ್ಶನದ ಸಂಕೇತ. ಹಾಗಾಗಿ ಮುಂದೆ ತಂದೆ– ಮಕ್ಕಳು ನಿಜವರಿತು ಒಂದಾಗಲಿರುವ ಕಥೆಯನ್ನು ಈ ಕನಸು ರೂಪಕದಂತೆ ಸೂಚಿಸುತ್ತದೆ.

ನಾಟಕದಲ್ಲಿ ಕಂಡುಬರುವ ಮತ್ತಷ್ಟು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳೆಂದರೆ ರಾಜ ವಿಷ್ಣುವರ್ಧನನು ದೇವಾಲಯದಲ್ಲಿ ಮೂರ್ತಿ ಪ್ರತಿಷ್ಠಾಪನೆ ಮಾಡಲು ಈಗಾಗಲೇ ಮುಹೂರ್ತವನ್ನು ನಿರ್ಣಯಿಸಿದ್ದಾನೆ. ಆ ಮುಹೂರ್ತ ಬಹಳ ಹತ್ತಿರವಿದೆ. ಆದರೆ ಈಗ ಯಾವ ಮೂರ್ತಿಯನ್ನು ಪ್ರತಿಷ್ಠಾಪಿಸಬೇಕಿತ್ತೋ ಅದನ್ನೇ ಒಡೆದು ಅದರಲ್ಲಿ ಇರಬಹುದಾದ ದೋಷವನ್ನು ನೋಡಬೇಕಾಗಿದೆ. ಒಡೆದ ವಿಗ್ರಹವನ್ನು ಹೇಳಿದ ಮುಹೂರ್ತಕ್ಕೆ ಸರಿಯಾಗಿ ಮರುಸ್ಥಾಪಿಸುವುದಾದರೂ ಹೇಗೆ? ಅದು ಸಾಧ್ಯವಾಗದಿದ್ದರೆ ಈಗಾಗಲೇ ಆಮಂತ್ರಣ ನೀಡಿರುವ ನೆರೆ ರಾಜ್ಯದ ಗಣ್ಯರಿಗೆ ಏನು ಕಾರಣ ಹೇಳುವುದು? 'ಮೂರ್ತಿ ಭಂಜನೆಯಾಗಿದೆ. ಹಾಗಾಗಿ ಪ್ರತಿಷ್ಠಾಪನೆಯನ್ನು ನಿಲ್ಲಿಸಲಾಗಿದೆ' ಎಂದು ಹೇಳಲಾಗುವುದಿಲ್ಲ. ಈ ಸಂದರ್ಭವು 'ವಚನಪಾಲನೆ'ಯ ಸಂಸ್ಕೃತಿಯನ್ನು ಹೇಳುತ್ತದೆ. 'ನಾವು ಕೊಟ್ಟ ಮಾತಿಗೆ ತಪ್ಪಬಾರದು; ನೀಡಿದ ವಚನಕ್ಕೆ ಬದ್ಧರಾಗಿರಬೇಕು' ಎಂಬ ಆಶಯವನ್ನು ಸಾರುತ್ತದೆ. ಅದರಲ್ಲೂ ರಾಜರೇ ವಚನಭ್ರಷ್ಟರಾದರೆ ಪ್ರಜೆಗಳ ಗತಿ ಏನು? ಅವರಲ್ಲಿ ಲೋಭಗಳು ಉದ್ಭವವಾಗುತ್ತವೆ; ರಾಜ್ಯದ ನೈತಿಕತೆ ಕುಸಿಯುತ್ತದೆ. ಈ ಎಲ್ಲಾ ಕಾರಣಗಳಿಂದ ಹೆದರಿದ ಮಹಾರಾಜನು 'ಡಂಕಣ ಮತ್ತು ಜಕ್ಕಣ ಇಬ್ಬರೂ ಸೇರಿ ಈಗಾಗಲೇ ಹೇಳಿರುವ ಮುಹೂರ್ತಕ್ಕೆ ಸರಿಯಾಗಿ ಹೊಸ ಮೂರ್ತಿಯೊಂದನ್ನು ನಿರ್ಮಿಸಬೇಕು' ಎಂಬ ಹೊಣೆಯನ್ನು ಹೊರಿಸುತ್ತಾನೆ.

ಇಲ್ಲಿ ರಾಜನಾದವನೂ ಸಹ ತಾನೇ ವಿಧಿಸಿದ ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾಗಿ ನಡೆದುಕೊಳ್ಳುವ ರಾಜಕೀಯ ಪ್ರಜ್ಞೆ ಗೋಚರವಾಗುತ್ತದೆ. ಅಲ್ಲದೆ ರಾಣಿ ಶಾಂತಲೆಯ ವ್ಯಕ್ತಿತ್ವವನ್ನು ಕುರಿತು ಹೇಳುವಾಗ ರಾಜನು "ಅವರಿಗೆ ಶಿಲ್ಪಶಾಸ್ತ್ರವೂ ಗೊತ್ತು; ಮನುಷ್ಯ ವ್ಯಕ್ತಿತ್ವದ ಶಿಲ್ಪವೂ ಗೊತ್ತು; ಎರಡರ ಅಂತರಂಗ ಬಹಿರಂಗಗಳೂ ಗೊತ್ತು"[11] ಎಂದು ಹೇಳಿರುವಲ್ಲಿ ರಾಣಿಯಾದವರಿಗೆ ಇರಬೇಕಾದ ಗುಣಗಳನ್ನು ಕಾಣುತ್ತೇವೆ. ಅಲ್ಲದೆ ರಾಜನು ತನ್ನ ಹೆಂಡತಿಯನ್ನು ಗೌರವದಿಂದ 'ಅವರು' ಎಂದು ಸಂಬೋಧಿಸಿರುವುದು ರಾಜನು ತನ್ನ ಮಡದಿಗೆ (ಮಹಿಳೆಗೆ) ನೀಡಿದ್ದ ಸ್ಥಾನಮಾನಗಳ ಕುರಿತು ಬೆಳಕು ಚೆಲ್ಲುತ್ತದೆ.

ನಾಟಕವು ಮುಂದುವರಿದಂತೆ ಸಾಂಸ್ಕೃತಿಕ ಪ್ರಜ್ಞೆಯನ್ನು ಸಾರುವ ಮತ್ತಷ್ಟು ಅಂಶಗಳು ನಮಗೆ ಕಾಣಸಿಗುತ್ತವೆ. ರಾಜ್ಯವೆಂದರೇನು? ಅದರ ಕರ್ತವ್ಯವೇನು? ಎಂದು ಹೇಳುವ ಸಂದರ್ಭದಲ್ಲಿ

ರಾಜ ವಿಷ್ಣುವರ್ಧನನು "ರಾಜ್ಯವೆಂದರೆ ಶತ್ರುಗಳನ್ನು ಗೆದ್ದು ಬರೀ ಬೊಕ್ಕಸ ತುಂಬಿಕೊಳ್ಳುವುದಲ್ಲ, ರಾಜ್ಯದ ಸೀಮೆಯ ವಿಸ್ತಾರವೂ ಅಲ್ಲ, ವೈಭವ ಪ್ರದರ್ಶನವೂ ಅಲ್ಲ. ಪ್ರಜೆಗಳನ್ನು ನೆಮ್ಮದಿಯಿಂದ ಇಡುವುದೇ ರಾಜ್ಯ"[12] ಎಂದು ವ್ಯಾಖ್ಯಾನಿಸಿರುವುದು ಅರಸನು ಪ್ರಜೆಗಳಿಗೆ ತೋರಿಸುತ್ತಿದ್ದ ಮನ್ನಣೆಯನ್ನು ಹಾಗೂ ರಾಜನ ಹೃದಯವೈಶಾಲ್ಯತೆಯನ್ನು ತೋರಿಸುತ್ತದೆ. ಈ ಮಾತಿನಂತೆ ಅವರು ಗೂಢಚಾರರ ಸಹಾಯದಿಂದ ಜಕ್ಕಣನ ವೃತ್ತಾಂತವನ್ನು ತಿಳಿದಿರುತ್ತಾರೆ. ಅದಲ್ಲದೆ ಬರೆದಿಟ್ಟ ಶಾಸ್ತ್ರವನ್ನು ನಂಬಿ ಹೆಂಡತಿ ಮಕ್ಕಳಿಂದ ದೂರಾಗಿದ್ದ ಜಕ್ಕಣನ ಅಹಂಕಾರವನ್ನು ಹೋಗಲಾಡಿಸಿ ಸುತ–ಪತ್ನಿಯರೊಡನೆ ಒಂದಾಗುವಂತೆ ಮಾಡುತ್ತಾರೆ.

ಒಟ್ಟಿನಲ್ಲಿ ಚನ್ನಕೇಶವನ ಮೂರ್ತಿಯನ್ನು ಒಡೆದಾಗ ಅದರೊಳಗಿರುವ ಕಪ್ಪೆ, ಮರಳು, ನೀರು ಹೊರಬರುವಂತೆ ಜಕ್ಕಣನ ಹೃದಯದಲ್ಲಿದ್ದ ಕಲ್ಮಶ ಹೊರದೂಡಲ್ಪಟ್ಟು ಆತನಿಗೆ ಸತ್ಯದ ಅರಿವಾಗುತ್ತದೆ. ಆತನ ದೃಷ್ಟಿಗೆ ಅಂಟಿದ್ದ ಪೊರೆ ದೂರವಾಗಿ ಹೆಂಡತಿ, ಮಗ ಮತ್ತು ಕೇಶವನನ್ನು ಗುರುತಿಸುವಂತಾಗುತ್ತಾನೆ. ಹೀಗೆ ಅಹಂಕಾರವನ್ನು ಅಳಿಸಿ ಮಾನವೀಯತೆಯನ್ನು ಮೂಡಿಸುವ ವಿಶಿಷ್ಟ ಗುಣಗಳಿಂದ ಕೂಡಿರುವ ಈ ನಾಟಕ ಶುಭ ಪ್ರಸಂಗದೊಂದಿಗೆ ಅಂತ್ಯವಾಗುತ್ತದೆ. ನಾಟಕದಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕ ಮೌಲ್ಯಗಳು ಹೇರಳವಾಗಿ ಮಿಳಿತಗೊಂಡು ಸಂಸ್ಕೃತಿಯ ಮಹತ್ವವನ್ನು ಸಾರುವ ಅನೇಕ ಅಂಶಗಳನ್ನು ಒಳಗೊಂಡಿದೆ. ಇದರೊಂದಿಗೆ ಪಾಂಡಿತ್ಯ, ಶಾಸ್ತ್ರ, ಮಾನವೀಯತೆಗಳ ಅರ್ಥ ಮತ್ತು ಆಶಯಗಳನ್ನು ಕುರಿತು ಓದುಗರು ಜಿಜ್ಞಾಸೆ ಮಾಡುವಂತೆ ಪ್ರೇರೇಪಿಸುತ್ತದೆ.

**ಕೊನೆ ಟಿಪ್ಪಣಿ:**

1. ತಿಪ್ಪೇರುದ್ರಸ್ವಾಮಿ ಎಚ್. (2010). *ಕರ್ನಾಟಕ ಸಂಸ್ಕೃತಿ ಸಮೀಕ್ಷೆ.* ಪು.ಸಂ. 12
2. ಅದೇ. ಪು.ಸಂ.14
3. ಅದೇ. ಪು.ಸಂ.12
4. ನರಸಿಂಹಾಚಾರ್ ಡಿ. ಎಲ್. (2015). *ಪೀಠಿಕೆಗಳು ಮತ್ತು ಲೇಖನಗಳು.* ಪು.ಸಂ.1009
5. ಚಂದ್ರಶೇಖರ ಕಂಬಾರ. (2016). *ಜಕ್ಕಣ ಮತ್ತು ಇತರ ಏಕಾಂಕ ನಾಟಕಗಳು.* ಪು.ಸಂ.11
6. ಅದೇ. ಪು.ಸಂ.15
7. ಅದೇ. ಪು.ಸಂ.17
8. ಅದೇ. ಪು.ಸಂ.20
9. ಅದೇ. ಪು.ಸಂ.21
10. ಅದೇ. ಪು.ಸಂ.23
11. ಅದೇ.ಪು.ಸಂ.25
12. ಅದೇ.ಪು.ಸಂ.26

**ಆಕರ ಗ್ರಂಥ**


- ಚಂದ್ರಶೇಖರ ಕಂಬಾರ. (2016). *ಜಕ್ಕಣ ಮತ್ತು ಇತರ ಏಕಾಂಕ ನಾಟಕಗಳು.* (ದ್ವಿತೀಯ ಮುದ್ರಣ), ಅಂಕಿತ ಪುಸ್ತಕ.


**ಪರಾಮರ್ಶನ ಗ್ರಂಥಗಳು**


- ಸಿ.ಪಿ.ಕೆ. (ಸಂ.). (2015). ಯಶೋಧರ ಚರಿತ. (ಆರನೆಯ ಮುದ್ರಣ), ನಾಗಾರ್ಜುನ ಎಂಟರ್‌ಪ್ರೈಸಸ್.
- ಚಂದ್ರಶೇಖರ ಕಂಬಾರ. (2011). *ದೇಶೀಯ ಚಿಂತನ.* (ಎರಡನೆಯ ಮುದ್ರಣ). ಅಂಕಿತ ಪುಸ್ತಕ.
- ಕುವೆಂಪು. (2017). *ಶ್ರೀ ರಾಮಾಯಣ ದರ್ಶನಂ.* ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.
- ಕುವೆಂಪು. (2017). *ಕೋಗಿಲೆ ಮತ್ತು ಸೋವಿಯಟ್ ರಷ್ಯಾ.* (ಎಂಟನೆಯ ಮುದ್ರಣ) ಉದಯ ರವಿ ಪ್ರಕಾಶನ

- ನರಸಿಂಹಾಚಾರ್ ಡಿ. ಎಲ್. (2015). *ಪೀಠಿಕೆಗಳು ಮತ್ತು ಲೇಖನಗಳು.* (ತೃತೀಯ ಮುದ್ರಣ), ಡಿ.ವಿ.ಕೆ. ಮೂರ್ತಿ ಪ್ರಕಾಶನ.
- ಸಿದ್ದಲಿಂಗಯ್ಯ ಜಿ.ಎಸ್. ಮತ್ತು ಕೃಷ್ಣಯ್ಯ ಎಂ, ಎಚ್. (ಸಂ.) (2006). *ಸಾಲು ದೀಪಗಳು.* (ಐದನೆಯ ಮುದ್ರಣ). ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಸ್ವಾಮಿ ಆದಿದೇವಾನಂದ. (2008). ಶ್ರೀಮದ್‌ಭಗವದ್ಗೀತಾ. (ಹದಿನಾರನೆಯ ಮುದ್ರಣ), ಶ್ರೀ ರಾಮಕೃಷ್ಣ ಆಶ್ರಮ.
- ತಿಪ್ಪೇರುದ್ರಸ್ವಾಮಿ ಎಚ್. (2010). *ಕರ್ನಾಟಕ ಸಂಸ್ಕೃತಿ ಸಮೀಕ್ಷೆ.* (ಹತ್ತನೆಯ ಮುದ್ರಣ) ಡಿ.ವಿ.ಕೆ. ಮೂರ್ತಿ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp. 9-18
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಭಾರತಕ್ಕೆ ಚಬಹಾರ್ ಬಂದರಿನ ಅಭಿವೃದ್ಧಿ ಮತ್ತು ಮಹತ್ವ

**ಶಿವು ಸಿ**
ಸಂಶೋಧನಾ ವಿದ್ಯಾರ್ಥಿ, ಪಶ್ಚಿಮ ಏಷ್ಯಾ ಅಧ್ಯಯನ, ಇತಿಹಾಸ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

***Abstract:***
*ಭಾರತ ಮತ್ತು ಇರಾನ್ ಜಾಗತಿಕ ರಾಜಕೀಯದಲ್ಲಿ ಏಷ್ಯಾದ ಪ್ರಮುಖ ಶಕ್ತಿಗಳಾಗಿ ಗುರುತಿಸಿಕೊಂಡಿರುವುದರಿಂದ ಎರಡೂ ರಾಷ್ಟ್ರಗಳು ಪಶ್ಚಿಮ ಏಷ್ಯಾ, ದಕ್ಷಿಣ ಏಷ್ಯಾ, ಮತ್ತು ಮಧ್ಯ ಏಷ್ಯಾ ರಾಷ್ಟ್ರಗಳ ರಾಜಕೀಯ ಮತ್ತು ಅದರಿಂದಾಚೆಗೂ ತನ್ನ ಪ್ರಭಾವವನ್ನು ಬೀರಬಲ್ಲ ಶಕ್ತಿಗಳಾಗಿದ್ದು ಜಾಗತಿಕ ಮಟ್ಟದಲ್ಲಿ ಬದಲಾವಣೆಗೆ ಕಾರಣಗಳಾಗಬಲ್ಲವುಗಳಾಗಿವೆ. ಪ್ರಪಂಚದ ವಾಣಿಜ್ಯ ಚಟುವಟಿಕೆಗಳು ಕ್ಷಿಪ್ರ ಬೆಳವಣಿಗೆಯನ್ನು ಹೊಂದುತ್ತಿರುವ ಈ ಸಂದರ್ಭದಲ್ಲಿ ಸಾಗರೋತ್ತರ ರಾಜಕೀಯವು ಸಂಕೀರ್ಣ ಮತ್ತು ಬಹುಮುಖಿಯಾಗುತ್ತಿವೆ. ಇದಕ್ಕೆ ಕಾರಣ ವ್ಯಾಪಾರ. ಸಮುದ್ರಮಾರ್ಗಗಳು ವ್ಯಾಪಾರದಲ್ಲಿ ಬಹುಮುಖ್ಯವಾಗಿದ್ದು ವಿಶ್ವದ ಆರ್ಥಿಕ ಚಟುವಟಿಕೆಗಳ ಪ್ರಮುಖ ಮೂಲವಾಗಿದೆ. ಈ ನಿಟ್ಟಿನಲ್ಲಿ ಸಾಗರೋತ್ತರ ವ್ಯಾಪಾರ ಮಾರ್ಗಗಳಲ್ಲಿ ಬಂದರುಗಳು ಅಥವಾ ಹಡಗು ನಿಲ್ದಾಣಗಳು ಅತ್ಯಂತ ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಲೇಖನದಲ್ಲಿ ಚಬಹಾರ್ ಬಂದರಿನ ಅಭಿವೃದ್ಧಿ ಭಾರತಕ್ಕೆ ಹೇಗೆ ಸಹಾಯಕವಾಗಬಲ್ಲದು ಎಂಬುದನ್ನು ಅಧ್ಯಯನಿಸಲಾಗಿದೆ.*

**Keywords:** *ಚಬಹಾರ್ ಬಂದರು, ಭಾರತ, ಇರಾನ್, ಅಂತರಾಷ್ಟ್ರೀಯ ವ್ಯಾಪಾರ, ಅಭಿವೃದ್ಧಿ ಆರ್ಥಿಕತೆ.*

## ಪೀಠಿಕೆ

ಭಾರತವು ಜಾಗತಿಕ ಆರ್ಥಿಕ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸುವ ರಾಷ್ಟ್ರಗಳಲ್ಲಿ ಒಂದಾಗಿದೆ. ಭಾರತವು ಅನೇಕ ಬಂದರುಗಳನ್ನು ಹೊದಿದ್ದು ತನ್ನ ಸುತ್ತಮುತ್ತಲ ದೇಶಗಳೊಂದಿಗೆ ಬಹಳ ಹಿಂದಿನಿಂದಲೂ ಸಾಗರೋತ್ತರ ವ್ಯಾಪಾರದಲ್ಲಿ ತನ್ನದೇ ಆದ ಪ್ರಾಬಲ್ಯವನ್ನು ಹೊಂದಿದೆ. ಅದರಲ್ಲಿ ಇರಾನ್ ಜೊತೆಗಿನ ವ್ಯಾಪಾರ ಸಂಬಂಧವು ಪ್ರಸ್ತುತ ದಿನಗಳಲ್ಲಿ ಗಮನಿಸಬೇಕಾದ ಸಂಗತಿಯಾಗಿದೆ. ಅಂತರರಾಷ್ಟ್ರೀಯ ಸಮುದ್ರ ವ್ಯಾಪಾರದಲ್ಲಿ ಇರಾನಿನ ಚಬಹಾರ್ ಬಂದರು ಅತ್ಯಂತ ಆಯಕಟ್ಟಿನ ಪ್ರದೇಶದಲ್ಲಿದ್ದು ಪ್ರಪಂಚದ ವಿವಿಧ ದೇಶಗಳ ಸಮುದ್ರ ವ್ಯಾಪಾರವು ಈ ಮಾರ್ಗದಲ್ಲಿ ನಡೆಯುತ್ತದೆ. ಈ ಕಾರಣದಿಂದಾಗಿ ಅನೇಕ ಬಲಾಢ್ಯ ರಾಷ್ಟ್ರಗಳು ಈ ಪ್ರದೇಶದ ಮೇಲೆ ತಮ್ಮ ಪ್ರಾಬಲ್ಯವನ್ನು ಸಾಧಿಸಲು ಪ್ರಯತ್ನಿಸುತ್ತಿರುತ್ತವೆ. ಕಳೆದ ದಶಕವನ್ನು ಗಮನಿಸಿದಾಗ ಹಿಂದೂ ಮಹಾಸಾಗರದಲ್ಲಿ ಏಷ್ಯಾದ ಎರಡು ದೈತ್ಯ ಶಕ್ತಿಗಳಾದ ಭಾರತ ಮತ್ತು ಚೀನಾ ದೇಶಗಳು ಬಂದರುಗಳ ನಿರ್ಮಾಣದಲ್ಲಿ ಪೈಪೋಟಿಗೆ ಇಳಿದಿರುವುದನ್ನು ನೋಡಬಹುದು. ಇದು ಚಬಹಾರ್ ಬಂದರು

***Please cite this article as:*** ಶಿವು ಸಿ. (2024). ಭಾರತಕ್ಕೆ ಚಬಹಾರ್ ಬಂದರಿನ ಅಭಿವೃದ್ಧಿ ಮತ್ತು ಮಹತ್ವ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 2(6), 9–18.

ನಿರ್ಮಾಣದ ಮೇಲೆ ತನ್ನ ಪ್ರಭಾವ ಬೀರಿರುವುದನ್ನು ಕಾಣಬಹುದು. ಭಾರತದ ಹಿತಾಸಕ್ತಿಗೂ ಕೂಡ ಚಬಹಾರ್ ಬಂದರು ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಭೌಗೋಳಿಕವಾಗಿ ಮಹತ್ವದ್ದಾಗಿರುವುದರಿಂದ ಚಬಹಾರ್ ಬಂದರಿನ ಅಭಿವೃದ್ಧಿ ಅತ್ಯಂತ ಮಹತ್ವ ಮತ್ತು ಕುತೂಹಲಕಾರಿಯದ ಅಂಶವಾಗಿದೆ.

**ಚಬಹಾರ್ ಬಂದರಿನ ಭೌಗೋಳಿಕ ಅಂಶಗಳು**

ಚಬಹಾರ್ ಬಂದರು ಇರಾನಿನ ಆಗ್ನೇಯ ಸಿಸ್ತಾನ್ ಮತ್ತು ಬಲೂಚಿಸ್ತಾನ್ ಪ್ರಾಂತ್ಯದಲ್ಲಿನ ಮಕ್ರಾನ್ ಕಣಿವೆಯಲ್ಲಿದೆ. ಈ ಕರಾವಳಿ ಅಭಿವೃದ್ಧಿಯಾಗದ ಮುಕ್ತ ವ್ಯಾಪಾರ ಮತ್ತು ಕೈಗಾರಿಕಾ ವಲಯವಾಗಿದ್ದು ಒಮನ್ ಕೊಲ್ಲಿ, ಹಾರ್ಮುಜ್ ಜಲಸಂಧಿಗೆ ಹತ್ತಿರವಿದೆ ಹಾಗೂ ಅರಬ್ಬಿ ಸಮುದ್ರ ಮತ್ತು ಹಿಂದೂ ಮಹಾಸಾಗರಕ್ಕೆ ನೇರ ಸಂಪರ್ಕವನ್ನು ಕಲ್ಪಿಸುತ್ತದೆ. ಚಬಹಾರ್ ಇರಾನಿನ ಅತ್ಯಂತ ಆಳವಾದ ಮತ್ತು ಏಕೈಕ ಸಾಗರ ಬಂದರು ಆಗಿದ್ದು, ಕಲಂತರಿ ಮತ್ತು ಶಾಹಿದ್ ಬೆಹೆಷ್ಟಿ ಎಂಬ ಎರಡು ಟರ್ಮಿನಲ್ (ಹಡಗು ಕಟ್ಟೆ)ಗಳನ್ನು ಹೊಂದಿದೆ. ಇವು ಸಾಗರೋತ್ತರ ವ್ಯಾಪಾರ ಮಾರ್ಗಗಳಿಗೆ ನೇರಸಂಪರ್ಕವನ್ನು ಹೊಂದಿದ್ದು ಸಿಸ್ತಾನ್ ಮತ್ತು ಬಲೂಚಿಸ್ತಾನ್ ಪ್ರಾಂತ್ಯದ ರಾಜಧಾನಿ ಜಹೆದಾನ್‌ನಿಂದ 700ಕಿ.ಮಿ ದೂರ, ಅಫ್ಘಾನ್ ಗಡಿಗೆ ಸಮೀಪವಿರುವ ನಗರವಾದ ಮಿಲಾಕ್ ನಿಂದ 950 ಕಿ.ಮಿ ದೂರದಲ್ಲಿದೆ. ಹಾಗೆಯೇ ದುಬೈಗೆ ಸಮುದ್ರದ ಅಂತರವು 353 ನಾಟಿಕಲ್ ಮೈಲು (654 ಕಿ.ಮಿ), ಪಾಕಿಸ್ತಾನದ ಗ್ವಾದರ್ ಬಂದರಿಗೆ ಕೇವಲ 170ಕಿ.ಮೀ, ಮತ್ತು ಕರಾಚಿಗೆ 456 ನಾಟಿಕಲ್ ಮೈಲು (845 ಕಿ.ಮಿ) ಹಾಗೂ ಭಾರತದ ಮುಂಬೈಗೆ 843 ನಾಟಿಕಲ್ ಮೈಲು (1560ಕಿ.ಮಿ) ದೂರದಲ್ಲಿದೆ. ಅಲ್ಲದೆ ಮಧ್ಯ ಏಷ್ಯಾದ ತುರ್ಕ್‌ಮೆನಿಸ್ತಾನ, ಉಜ್ಬೇಕಿಸ್ತಾನ ಮತ್ತು ಇತರೆ ದೇಶಗಳಿಗೆ ಹತ್ತಿರವಾಗಿರುವುದರಿಂದ ಈ ದೇಶಗಳಿಗೆ ಚಬಹಾರ್ ಬಂದರನ್ನು "ಗೋಲ್ಡನ್ ಗೇಟ್" ಎಂತಲೂ ಕರೆಯಲಾಗುತ್ತದೆ.[1]

ಚಬಹಾರ್ ಬಂದರು ಇರಾನಿನ ಬಂದರುಗಳು ಮತ್ತು ಸಾಗರ ಸಂಸ್ಥೆ ಒಡೆತನದಲ್ಲಿದ್ದು, ಈ ಬಂದರಿನ ಗಾತ್ರವು ಸುಮಾರು 480 ಹೆಕ್ಟೇರ್ ಇದ್ದು ಭೂ ಪ್ರದೇಶದ ಗಾತ್ರ ಸುಮಾರು 440 ಹೆಕ್ಟೇರ್‌ವರೆಗೆ ಹಬ್ಬಿದೆ. 10 ಬರ್ತ್‌ಗಳನ್ನು ಹೊಂದಿದ್ದು 1000ಕ್ಕಿಂತಲೂ ಅಧಿಕ ನೌಕರರು ಕಾರ್ಯನಿರ್ವಹಿಸುತ್ತಿದ್ದಾರೆ. 2015ರ ಮಾಹಿತಿಯ ಪ್ರಕಾರ ಈ ಬಂದರು ವಾರ್ಷಿಕವಾಗಿ ಸುಮಾರು 2.1 ಮಿಲಿಯನ್ ಟನ್ ಸರಕುಗಳನ್ನು ನಿರ್ವಹಿಸಿದ್ದು ಇದನ್ನು 2016ರ ವೇಳೆಗೆ 8.5 ಮಿಲಿಯನ್ ಟನ್‌ಗಳಿಗೆ ಮತ್ತು ಭವಿಷ್ಯದಲ್ಲಿ 86 ಮಿಲಿಯನ್ ಟನ್ ನಿರ್ವಹಿಸುವ ಗುರಿಯನ್ನು ಹೊಂದಿದೆ.

**ಹಿನ್ನೆಲೆ**

ಚಬಹಾರ್ ಬಂದರಿನ ಅಭಿವೃದ್ಧಿಯನ್ನು ಮೊದಲು 1973ರಲ್ಲಿ ಇರಾನಿನ ಕೊನೆಯ ಶಾಹ ಪ್ರಸ್ತಾಪಿಸಿದರು. ಆದರೂ 1979ರ ಇರಾನಿನ ಕ್ರಾಂತಿಯಿಂದ ಈ ಬಂದರಿನ ಅಭಿವೃದ್ಧಿಕಾರ್ಯ ತಡವಾಗಿ ಪ್ರಾರಂಭವಾಯಿತು. 1983ರಲ್ಲಿ ಸಂಭವಿಸಿದ ಇರಾನ್ – ಇರಾಕ್ ಯುದ್ಧದ ಸಂದರ್ಭದಲ್ಲಿ ಚಬಹಾರ್ ಬಂದರಿನ ಮೊದಲ ಹಂತವನ್ನು ತೆರೆಯಲಾಯಿತು. ಇದಕ್ಕೆ ಕಾರಣವೇನೆಂದರೆ ಪರ್ಶಿಯನ್ ಕೊಲ್ಲಿಯಲ್ಲಿರುವ ಬಂದರುಗಳು ಆಗಿಂದಾಗ್ಗೆ ಇರಾಕಿನ ವಾಯುದಾಳಿಗೆ ಗುರಿಯಾಗುತ್ತಿದುದರಿಂದ ಇರಾನಿನ ಅಂತರರಾಷ್ಟ್ರೀಯ ವ್ಯಾಪಾರಗಳ ಮೇಲೆ ವ್ಯತಿರಿಕ್ತ ಪರಿಣಾಮವನ್ನು ಬೀರತೊಡಗಿತು. ಆದ್ದರಿಂದ ಈ ಬಂದರುಗಳ ಅವಲಂಬನೆಯನ್ನು ಕಡಿಮೆ ಮಾಡಿ ತನ್ನ ಸಾಗರೋತ್ತರ ವ್ಯಾಪಾರವನ್ನು ಪೂರ್ವದ ಪಾಕಿಸ್ತಾನ ಗಡಿಯ ಕಡೆಗೆ ಬದಲಾಯಿಸಿತು. ಇದು ಭಾರತವು ಪಾಕಿಸ್ತಾನದ ಕಾರ್ಯಚಟುವಟಿಕೆಗಳ ಮೇಲೆ ನಿಗಾ ಇಡಲು ಚಬಹಾರ್ ಬಂದರಿನ ಅಭಿವೃದ್ಧಿಯ ಕಡೆ ಆಸಕ್ತಿಯನ್ನು ಮೂಡಿಸಿತು. ಆದ ಕಾರಣ ಭಾರತವು

ಚಬಹಾರ್ ಬಂದರಿನ ಅಭಿವೃದ್ಧಿಯ ಪ್ರಸ್ತಾವವನ್ನು ಇರಾನ್ ಮುಂದಿಟ್ಟಿತು. ಇರಾನಿಗೂ ಕೂಡ ಅಂತರರಾಷ್ಟ್ರೀಯ ಮಟ್ಟದಲ್ಲಿ ತನ್ನ ವಿರುದ್ಧ ಬಾಹ್ಯಶಕ್ತಿಗಳ ಪಿತೂರಿ ಹೆಚ್ಚಿದ ಕಾರಣ ಭವಿಷ್ಯದಲ್ಲಿ ಎಲ್ಲಿ ತನ್ನ ಆರ್ಥಿಕ ಮೂಲಗಳು ನಷ್ಟವನ್ನು ಅನುಭವಿಸುದೋ ಎಂಬ ಕಾರಣಕ್ಕೆ ದಕ್ಷಿಣ ಏಷ್ಯಾ ರಾಷ್ಟ್ರಗಳ ಪಾಲುದಾರಿಕೆಯನ್ನು ಹೆಚ್ಚಿಸಿ ಅವು ತನ್ನ ಜೊತೆಯಲ್ಲಿಯೇ ಮುಂದುವರೆಯಬೇಕೆಂಬ ಹಿತಾಸಕ್ತಿಯ ಚಿಂತನೆಯಿಂದ ಏಷ್ಯಾದ ಬಲಿಷ್ಠ ರಾಷ್ಟ್ರಗಳಾದ ಭಾರತ ಮತ್ತು ಚೀನಾದೊಂದಿಗಿನ ಸಂಬಂಧವನ್ನು ಗಟ್ಟಿಗೊಳಿಸುವ ಪ್ರಯತ್ನದ ಭಾಗವಾಗಿ ಭಾರತವು ನೀಡಿದ ಚಬಹಾರ್ ಬಂದರಿನ ಅಭಿವೃದ್ಧಿಯ ಪ್ರಸ್ತಾವಕ್ಕೆ ಒಪ್ಪಿಗೆ ಸೂಚಿಸಿತು.

ಇರಾನ್ 1990ರಲ್ಲಿ ಭಾರತದ ಗುತ್ತಿಗೆದಾರರಿಗೆ ಕೆಲಸವನ್ನು ಶುರು ಮಾಡಲು ಅನುಮತಿ ನೀಡಿತು.[2] ಸಾಕಷ್ಟು ಚರ್ಚೆಯ ನಂತರ ಭಾರತೀಯ ಗುತ್ತಿಗೆದಾರರು ಇರಾನಿನ ದಕ್ಷಿಣ ಕರಾವಳಿಯ ನಗರವಾದ ಚಬಹಾರ್ ಪ್ರದೇಶವು ಬಂದರು ನಿರ್ಮಾಣಕ್ಕೆ ಸೂಕ್ತವಾದ ಸ್ಥಳವೆಂದು ನಿರ್ಧರಿಸಿ ಕೆಲಸ ಆರಂಭಿಸಿದರು. ಅದಾಗ್ಯೂ ಇರಾನ್ ಕಡೆಯಿಂದ ಹಣಕಾಸಿನ ಕೊರತೆಯಿಂದಾಗಿ ಈ ಯೋಜನೆಯನ್ನು ಸ್ಥಗಿತಗೊಳಿಸಲಾಯಿತು.

ಕೆಲವು ವರ್ಷಗಳನಂತರ ಅಂದರೆ 2003ರಲ್ಲಿ ಇರಾನಿನ ಅಧ್ಯಕ್ಷ ಮೊಹಮ್ಮದ್ ಕತಮಿಯವರು ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಭಾರತದ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿರವರು ಇರಾನಿನೊಂದಿಗೆ ಚಬಹಾರ್‌ನ ಶಾಹಿದ್ ಬೆಹೆಷ್ಟಿ ಟರ್ಮಿನಲ್‌ನ ನವೀಕರಣ ಒಪ್ಪಂದಕ್ಕೆ ಸಹಿ ಹಾಕಿದರು. ಆದರೆ ಇರಾನಿನ ಪರಮಾಣು ಕಾರ್ಯಕ್ರಮದ ವಿವಾದದಿಂದಾಗಿ ಇರಾನ್ ಮೇಲೆ ಅಂತರರಾಷ್ಟ್ರೀಯ ನಿರ್ಬಂಧಗಳನ್ನು ವಿಧಿಸಿದ ನಂತರ ಈ ಯೋಜನೆಯ ಅನುಷ್ಠಾನವು ವಿಳಂಬವಾಯಿತು. ನಂತರದ ದಿನಗಳಲ್ಲಿ ಚಬಹಾರ್ ಬಂದರಿನ ಅಭಿವೃದ್ಧಿಗಾಗಿ ಭಾರತವು $100 ಮಿಲಿಯನ್ ಡಾಲರ್ ಹೂಡಿಕೆ ಮಾಡುವುದಾಗಿ ವಾಗ್ದಾನ ಮಾಡಿತು. ಆದರೆ 2015ರಲ್ಲಿ ಇರಾನಿನ ಪರಮಾಣು ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಯು.ಎನ್ ಸೆಕ್ಯೂರಿಟಿ ಕೌನ್ಸಿಲ್‌ನ ಖಾಯಂ ಸದಸ್ಯ ರಾಷ್ಟ್ರಗಳು ಮತ್ತು ಜರ್ಮನಿ, ಹಾಗೂ ಯುರೋಪಿಯನ್ ಒಕ್ಕೂಟದ ನಡುವಿನ ಮಾತುಕತೆ ಫಲಿಸದ ಕಾರಣ ಮತ್ತೆ ಇರಾನ್ ಮೇಲೆ ನಿರ್ಬಂದಗಳನ್ನು ವಿಧಿಸಲಾಯಿತು. ಇದರ ಪರಿಣಾಮವಾಗಿ ಭಾರತದ ಮಹತ್ವಾಕಾಂಕ್ಷೆಯ ಯೋಜನೆಯು ಮತ್ತೆ ಸ್ಥಗಿತಗೊಂಡಿತು.[3]

2016ರಲ್ಲಿ ನರೇಂದ್ರಮೋದಿಯವರು ಟೆಹ್ರಾನ್‌ಗೆ ಭೇಟಿನೀಡಿದ ಸಂದರ್ಭದಲ್ಲಿ ಇರಾನ್, ಭಾರತ ಮತ್ತು ಅಫ್ಘಾನಿಸ್ತಾನದ ನಡುವೆ ಮಾತುಕತೆ ಫಲಪ್ರದವಾಗಿ ಚಬಹಾರ್ ಬಂದರನ್ನು ವ್ಯಾಪಾರ ಮತ್ತು ಸಾರಿಗೆ ಹೆದ್ದಾರಿಯನ್ನಾಗಿ ಅಭಿವೃದ್ಧಿಪಡಿಸುವ, ಮತ್ತು ಚಬಹಾರ್‌ನಿಂದ ಅಫ್ಘಾನಿಸ್ತಾನಕ್ಕೆ ಹೆದ್ದಾರಿ ನಿರ್ಮಿಸುವ ಪ್ರಸ್ತಾವಕ್ಕೆ ಸಹಿ ಹಾಕಿದರು. ನಂತರ 2019ರಲ್ಲಿ ಇರಾನ್ ಮೇಲಿನ ನಿರ್ಬಂಧಗಳು ಮುಂದೂಡಲ್ಪಟ್ಟಿದರಿಂದ ಹಾಗೂ 2021ರಲ್ಲಿನ ಅಫ್ಘಾನ್ ಸರ್ಕಾರದ ಪತನದಿಂದಾಗಿ ಈ ಯೋಜನೆಯ ಅಭಿವೃದ್ಧಿ ಮತ್ತಷ್ಟು ಜಟಿಲವಾಗತೊಡಗಿತು.[4] ಇತ್ತೀಚಿನ ಬೆಳವಣಿಗೆಗಳನ್ನು ಗಮನಿಸಿದಾಗ ಭಾರತವು ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಬಲ ಆರ್ಥಿಕ ಶಕ್ತಿಯಾಗಿ ಬೆಳೆಯುತ್ತಿರುವುದರಿಂದ ತನ್ನ ಬೆಳೆಯುತ್ತಿರುವ ಅರ್ಥವ್ಯವಸ್ಥೆಯ ಬೇಡಿಕೆಯನ್ನು ಪೂರೈಸುವ ಅನಿವಾರ್ಯತೆಯಿಂದಾಗಿ ಯಾವುದೇ ಬಾಹ್ಯಶಕ್ತಿಯ ಒತ್ತಡಕ್ಕೆ ಮಣಿಯದೆ ಎಚ್ಚರಿಕೆಯಿಂದ ತನ್ನದೇ ಆದ ಸ್ವಂತನಿಲುವುಗಳನ್ನು ತಳೆಯುತ್ತಿದೆ. ಇದು ಚಬಹಾರ್ ಬಂದರಿನ ಅಭಿವೃದ್ಧಿಯ ವಿಚಾರದಲ್ಲಿ ಎದ್ದುಕಾಣುತ್ತಿರುವುದನ್ನು ನೋಡಬಹುದು.

**ವಿಷಯ ನಿರೂಪಣೆ**

ಭಾರತವು ದಕ್ಷಿಣ ಏಷ್ಯಾದ ಪ್ರಮುಖ ದೇಶ ಮತ್ತು ಪ್ರಾದೇಶಿಕ ಶಕ್ತಿಯಾಗಿದ್ದು ಜಾಗತಿಕ ಮಟ್ಟದಲ್ಲಿ

ತನ್ನನ್ನು ತಾನು ಗುರುತಿಸಿಕೊಂಡಿದೆ. ವಿಶಾಲವಾದ ಭೂ ಪ್ರದೇಶ, ಸುಮಾರು 1.2 ಶತಕೋಟಿಗಿಂತಲೂ ಹೆಚ್ಚಿನ ಜನಸಂಖ್ಯೆ, ವಿಸ್ತಾರವಾದ ಕೃಷಿಭೂಮಿ, ಹಾಗೂ ಹೇರಳವಾಗಿ ದೊರೆಯುವ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿದ್ದು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಸಾಲಿನಲ್ಲಿ ಮೊದಲನೆಯ ಸ್ಥಾನದಲ್ಲಿದೆ. ಈ ಕಾರಣದಿಂದಲೇ ಹಲವು ಮುಂದುವರಿದ ದೇಶಗಳು ಭಾರತದೊಂದಿಗೆ ಉತ್ತಮವಾದ ಸಂಬಂಧವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿವೆ. ಭಾರತದಲ್ಲಿ ದೊರೆಯುವ ಅಗ್ಗದ ಮತ್ತು ನುರಿತ ಕಾರ್ಮಿಕರು, ಕಡಿಮೆ ಉತ್ಪಾದನ ವೆಚ್ಚ, ಗ್ರಾಹಕರ ಖರ್ಚುಮಾಡುವ ಸಾಮರ್ಥ್ಯ ಮತ್ತು ಅಸಂಖ್ಯಾತ ವ್ಯಾಪಾರದ ಅವಕಾಶಗಳು, ಮುಂತಾದ ಹಲವು ಅಂಶಗಳು ಭಾರತವನ್ನು ಪಾಶ್ಚಿಮಾತ್ಯ ಮತ್ತು ಬಹುರಾಷ್ಟ್ರೀಯ ಕಂಪನಿಗಳಿಗೆ ನೆಚ್ಚಿನ ಹೂಡಿಕೆಯ ತಾಣವನ್ನಾಗಿ ಮಾಡಿದೆ. ಭಾರತವು ಕೂಡ ವಿಶ್ವದ ಅತಿದೊಡ್ಡ ಆರ್ಥಿಕತೆಗಳಲ್ಲಿ ಒಂದಾಗಿದ್ದು ಸುಮಾರು 1.8 ಟ್ರಿಲಿಯನ್ US$ ಜಿಡಿಪಿಯನ್ನು ಹೊಂದಿದೆ. ಭಾರತದ ಆರ್ಥಿಕತೆಯ ದರವು 2022 ರಿಂದ ಸುಮಾರು 7% ನಷ್ಟಿದೆ.[5]

ಚಬಹಾರ್ ಯೋಜನೆಯು ಪ್ರಾಥಮಿಕವಾಗಿ ಆರ್ಥಿಕ, ವ್ಯಾಪಾರ ಮತ್ತು ಸಾರಿಗೆ ಯೋಜನೆಯಾಗಿದೆ, ಅದರೂ ಜಾಗತಿಕವಾಗಿ ಇದು ಇರಾನ್ ಮತ್ತು ಭಾರತದ ಭೌಗೋಳಿಕ ರಾಜಕೀಯ ಸಮೀಕರಣಗಳನ್ನು ಅವುಗಳ ಪ್ರತಿಸ್ಪರ್ಧಿಗಳ ಜೊತೆಯಲ್ಲಿ; ನಿರ್ಧಿಷ್ಟವಾಗಿ ಪರ್ಶಿಯನ್ ಗಲ್ಫ್ ರಾಷ್ಟ್ರಗಳು, ಇಸ್ರೇಲ್ ಮತ್ತು ಯು.ಎಸ್.ಎ ಅನ್ನು ಇರಾನಿನ ಜೊತೆಗೂ, ಹಾಗೂ ಪಾಕಿಸ್ತಾನ ಮತ್ತು ಚೀನಾವನ್ನು ಭಾರತದ ಹಿತಾಸಕ್ತಿಗಳ ಜೊತೆಗೂ ಮರುಹೊಂದಿಸುತ್ತದೆ.

ಚಬಹಾರ್ ಯೋಜನೆಯಲ್ಲಿ ಭಾರತದ ಹಿತಾಸಕ್ತಿಗಳು ಆರ್ಥಿಕತೆಗೆ ಸಂಬಂಧಿಸಿದ್ದಾಗಿವೆ. ಭಾರತದ ಹೂಡಿಕೆಗಳು ಉತ್ಪಾದನಾ ವಲಯಕ್ಕೆ, ವಿಶೇಷವಾಗಿ ಕೃಷಿ ರಾಸಾಯನಿಕ ಉದ್ಯಮದ ಬೆಳವಣಿಗೆಯನ್ನು ಉತ್ತೇಜಿಸಲು, ಕಬ್ಬಿಣ ಮತ್ತು ಉಕ್ಕು, ಅಲ್ಯೂಮಿನಿಯಂ ಕೈಗಾರಿಕೆಗಳು, ಸಾರಿಗೆ ಮತ್ತು ಸಾಗಣೆಗೆ ಅಗತ್ಯವಿರುವ ಉತ್ತೇಜನವನ್ನು ನೀಡುವುದಾಗಿದೆ. ಚಬಹಾರ್ ಬಂದರು ಕಾರ್ಯಗತಗೊಳ್ಳುವುದರೊಂದಿಗೆ, ಭಾರತಕ್ಕೆ ಕಬ್ಬಿಣದ ಅದಿರು, ಸಕ್ಕರೆ ಮತ್ತು ಅಕ್ಕಿಯ ಆಮದುಗಳಲ್ಲಿ ಗಮನಾರ್ಹ ಪ್ರಗತಿಯನ್ನು ಕಾಣಬಹುದು. ಪಶ್ಚಿಮ ಭಾರತದ ಬಂದರುಗಳಾದ ಮುಂದ್ರಾ, ಕಾಂಡ್ಲಾ, ಮರ್ಮಗೋವಾ, ಮಂಗಳೂರು ಮತ್ತು ಕೊಚ್ಚಿನ್ ಚಬಹಾರ್ ಯೋಜನೆ ಅಡಿಯಲ್ಲಿ ವ್ಯಾಪಾರ ಮಾರ್ಗಕ್ಕೆ ಸೇರಿಕೊಳ್ಳಲಿದೆ. ಇದರಿಂದ ಚಬಹಾರ್ ದಕ್ಷಿಣ ಭಾರತ ಮತ್ತು ಹಿಂದೂ ಮಹಾಸಾಗರವನ್ನು ಇರಾನ್ ಮತ್ತು ಮಧ್ಯ ಏಷ್ಯಾಕ್ಕೆ ಸಂಪರ್ಕಿಸುತ್ತದೆ ಹೀಗಾಗಿ ಎರಡು ಪ್ರಾದೇಶಿಕ ಗೋಳಗಳ ನಡುವಿನ ವ್ಯಾಪಾರವನ್ನು ಹೆಚ್ಚಿಸುವುದರ ಜೊತೆಗೆ ಅವುಗಳು ಕೂಡ ಇಂಡೋ–ಪೆಸಿಫಿಕ್ ವಲಯದಲ್ಲಿ ಜಾಗತಿಕ ವ್ಯಾಪಾರ ಕೇಂದ್ರಗಳು ಮತ್ತು ಸಾರಿಗೆ ಕೇಂದ್ರಗಳಾಗುವ ಅವಕಾಶಗಳನ್ನು ತೆರೆದಿಡುತ್ತದೆ. ಇದರೊಂದಿಗೆ ವ್ಯಾಪಾರ, ಆರ್ಥಿಕ ಚಟುವಟಿಕೆ, ಮತ್ತು ಉದ್ಯೋಗ ಸೃಷ್ಟಿಯಿಂದಾಗಿ ಆದಾಯದಲ್ಲಿ ಗಣನೀಯ ಬೆಳವಣಿಗೆಯನ್ನು ಕಾಣಲಿದೆ. ಚಬಹಾರ್ ಬಂದರಿನ ಅಭಿವೃದ್ಧಿಯಿಂದ ಬಾರತವು ತನ್ನ ದ್ವಿಪಕ್ಷೀಯ ವ್ಯಾಪಾರವನ್ನು ವಿಸ್ತರಿಸಿಕೊಳ್ಳುವುದರ ಜೊತೆಗೆ ಇರಾನಿನ ವಿವಿಧ ವಲಯಗಳಲ್ಲಿ ಹೂಡಿಕೆ ಮಾಡುವ ಅವಕಾಶವನ್ನು ಸೃಷ್ಟಿಸಿದೆ. ಇರಾನ್ ಕೂಡ ತನ್ನ ಮುಕ್ತ ವ್ಯಾಪಾರನೀತಿಯಿಂದಾಗಿ ಸುಮಾರು $14 ಯು.ಎಸ್ ಬಿಲಿಯನ್ ಡಾಲರ್ ಹೂಡಿಕೆಯ ನಿರೀಕ್ಷೆಯನ್ನು ಹೊಂದಿದೆ. ಇದಕ್ಕೆ ಪ್ರತಿಯಾಗಿ ಭಾರತವು ಕೂಡ ಇರಾನಿನ ಅಲ್ಯುಮಿನಿಯಂ ಕೈಗಾರಿಕೆ, ಕಬ್ಬಿಣ ಮತ್ತು ಉಕ್ಕಿನ ಹಳಿಗಳ ತಯಾರಿಕೆ, ಹಾಗೂ ಯುರಿಯಾ ತಯಾರಿಕಾ ಘಟಕಗಳ ಮೇಲೆ $400 ಮಿಲಿಯನ್ ಹೂಡಿಕೆ ಮಾಡಿದೆ.[6]

ಭಾರತವು ಇಂಡಿಯಾ ಪೋರ್ಟ್ಸ್ ಗ್ಲೋಬಲ್ ಪ್ರೈವೇಟ್ ಲಿಮಿಟೆಡ್ ಸಂಸ್ಥೆ (ಜವಾಹರ್‌ಲಾಲ್

ನೆಹರು ಪೋರ್ಟ್ ಟ್ರಸ್ಟ್ ಮತ್ತು ಕಾಂಡ್ಲ ಪೋರ್ಟ್ ಟ್ರಸ್ಟ್‌ನ ಒಕ್ಕೂಟ) ಹಾಗೂ ಇರಾನಿನ ಆರಿಯ ಬನಾಡರ್ ಸಂಸ್ಥೆಯ ಸಹಭಾಗಿತ್ವದೊಂದಿಗೆ 23 ಮೇ 2016ರಂದು ಟೆಹ್ರಾನ್‌ನಲ್ಲಿ ಒಪ್ಪಂದಕ್ಕೆ ಸಹಿ ಹಾಕಲಾಯಿತು. ಅದರಂತೆ ಭಾರತ ಮತ್ತು ಇರಾನ್ ನಡುವೆ ಮೇ 5, 2015ರಂದು ಸಹಿ ಮಾಡಿದ ಅಂತರ – ಸರ್ಕಾರಿ ಒಪ್ಪಂದದ ಅಡಿಯಲ್ಲಿ ಒಪ್ಪಿಗೆಯಾದ ಅಂಶಗಳ ಪ್ರಕಾರ ಚಬಹಾರ್ ಬಂದರಿನ 2 ಟರ್ಮಿನಲ್ಗಳನ್ನು, 5 ಬರ್ತ್ ಮತ್ತು 640 ಮೀಟರ್ ಉದ್ದದ ಕಂಟೇನರ್ ಟರ್ಮಿನಲ್‌ಗಳನ್ನು ಸುಮಾರು US$85 ಮಿಲಿಯನ್ ವೆಚ್ಚದಲ್ಲಿ 18 ತಿಂಗಳ ಅವಧಿಯಲ್ಲಿ ಅಭಿವೃದ್ಧಿ ಪಡಿಸಲು ಹಾಗೂ 10ವರ್ಷಗಳ ಅವಧಿಗೆ ನಿರ್ವಹಿಸಲು ಇರಾನ್ ಭಾರತಕ್ಕೆ ಅವಕಾಶ ಮಾಡಿಕೊಟ್ಟಿತು.[7] ಚಬಹಾರ್ ಬಂದರಿನ ಸಾಮರ್ಥ್ಯವನ್ನು 2.5 ಮಿಲಿಯನ್ ಟನ್ ನಿಂದ 8 ಮಿಲಿಯನ್ ಟನ್‌ಗಳಿಗೆ ಹೆಚ್ಚಿಸುವುದು ಇದರ ಉದ್ದೇಶವಾಗಿದೆ.

ಸರ್ಕಾರದ ಅಂಕಿಅಂಶಗಳ ಪ್ರಕಾರ ರಾಜ್ಯ– ಚಾಲಿತ IPGL(ಇಂಡಿಯಾ ಪೋರ್ಟ್ಸ್ ಗ್ಲೋಬಲ್ ಪ್ರೈವೇಟ್ ಲಿಮಿಟೆಡ್) ಚಾಬಹಾರ್ ಬಂದರಿನಲ್ಲಿ ಶಾಹಿದ್ ಬೆಹೆಷ್ಟಿ ಟರ್ಮಿನಲ್ ಅನ್ನು ನಿರ್ವಹಿಸುತ್ತದೆ ಮತ್ತು IPGL 2018 ರಲ್ಲಿ ಟರ್ಮಿನಲ್‌ನಲ್ಲಿ ಕಾರ್ಯಾಚರಣೆಯನ್ನು ಪ್ರಾರಂಭಿಸಿದಾಗಿನಿಂದ, (ಮೇ 2023 ರವರೆಗೆ) ಇದು ಬ್ರೆಜಿಲ್, ಜರ್ಮನಿ, ರಷ್ಯಾ, ಯುನೈಟೆಡ್ ಅರಬ್ ಎಮಿರೇಟ್ಸ್, ಆಸ್ಟ್ರೇಲಿಯಾ, ಹಾಗೂ ಬಾಂಗ್ಲಾದೇಶದಿಂದ ಸಾಗಣೆ ಸೇರಿದಂತೆ 6.56 ಮಿಲಿಯನ್ ಟನ್‌ಗಳಿಗಿಂತ ಹೆಚ್ಚು ಬೃಹತ್ ಸರಕುಗಳನ್ನು ನಿರ್ವಹಿಸಿದೆ. 2023ಕ್ಕೆ ಭಾರತವು ಶಾಹಿದ್ ಬೆಹೆಷ್ಟಿ ಟರ್ಮಿನಲ್‌ನಲ್ಲಿ 13,282 Twenty-foot Equivalent Unit ಗಳ ಸರಕು ನಿರ್ವಹಣೆಯನ್ನು ಗುರಿಯಾಗಿಸಿಕೊಂಡಿದೆ.[8]

**ಪಾಕಿಸ್ತಾನವನ್ನು ಬೈಪಾಸ್ ಮಾಡುವುದು**

ಪಾಕಿಸ್ತಾನವು 1965 ಮತ್ತು 1971ರ ಭಾರತದೊಂದಿಗಿನ ಯುದ್ಧದಲ್ಲಿ ಪರಾಜಯವನ್ನು ಅನುಭವಿಸಿದನಂತರ ಅಂತರರಾಷ್ಟ್ರೀಯ ಮಟ್ಟದಲ್ಲಿ ಮುಖಭಂಗವನ್ನು ಅನುಭವಿಸಿತು. ಅಲ್ಲಿಂದ ಇಲ್ಲಿಯವರೆಗೂ ಭಾರತದ ಪ್ರತಿಯೊಂದು ನಡೆಗೂ ಪಾಕಿಸ್ತಾನ ಆಕ್ಷೇಪವನ್ನು ಎತ್ತುತ್ತಲೇ ಬಂದಿದೆ. ಪಾಕಿಸ್ತಾನವು ಯುದ್ಧವನ್ನು ಪ್ರಾರಂಭಿಸಿದ ಸಂದರ್ಭದಲ್ಲಿ ಇರಾನ್ ಕೂಡ ಭಾರತದ ವಿರುದ್ಧ ಪಾಕಿಸ್ತಾನಕ್ಕೆ ಮಿಲಿಟರಿ ಮತ್ತು ಹಣಕಾಸಿನ ಸಹಾಯವನ್ನು ಮಾಡಿತ್ತು.

1979ರ ಇರಾನಿನ ಇಸ್ಲಾಮಿಕ್ ಕ್ರಾಂತಿಯ ನಂತರದ ಅಮೇರಿಕಾ ಮತ್ತು ಇರಾನ್ ಸಂಬಂಧಗಳಲ್ಲಿ ಬಿರುಕು ಕಾಣಿಸಿಕೊಂಡಾಗಿನಿಂದ ಅಮೇರಿಕಾದ ಮಿತ್ರರಾಷ್ಟ್ರವಾದ ಪಾಕಿಸ್ತಾನದ ಜೊತೆ ಬಹಳ ಎಚ್ಚರಿಕೆಯಿಂದ ವ್ಯವಹರಿಸಲು ಪ್ರಾರಂಭಿಸಿತು. ಜೊತೆಗೆ ತನ್ನ ವಿದೇಶಾಂಗ ನೀತಿಯಲ್ಲಿ ಬದಲಾವಣೆಯನ್ನು ಮಾಡಿಕೊಂಡು ವೈಯಕ್ತಿಕ ಅಭಿವೃದ್ಧಿಕಡೆಗೆ ಚಿಂತನೆ ನಡೆಸಿದರ ಪರಿಣಾಮ ಭಾರತದೊಂದಿಗಿನ ಸಂಬಂಧವನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸಿತು. ಇದರ ಫಲವಾಗಿ ಭಾರತವು ಕೂಡ ಚಬಹಾರ್ ಬಂದರಿನ ಅಭಿವೃದ್ಧಿಗೆ ಉದ್ದೇಶಪೂರ್ವಕವಾಗಿ ಕೈಜೋಡಿಸಿತು.

2003ರಲ್ಲಿ ಭಾರತದ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿರವರು ಇರಾನಿನೊಂದಿಗೆ ಚಬಹಾರ್ ಬಂದರಿನ ನವೀಕರಣ ಒಪ್ಪಂದಕ್ಕೆ ಸಹಿ ಹಾಕಿದರು. ಇದರಿಂದಾಗಿ ಚಬಹಾರ್ ಬಂದರಿನ ಮೂಲಕ ಭಾರತವು ಅಫ್ಘಾನಿಸ್ತಾನಕ್ಕೆ ಸರಕುಗಳನ್ನು ಸಾಗಿಸುವಲ್ಲಿ ಪಾಕಿಸ್ತಾನವನ್ನು ಬೈಪಾಸ್ ಮಾಡಬಹುದು. ಅಲ್ಲದೆ ರಷ್ಯಾ, ಇರಾನ್, ಯುರೋಪ್ ಮತ್ತು ಮಧ್ಯ ಏಷ್ಯಾ ನಡುವೆ ಸಮುದ್ರ, ರೈಲು ಮತ್ತು ರಸ್ತೆ ಮಾರ್ಗಗಳನ್ನು ಹೊಂದಿರುವ ಅಂತರರಾಷ್ಟ್ರೀಯ ಉತ್ತರ–ದಕ್ಷಿಣ ಸಾರಿಗೆ ಕಾರಿಡಾರ್‌ಗೆ ಚಬಹಾರ್ ಬಂದರು ಪ್ರಮುಖ ಗೇಟ್‌ವೇ ಆಗಿರುವುದರಿಂದ ಇದು ಈ ಭಾಗದಲ್ಲಿ

ಭಾರತದ ಪ್ರವೇಶವನ್ನು ಹೆಚ್ಚಿಸಿ ಭಾರತದ ವ್ಯಾಪಾರ ಅವಕಾಶಗಳನ್ನು ವಿಸ್ತರಿಸಲು ಅನುವು ಮಾಡಿಕೊಡುತ್ತದೆ. ಇದರಿಂದ ಪಾಕಿಸ್ತಾನವು ಅಫ್ಘಾನಿಸ್ತಾನಕ್ಕೆ ಭಾರತದ ಪ್ರವೇಶವನ್ನು ಮತ್ತು ಕಾಬೂಲ್‌ಗೆ ಸರಬರಾಜುಗಳನ್ನು ಕಳುಹಿಸುವುದನ್ನು ತೀವ್ರವಾಗಿ ವಿರೋಧಿಸತೊಡಗಿತು. ಇದಕ್ಕೆ ಪ್ರತಿಯಾಗಿ 2009 ರಲ್ಲಿ ಭಾರತವು ಅಫ್ಘಾನಿಸ್ತಾನ–ಇರಾನ್ ಗಡಿಯಲ್ಲಿರುವ ಝುರಂಜ್ ನಿಂದ ಖಾಶ್ ನದಿಯ ತೀರದಲ್ಲಿರುವ ದಿಲಾರಮ್ ನಗರಕ್ಕೆ ರಸ್ತೆ ನಿರ್ಮಿಸುವ ಮೂಲಕ ಪ್ರತಿಕ್ರಿಯಿಸಿತು. ಭಾರತವು ನಿರ್ಮಿಸಿದ ಝುರಂಜ್–ದಿಲಾರಮ್ ರಸ್ತೆಯು ಅಫ್ಘಾನಿಸ್ತಾನದ ಗಾರ್ಲ್ಯಾಂಡ್ ಹೆದ್ದಾರಿಯ ಮೂಲಕ ಹೆರಾತ್, ಕಂದಹಾರ್, ಕಾಬೂಲ್ ಮತ್ತು ಮಜಾರ್–ಎ–ಷರೀಫ್ ಎಂಬ ನಾಲ್ಕು ಪ್ರಮುಖ ನಗರಗಳಿಗೆ ರಸ್ತೆ ಪ್ರವೇಶವನ್ನು ಸಂಪರ್ಕಿಸುತ್ತದೆ.[9] ಇದರಿಂದ ಪಾಕಿಸ್ತಾನವು ಗ್ವಾದರ್ ಬಂದರಿನಲ್ಲಿ ಚೀನಾದ ಸಹಾಯದಿಂದ ಹಾರ್ಮುಜ್ ಜಲಸಂಧಿಯ ಮೂಲಕ ಭಾರತಕ್ಕೆ ಆಮದಾಗುವ ಇಂಧನಗಳ ಮೇಲೆ ನಿಯಂತ್ರಣ ಸಾಧಿಸುವುದನ್ನು ತಡೆಯಬಹುದು. ಗ್ವಾದರ್ ಬಂದರು ಚೀನಾದ ಹಡಗುಗಳು ಮತ್ತು ಜಲಾಂತರ್ಗಾಮಿ ನೌಕೆಗಳಿಗೆ ನೆಲೆಯನ್ನು ಒದಗಿಸುತ್ತದೆ ಮತ್ತು ಈ ಬಂದರಿನ ದ್ವಿಬಳಕೆಯ ನಾಗರಿಕ ಸೇನಾ ಸೌಲಭ್ಯಗಳು ಭಾರತಕ್ಕೆ ನೇರವಾದ ಭದ್ರತಾ ಬೆದರಿಕೆಯನ್ನು ಉಂಟುಮಾಡಬಹುದು. ಇದರಿಂದ ಭವಿಷ್ಯದಲ್ಲಿ ಚಬಹಾರ್ ಬಂದರನ್ನು ಮಿಲಿಟರಿ ಕಾರ್ಯಾಚರಣೆಗಳಿಗೂ ಬಳಸಿಕೊಳ್ಳಲು ಪ್ರಯತ್ನಿಸಬಹುದು.[10]

**ತೈಲಾಧಾರಿತ ಸಂಬಂಧವನ್ನು ಸುಧಾರಿಸಿಕೊಳ್ಳಬಹುದು**

ತೈಲ ಸಂಪನ್ಮೂಲವು ಚಬಹಾರ್ ಬಂದರಿನ ಅಭಿವೃದ್ಧಿಯ ಹಿಂದಿನ ಪ್ರಮುಖ ಕಾರಣಗಳಲ್ಲಿ ಒಂದಾಗಿದೆ. ಈ ಮೊದಲು ಇರಾನ್ ಭಾರತದ ಎರಡನೇ ತೈಲ ರಫ್ತುದಾರ ರಾಷ್ಟ್ರವಾಗಿತ್ತು. ಆದರೆ 2006ರಲ್ಲಿ ಇರಾನ್ ಮೇಲೆ ವಿಧಿಸಿದ ವ್ಯಾಪಾರ ಮತ್ತು ಆರ್ಥಿಕ ನಿರ್ಬಂಧಗಳಿಂದಾಗಿ ಇರಾನ್ ಜೊತೆಗಿನ ಎಲ್ಲಾ ಆರ್ಥಿಕ ಚಟುವಟಿಕೆಗಳು ಕಡಿಮೆಯಾಗಿ ಈಗ 7ನೇ ಸ್ಥಾನಕ್ಕೆ ಕುಸಿದಿದೆ. 2016 ಮೇ ನಲ್ಲಿ ನಡೆದ ದ್ವಿಪಕ್ಷೀಯ ಮಾತುಕತೆಯಲ್ಲಿ ಪ್ರಧಾನಿ ಮೋದಿಯವರು ಭವಿಷ್ಯದಲ್ಲಿ ಇರಾನ್‌ನಿಂದ ಆಗುವ ತೈಲ ಆಮದಿನ ಪ್ರಮಾಣವನ್ನು ದ್ವಿಗುಣಗೊಳಿಸಲಾಗುವುದು ಹಾಗೂ ಮುಂದಿನ ಹತ್ತು ವರ್ಷಗಳಲ್ಲಿ ಅಂದಾಜು 400,000 ಬ್ಯಾರಲ್ ತೈಲವನ್ನು ಆಮದು ಮಾಡಿಕೊಳ್ಳಲಾಗುವುದು ಎಂದು ತಿಳಿಸಿದ್ದಾರೆ. ಒಂದು ವೇಳೆ ಚಬಹಾರ್ ಬಂದರಿನ ಅಭಿವೃದ್ಧಿಯಾದರೆ ಸಾಗಣೆಯ ವೆಚ್ಚ ಕಡಿಮೆಯಾಗಿ ಇನ್ನೂ ಕಡಿಮೆ ದರದಲ್ಲಿ ತೈಲವು ಲಭ್ಯವಾಗುವುದರಲ್ಲಿ ಯಾವುದೇ ಸಂಶಯವಿಲ್ಲ.[11]

**ಅಫ್ಘಾನಿಸ್ತಾನದ ಸ್ಥಿರತೆ ಮತ್ತು ಅಭಿವೃದ್ಧಿ**

ಚಬಹಾರ್ ಬಂದರಿನ ಮತ್ತೊಂದು ಪಾಲುದಾರ ದೇಶವಾದ ಅಫ್ಘಾನ್ ಭಾರತದೊಂದಿಗೆ ತನ್ನ ಒಪ್ಪಂದವನ್ನು ಮರುನವೀಕರಣಗೊಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದು, ಇದು ಪಾಕಿಸ್ತಾನದ ಮೇಲಿನ ತನ್ನ ಅವಲಂಬನೆಯನ್ನು ಕಡಿಮೆ ಮಾಡಿಕೊಳ್ಳಲು ಬಯಸುತ್ತಿದೆ. ಕಾರಣ ಅಫ್ಘಾನಿಸ್ತಾನವು ಕೇವಲ ಭೂಮಿಯಿಂದ ಸುತ್ತುವರೆದಿದ್ದು ಯಾವುದೇ ಸಮುದ್ರಮಾರ್ಗಕ್ಕೂ ನೇರ ಪ್ರವೇಶ ಇಲ್ಲದಿರುವುದು ಅದರ ಆರ್ಥಿಕ ವ್ಯವಸ್ಥೆ ಬಳಲುವುದಕ್ಕೆ ಕಾರಣವಾಗಿದೆ. ಸಮುದ್ರ ಮಾರ್ಗಕ್ಕೆ ಅಫ್ಘಾನಿಸ್ತಾನದ ಪ್ರವೇಶವು ಕ್ರಮವಾಗಿ ಪಾಕಿಸ್ತಾನ ಮತ್ತು ಇರಾನ್ ಮೂಲಕ ಮಾತ್ರ ಸಾಧ್ಯ. ಇಲ್ಲಿಯವರೆಗೆ, ಪಾಕಿಸ್ತಾನದ ಬಂದರು ನಗರವಾದ ಕರಾಚಿಯು ಅಫ್ಘಾನಿಸ್ತಾನಕ್ಕೆ ತೆರೆದ ನೀರಿಗೆ ಮಾತ್ರ ಪ್ರವೇಶವನ್ನು ಒದಗಿಸಿದೆ. ಆದಾಗ್ಯೂ, ಅಫ್ಘಾನ್ ಅಧಿಕಾರಿಗಳು ಪಾಕಿಸ್ತಾನದ ಸ್ನೇಹಿಯಲ್ಲದ ವ್ಯಾಪಾರ ಮತ್ತು ಸಾರಿಗೆ ನೀತಿಗಳು ಕರಾಚಿ ಬಂದರಿನ ಅತ್ಯುತ್ತಮ ಬಳಕೆಗೆ ಅಡ್ಡಿಯಾಗಿದ್ದು ಪೂರ್ಣ ಪ್ರಮಾಣದಲ್ಲಿ ಕಾಬೂಲ್ ಮತ್ತು ಇಸ್ಲಮಾಬಾದ್ ನಡುವಿನ ಆರ್ಥಿಕ ಸಂಬಂಧಗಳ ಅಭಿವೃದ್ಧಿಗೆ ತೊಡಕಾಗಿವೆ ಎಂದು

ಉಲ್ಲೇಖಿಸಿದ್ದಾರೆ. ಆದ್ದರಿಂದ ಚಹಹಾರ್ ಬಂದರು ಭಾರತವು ಅಫ್ಘಾನಿಸ್ತಾನದೊಂದಿಗೆ ವ್ಯಾಪಾರವನ್ನು ಮಾಡುವ ಅವಕಾಶವನ್ನು ಒದಗಿಸುತ್ತದೆ. 2016ರಲ್ಲಿ ಇರಾನ್–ಭಾರತ ಮತ್ತು ಅಫ್ಘಾನಿಸ್ತಾನದ ನಡುವೆ ಚಬಹಾರ್ ಬಂದರಿನ ಅಭಿವೃದ್ಧಿಗೆ ಸಂಬಂಧಿಸಿದಂತೆ ತ್ರಿಪಕ್ಷೀಯ ಆರ್ಥಿಕ ಒಪ್ಪಂದವಾಯಿತು. ಅದರ ಜೊತೆಗೆ ಒಟ್ಟು 11 ತಿಳುವಳಿಕೆ ಪತ್ರಗಳಿಗೆ (MoUs) ಸಹಿ ಹಾಕಲಾಯಿತು. ಅದರಲ್ಲಿ ಪ್ರಮುಖವಾದ ಅಂಶವೆಂದರೆ ಅಫ್ಘಾನಿಸ್ತಾನ–ಭಾರತ–ಇರಾನ್ ನಡುವಿನ ತ್ರಿಪಕ್ಷೀಯ ಸಾರಿಗೆ ಒಪ್ಪಂದ. ಈ ಮೂರು ದೇಶಗಳು ಚಬಹಾರ್ ಬಂದರಿನ ಪ್ರಮುಖ ಪಾಲುದಾರ ದೇಶಗಳಾಗಿರುವುದರಿಂದ ಇದು ಭಾರತೀಯ ಸರಕುಗಳು ಇರಾನ್ ಮೂಲಕ ಅಫ್ಘಾನಿಸ್ತಾನ ತಲುಪಲು ಅನುಮತಿಯನ್ನು ನೀಡುತ್ತವೆ. ಭಾರತವು ಈಗಾಗಲೇ ಅಫ್ಘಾನಿಸ್ತಾನದ ದಿಲಾರಮ್ ನಿಂದ ಝರಂಜ್‌ವರೆಗೆ ಸುಮಾರು 218 ಕಿ.ಮೀ ಉದ್ದದ ರಸ್ತೆಯನ್ನು ನಿರ್ಮಿಸಿದ್ದು, ಅದನ್ನು ಚಬಹಾರ್ ಬಂದರಿಗೆ ಸಂಪರ್ಕ ಕಲ್ಪಿಸುವ ಗುರಿಯನ್ನು ಹೊಂದಿದೆ. ಗುಜರಾತಿನ ಕಾಂಡ್ಲಾ ಬಂದರಿನಿಂದ ಚಬಹಾರ್ ಬಂದರಿಗೆ ಸುಮರು 1000 ಕಿ.ಮೀ ಅಂತರವಿದ್ದು ಇದು ಭಾರತದ ರಾಜಧಾನಿಯಾದ ದೆಹಲಿಯಿಂದ ಮುಂಬೈವರೆಗಿನ ಅಂತರ 1409 ಕಿ.ಮೀ ಗಿಂತಲೂ ಕಡಿಮೆ ಇದೆ. ಆದ್ದರಿಂದ ಭಾರತದ ಸರಕುಗಳನ್ನು ಚಬಹಾರ್ ಬಂದರಿಗೆ ಸಾಗಣೆಮಾಡಿ ಅಲ್ಲಿಂದ ದಿಲಾರಮ್–ಝರಂಜ್ ಹೆದ್ದಾರಿ ಮಾರ್ಗವಾಗಿ ಅಫ್ಘಾನಿಸ್ತಾನಕ್ಕೆ ತಲುಪಿಸಲು ಸಾಧ್ಯವಾಗುತ್ತದೆ. ಇದರಿಂದ ವ್ಯಾಪಾರಕ್ಕಾಗಿ ಪಾಕಿಸ್ತಾನದ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಬಹುದು. 2017ರ ಅಕ್ಟೋಬರ್‌ನಲ್ಲಿ ಅಫ್ಘಾನಿಸ್ತಾನಕ್ಕೆ ಭಾರತ ಮೊದಲ ಗೋಧಿಯನ್ನು ಚಬಹಾರ್ ಬಂದರಿನ ಮೂಲಕ ಕಳುಹಿಸಲಾಯಿತು. 2020 ರ ಅಂಕಿ ಅಂಶಗಳ ಪ್ರಕಾರ ಭಾರತ ಮತ್ತು ಅಫ್ಘಾನಿಸ್ತಾನದ ನಡುವಿನ ವ್ಯಾಪಾರವು ಕೇವಲ US$1.1 ಬಿಲಿಯನ್ ನಷ್ಟಿದೆ. ಅಲ್ಲದೆ ದಕ್ಷಿಣ ಅಫ್ಘಾನಿಸ್ತಾನದ ಝುಬುಲ್ ಕಬ್ಬಿಣದ ಅದಿರು ಗಣಿಗಳಿಂದ ಇರಾನ್ ಬಂದರಿನವರೆಗೆ 560 ಕಿಮೀ ಉದ್ದದ ಮಾರ್ಗವನ್ನು ನಿರ್ಮಿಸುವಲ್ಲಿಯೂ ಭಾರತವು ಕೈಜೋಡಿಸಿದೆ.[12]

**ಚಬಹಾರ್ ಜಹೇದಾನ್ ರೈಲುಯೋಜನೆ**

ಚಬಹಾರ್ –ಜಹೇದನ್–ಸರಖ್ಸ್ ರೈಲ್ವೆ ಜಂಟಿ ಚಬಹಾರ್ ಯೋಜನೆಯ ಭಾಗವಾಗಿದ್ದು, ಭವಿಷ್ಯದಲ್ಲಿ ಅಫ್ಘಾನಿಸ್ತಾನಕ್ಕೆ ರೈಲು ಮತ್ತು ರಸ್ತೆಯ ಮೂಲಕ ಚಬಹಾರ್ ಸಂಪರ್ಕಿಸಲು ನೋಡುತ್ತಿದೆ. ಚಬಹಾರ್ ಬಂದರನ್ನು ರೈಲು ಜಾಲಕ್ಕೆ ಜೋಡಿಸಿದರೆ ಸರಕು ನಿರ್ವಹಣೆಯ ಪ್ರಮಾಣ ಗಣನೀಯವಾಗಿ ಹೆಚ್ಚಾಗಬಹುದು ಎಂದು ತಜ್ಞರು ಹೇಳಿದ್ದಾರೆ. 700 ಕಿಮೀ ಉದ್ದದ ಚಬಹಾರ್–ಜಹೇದಾನ್ ರೈಲು ಮಾರ್ಗವನ್ನು ನಿರ್ಮಿಸುವಲ್ಲಿ ಭಾರತವೂ ತೊಡಗಿಸಿಕೊಂಡಿದೆ. ಚಬಹಾರ್–ಜಹೇದಾನ್ ರೈಲ್ವೆ ಯೋಜನೆಯನ್ನು ನಿರ್ಮಿಸಲು 2016 ರಲ್ಲಿ ಭಾರತೀಯ ರೈಲ್ವೆಯ IRCON ಘಟಕ ಮತ್ತು ಇರಾನಿನ ರೈಲ್ವೆಯ ನಿರ್ಮಾಣ ಮತ್ತು ಸಾರಿಗೆ ಮೂಲಸೌಕರ್ಯಗಳ ಅಭಿವೃದ್ಧಿಯ ನಡುವೆ ಒಪ್ಪಂದಕ್ಕೆ ಸಹಿ ಹಾಕಲಾಯಿತು. FY22 ರ ಕೇಂದ್ರ ಬಜೆಟ್‌ನಲ್ಲಿ ಹಣಕಾಸು ಸಚಿವಾಲಯವು ಚಬಹಾರ್ ಬಂದರನ್ನು ಅಭಿವೃದ್ಧಿಪಡಿಸಲು 100 ಕೋಟಿಗಳನ್ನು ಮೀಸಲಿಟ್ಟಿದೆ.[13]

2016 ರಲ್ಲಿ ಭಾರತದ ಪ್ರಧಾನಿ ನರೇಂದ್ರ ಮೋದಿ ಮತ್ತು ಇರಾನ್ ಅಧ್ಯಕ್ಷ ಹಸನ್ ರೌಹಾನಿ ನಡುವೆ ಆದ ಒಪ್ಪಂದಕ್ಕೆ ಸಂಬಂಧಿಸಿದಂತೆ ಭಾರತೀಯ ಸಾರ್ವಜನಿಕ ವಲಯದ ರೈಲ್ವೆ ಕಂಪನಿ IRCON ಇಂಟರ್‌ನ್ಯಾಷನಲ್ ಲಿಮಿಟೆಡ್ ಸುಮಾರು US$1.6 ಶತಕೋಟಿ ಹೆಚ್ಚುವರಿ ನಿಧಿಯನ್ನು ಹೂಡಿಕೆ ಮಾಡುವುದಾಗಿ ವಾಗ್ದಾನ ಮಾಡಿತ್ತು. ಆದರೆ ಇರಾನ್ ಮೇಲೆ ಅಮೇರಿಕಾ ನಿರ್ಬಂಧಗಳನ್ನು ವಿಧಿಸಿದ ನಂತರ 2020ರಲ್ಲಿ ಈ ಯೋಜನೆಗೆ ಹಣವನ್ನು ಒದಗಿಸಲು ವಿಫಲವಾಯಿತು. ಇದರಿಂದ

ಇರಾನ್ ತನ್ನ ಅಸಮಧಾನವನ್ನು ಹೊರಹಾಕಿ, ಒಂದುವೇಳೆ ಭಾರತವು ಈ ಯೋಜನೆಯಲ್ಲಿ ಮುಂದುವರೆಯದಿದ್ದರೆ ತನ್ನ ದೇಶಿಯ ಕಂಪನಿಗಳ ಸಹಭಾಗಿತ್ವದೊಂದಿಗೆ ಮುಂದುವರೆಯಲು ನಿರ್ಧರಿಸಿರುವುದಾಗಿ ತಿಳಿಸಿದೆ.

**ಉತ್ತರ–ದಕ್ಷಿಣ ಸಾರಿಗೆ ಹೆದ್ದಾರಿ ಯೋಜನೆ (NSTC: North-South Transport Corridor)**

ಚೀನಾದ ನಂತರ, ಭಾರತವು ತನ್ನ ಸ್ವಂತ ಅಗತ್ಯಗಳಿಗೆ ಮತ್ತು ಪ್ರಪಂಚದ ಇತರ ಭಾಗಗಳಿಗೆ ಅಗ್ಗದ ಕಾರ್ಮಿಕ ಬಲವನ್ನು ಒದಗಿಸುವಲ್ಲಿ ಮುಂದಿದೆ ಹಾಗೂ ಜಗತ್ತಿನಲ್ಲಿ ಯಾವುದೇ ಪ್ರಮುಖ ಕೈಗಾರಿಕಾ ಬದಲಾವಣೆಯಾದರೆ ಭಾರತವೂ ಅದರಿಂದ ಪ್ರಯೋಜನ ಪಡೆಯುತ್ತದೆ. ಚೀನಾ ಈಗಾಗಲೇ $248ಮಿಲಿಯನ್ ಡಾಲರ್ ಹಣವನ್ನು ಪಾಕಿಸ್ತಾನದ ಗ್ವಾದರ್ ಬಂದರಿನ ಹಂತ–1 (ಗ್ವಾದರ್ ಬಂದರು ಪಾಕಿಸ್ತಾನದ ಆಳವಾದ ನೀರಿನ ಬಂದರು ಇದಾಗಿದ್ದು ಆರ್ಥಿಕ, ರಾಜಕೀಯ ಹಿತಾಸಕ್ತಿ ಮತ್ತು ಕಾರ್ಯತಂತ್ರದ ಉದ್ದೇಶಗಳಿಗಾಗಿ ಚೀನಾವು ಅಭಿವೃದ್ಧಿಪಡಿಸುತ್ತಿದೆ) ರಲ್ಲಿ ಹೂಡಿಕೆ ಮಾಡಿದ್ದು ಹಂತ–2ರಲ್ಲಿ ಸುಮಾರು $1.02 ಬಿಲಿಯನ್ ಡಾಲರ್ ಹೂಡಿಕೆ ಮಾಡಲು ಯೋಜನೆಯನ್ನು ರೂಪಿಸಿದೆ. ಚೀನಾದ ಬೃಹತ್ ಹೂಡಿಕೆಯ ಪರಿಣಾಮವಾಗಿ ಗ್ವಾದರ್ ಬಂದರು 13 ಬರ್ತ್‌ಗಳನ್ನು ಹೊಂದಿದ್ದು ಸುಮಾರು 350,000 ಡೆಡ್‌ವೇಟ್ ಟನ್‌ಗಳ ಬೃಹತ್ ವಾಹಕಗಳನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವನ್ನು ಹೊಂದಿದೆ. ವ್ಯಾಪಾರದ ದೃಷ್ಟಿಯಿಂದ ಗ್ವಾದರ್ ಬಂದರು ಸಿಸ್ತಾನ್–ಬಲೂಚಿಸ್ತಾನ್ ಪ್ರದೇಶದಲ್ಲಿ ನಿಸ್ಸಂದೇಹವಾಗಿ ಅತ್ಯಂತ ಉನ್ನತ ಮಟ್ಟದಲ್ಲಿದೆ. ಇದರಿಂದ ಭಾರತ ಚೀನಾದ ಸಿಲ್ಕ್ ರೋಡ್ ಆರ್ಥಿಕಪಟ್ಟಿಗೆ ಸಮನಾದ ಸಮರ್ಥ ವ್ಯಾಪಾರ ಮಾರ್ಗವನ್ನು ರಚಿಸುವ ಗುರಿಯನ್ನು ಹೊಂದಿದ್ದು ಇದಕ್ಕಾಗಿ ಸುಮರು US$635 ಮಿಲಿಯನ್ ಡಾಲರ್ ಹಣವನ್ನು ಚಬಹಾರ್ ಬಂದರು ಯೋಜನೆಯಲ್ಲಿ ಹೂಡಿಕೆ ಮಾಡಲು ಸಿದ್ಧವಿದೆ. ಏಕೆಂದರೆ ಚಬಹಾರ್ ಯೋಜನೆಯ ಅಭಿವೃದ್ಧಿಯ ಹಿಂದಿನ ಭಾರತದ ಧೀರ್ಘಾವಧಿಯ ಗುರಿ ಉತ್ತರ–ದಕ್ಷಿಣ ಸಾರಿಗೆ ಹೆದ್ದಾರಿ ಕಾರಿಡಾರ್. ಈ ಯೋಜನೆಯು ಮೊದಲಿಗೆ 2000ರಲ್ಲಿ ಚರ್ಚಿಸಲಾಯಿತು. ರಷ್ಯಾದ ಬಾಲ್ಟಿಕ್ ಸಮುದ್ರ ತೀರವನ್ನು ಇರಾನ್ ಮೂಲಕ ಅರೇಬಿಯನ್ ಸಮುದ್ರದಲ್ಲಿನ ಭಾರತದ ಪಶ್ಚಿಮ ಬಂದರುಗಳಿಗೆ ಸಂಪರ್ಕಿಸುವ ಸಾರಿಗೆ ಕಾರಿಡಾರ್ ಅನ್ನು ನಿರ್ಮಿಸುವ ಆಲೋಚನೆಯಿಂದ ರಷ್ಯಾ, ಭಾರತ ಮತ್ತು ಇರಾನ್ 2002 ರಲ್ಲಿ 7,200–ಕಿಮೀ ಉದ್ದದ ಅಂತರರಾಷ್ಟ್ರೀಯ ಉತ್ತರ–ದಕ್ಷಿಣ ಸಾರಿಗೆ ಕಾರಿಡಾರ್ (NSTC) ಅನ್ನು ಅಭಿವೃದ್ಧಿಪಡಿಸಲು ಪ್ರಾಥಮಿಕ ಒಪ್ಪಂದಗಳಿಗೆ ಸಹಿ ಹಾಕಿದವು. ಮೂರು ವರ್ಷಗಳ ನಂತರ, ಅಜೆರ್ಬೈಜಾನ್‌ಕೂಡ ಈ ಯೋಜನೆಗೆ ಸಹಿ ಹಾಕಿತು. ಈ ಒಪ್ಪಂದವನ್ನು ಅಂತಿಮವಾಗಿ 13 ದೇಶಗಳು – ಭಾರತ, ರಷ್ಯಾ, ಇರಾನ್, ಅಜೆರ್ಬೈಜಾನ್, ಬೆಲಾರುಸ್, ಬಲ್ಗೇರಿಯಾ, ಅರ್ಮೇನಿಯಾ, ಕಝಾಕಿಸ್ತಾನ್, ಕಿರ್ಗಿಸ್ತಾನ್, ಓಮನ್, ತಜಕಿಸ್ತಾನ್, ಟರ್ಕಿ ಮತ್ತು ಉಕ್ರೇನ್ ಅಂಗೀಕರಿಸಿದವು. ಆದರೆ ಈ ಯೋಜನೆಯು ಗ್ರಹಿಸಿದ ಸಾಮರ್ಥ್ಯ ಮತ್ತು ಪ್ರಮುಖ ಶಕ್ತಿಗಳಿಂದ ತೋರಿಸಲ್ಪಟ್ಟ ತೀವ್ರತೆಯ ಹೊರತಾಗಿಯೂ, ಇರಾನಿನ ಪರಮಾಣು ಕಾರ್ಯಕ್ರಮದ ಮೇಲೆ ಅಂತರರಾಷ್ಟ್ರೀಯ ನಿರ್ಬಂಧಗಳಿಂದಾಗಿ ಯೋಜನೆಯ ಅನುಷ್ಟಾನದಲ್ಲಿ ಸ್ವಲ್ಪ ನಿಧಾನಗತಿಯ ಚಲನೆಯನ್ನು ಕಾಣಬಹುದು.[14] ಈ ಯೋಜನೆಯು ಇನ್ನೂ ಪ್ರಾಥಮಿಕ ಹಂತದಲ್ಲಿದೆ. ಒಂದುವೇಳೆ ಭಾರತವು ಮಶ್ಹಾದ್ ಮೂಲಕ NSTC ಸೇರಿದರೆ ಬಾಲ್ಟಿಕ್ ರಾಜ್ಯಗಳ ಮಾರ್ಗವಾಗಿ ರಷ್ಯಾ ಮತ್ತು ಯುರೋಪ್ ರಾಷ್ಟ್ರಗಳಿಗೂ ವ್ಯಾಪಾರವನ್ನು ವಿಸ್ತರಿಸಬಹುದು.

NSTC ಅಧ್ಯಯನಗಳ ಪ್ರಕಾರ ಈ ಮಾರ್ಗವು ಸಾರಿಗೆ ಸಮಯವನ್ನು ಶೇ.60 ರಷ್ಟು ಮತ್ತು ಸಾರಿಗೆ ವೆಚ್ಚವನ್ನು ಶೇ.50 ರಷ್ಟು ಕಡಿಮೆ ಮಾಡುತ್ತದೆ.

ಜೊತೆಗೆ ಈ ಯೋಜನೆಯ ಭೂ ವ್ಯಾಪಾರ ಮಾರ್ಗಗಳು ಶಕ್ತಿ ಸಮೃದ್ಧಿ ದೇಶಗಳಾದ ಮಧ್ಯಏಷ್ಯಾ ರಾಷ್ಟ್ರಗಳೊಂದಿಗೆ ವ್ಯವಹಾರವನ್ನು ಸುಲಭಗೊಳಿಸುತ್ತದೆ. ಭಾರತವು ನಾಲ್ಕನೇ ಅತಿದೊಡ್ಡ ಇಂಧನ ಬಳಕೆದಾರ ದೇಶವಾಗಿರುವುದರಿಂದ ತುರ್ಕ್‌ಮೆನಿಸ್ತಾನ, ಕಜûಕಿಸಾನದಲ್ಲಿ ಲಭ್ಯವಿರುವ ಹೇರಳವಾದ ಅನಿಲ ನಿಕ್ಷೇಪಗಳು ಭಾರತದ ಹೆಚ್ಚುತ್ತಿರುವ ಶಕ್ತಿಯ ಬೇಡಿಕೆಯನ್ನು ಪೂರೈಸಲು ಸಹಾಯ ಮಾಡುತ್ತದೆ.

ಭಾರತದ ರಕ್ಷಣೆಯ ದೃಷ್ಟಿಯಿಂದ ಪಾಕಿಸ್ತಾನ ಮತ್ತು ಚೀನಾದ ಮಿಲಿಟರಿ ಚಟುವಟಿಕೆಗಳ ಮೇಲೆ ಗಮನಹರಿಸಲು ಹಾಗೂ ಅವರ ಹೆಜ್ಜೆಗುರುತುಗಳನ್ನು ಭೇದಿಸಲು ಚಬಹಾರ್ ಬಂದರು ಭಾರತದ ದೃಷ್ಟಿಯಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

**ಉಪಸಂಹಾರ**

ಚಬಹಾರ್ ಬಂದರು ಅಭಿವೃದ್ಧಿ ಯೋಜನೆಯಿಂದಾಗಿ ಇರಾನ್ ತನ್ನ ವ್ಯಾಪಾರವನ್ನು ಮತ್ತು ಆರ್ಥಿಕ ಪಾಲುದಾರರ ಪಟ್ಟಿಯನ್ನು ವೈವಿಧ್ಯಗೊಳಿಸಿಕೊಳ್ಳಬಹುದು. ಏಕೆಂದರೆ ಹೀಗಾಗಲೇ ತನ್ನಮೇಲಿನ ಅಂತರರಾಷ್ಟ್ರೀಯ ವ್ಯಾಪಾರ ಮತ್ತು ಆರ್ಥಿಕ ನಿರ್ಬಂಧಗಳಿಂದಾಗಿ ಕೇವಲ ರಷ್ಯಾ ಮತ್ತು ಚೀನಾ ರಾಷ್ಟ್ರಗಳು ಇರಾನಿನ ವ್ಯಾಪಾರದಲ್ಲಿ ಅಗ್ರಗಣ್ಯ ಪಾಲುದಾರರಾಗಿದ್ದು ಇರಾನಿನ ಆರ್ಥಿಕತೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿರುವುದನ್ನು ಕಾಣಬಹುದು. ಇದರಿಂದ ಇರಾನ್ ತನ್ನ ಕಚ್ಚಾತೈಲ ಮತ್ತು ಪೆಟ್ರೋಕೆಮಿಕಲ್ ಉತ್ಪನ್ನಗಳ ವಲಯದಲ್ಲಿ ಈ ಎರಡು ರಾಷ್ಟ್ರಗಳೇ ಭಾಗಶಃ ಏಕಸ್ವಾಮ್ಯವನ್ನು ಹೊಂದುವುದನ್ನು ತಡೆಯಬೇಕಿದೆ. ಭವಿಷ್ಯದಲ್ಲಿನ ರಾಜಕೀಯ ಬೆಳವಣಿಗೆಗೆ ಗುರಿಯಾಗಿ ಶತೃಗಳು ಮಿತ್ರರಾಗುವ ಅಥವಾ ಮಿತ್ರರು ಶತೃಗಳಾಗುವ ಸಂಭವವಿರುವುದರಿಂದ ಇರಾನ್ ಮತ್ತಷ್ಟು ಆರ್ಥಿಕ ನಷ್ಟಕ್ಕೆ ಗುರಿಯಾಗುವ ಅಪಾಯವಿರುತ್ತದೆ. ಆದ್ದರಿಂದ ಭಾರತದಂತಹ ದೈತ್ಯ ಶಕ್ತಿಯು ಚಬಹಾರ್ ಬಂದರಿನ ಅಭಿವೃದ್ಧಿಯ ಒಪ್ಪಂದದ ಕಾರಣದಿಂದಾಗಿ ತನ್ನ ಆರ್ಥಿಕಾಭಿವೃದ್ಧಿಯಲ್ಲಿ ಒಳಗೊಳ್ಳುವುದರಿಂದ ಇರಾನಿಗೂ ಕೂಡ ಹಲವು ರಾಷ್ಟ್ರಗಳೊಂದಿಗೆ ವ್ಯಾಪಾರವನ್ನು ವಿಸ್ತರಿಸಿಕೊಳ್ಳಬಹುದು.

USA ಜೊತೆಗೆ ಯುರೋಪಿಯನ್ ಯೂನಿಯನ್, ದಕ್ಷಿಣ ಕೊರಿಯಾ, ಸ್ವಿಟ್ಜರ್ಲೆಂಡ್, ಜಪಾನ್ ಆಸ್ಟ್ರೇಲಿಯಾದಂತಹ ಕೆಲವು ದೇಶಗಳು ಕೂಡ ಇರಾನ್‌ಮೇಲೆ ವಿವಿಧ ರೀತಿಯ ನಿರ್ಬಂಧಗಳನ್ನು ಹೊರಡಿಸಿವೆ. ಈ ನಿರ್ಬಂಧಗಳು ಭಾರತ ಮತ್ತು ಇತರ ದಕ್ಷಿಣಏಷ್ಯಾದ ದೇಶಗಳು ಸೇರಿದಂತೆ ಇತರರನ್ನು ಇರಾನಿನ ಆರ್ಥಿಕತೆಯ ಅಭಿವೃದ್ಧಿಯಿಂದ ನಿರ್ಬಂಧಿಸಲಾಗಿದೆ. ಒಟ್ಟಾರೆಯಾಗಿ ಚಬಹಾರ್ ಯೋಜನೆಯು USA ಮತ್ತು ಇರಾನ್ ನಡುವಿನ ವ್ಯಾಪಕವಾದ ಭೌಗೋಳಿಕ ರಾಜಕೀಯ ಕಾರಣಗಳಿಗೆ ಗುರಿಯಾಗುತ್ತಲೇ ಇರುವುದರಿಂದಾಗಿ ಭಾರತದ ಮಹತ್ವಾಕಾಂಕ್ಷೆ ಯೋಜನೆಯಾದ ಚಬಹಾರ್ ಯೋಜನೆಯ ಮೇಲೆ ಪ್ರತಿಕೂಲ ಪರಿಣಾಮಬೀರುತ್ತಲೇ ಇದೆ.

ಚೀನಾದ ವಿದೇಶಾಂಗ ನೀತಿಯನ್ನು ಎದುರಿಸಲು ನಮಗೆ ಇರಾನ್‌ನ ಜೊತೆಗಿನ ಸಂಬಂಧವು ಅತಿ ಅಗತ್ಯವಾಗಿದೆ. ತನ್ನ ಒನ್ ಬೆಲ್ಟ್ ಒನ್ ರೋಡ್ ಯೋಜನೆ ಮತ್ತು ಮಾರಿಟೈಮ್ ಸಿಲ್ಕ್‌ರೂಟ್ ಮೂಲಕ ಭಾರತವನ್ನು ಬಹುತೇಕ ಎಲ್ಲಾ ಕಡೆ ಸುತ್ತುವರೆದಿದೆ. ಇರಾನ್ ಚೀನಾದ ವಸಹಾತು ಆದರೆ ಭವಿಷ್ಯದಲ್ಲಿ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಇರಾನ್ ಭಾರತದಿಂದ ದೂರ ಹೋದರೆ ಭಾರತವು ಎಲ್ಲಾ ಕಡೆಯಿಂದ ಚೀನಾದ ಮುತ್ತಿಗೆಗೆ ಒಳಪಡುತ್ತದೆ. ಪರಿಣಾಮವಾಗಿ ಭಾರತದ ಆರ್ಥಿಕತೆ ಬಹಳಷ್ಟು ಹದಗೆಡುತ್ತದೆ. ಮತ್ತು ಭಾರತದ ಹೊರಗೆ ಚೀನಾವು ಭಾರತದಿಂದ ಎಲ್ಲಾ ವ್ಯಾಪಾರ ಅವಕಾಶಗಳನ್ನು ಕಸಿದುಕೊಳ್ಳುವ ಸಾಧ್ಯತೆ ಹೆಚ್ಚಾಗಿದೆ. ಭಾರತದ ಹಿತಾಸಕ್ತಿಗೂ ಕೂಡ ಚಬಹಾರ್ ಬಂದರು ಆರ್ಥಿಕವಾಗಿ, ರಾಜಕೀಯವಾಗಿ ಮತ್ತು

ಭೌಗೋಳಿಕವಾಗಿ ಮುಖ್ಯವಾಗಿರುವುದರಿಂದ ಚಬಹಾರ್ ಬಂದರಿನ ಅಭಿವೃದ್ಧಿ ಅತ್ಯಂತ ಮಹತ್ವವನ್ನು ಪಡೆದುಕೊಂಡಿದೆ.

**ಕೊನೆಟಿಪ್ಪಣಿಗಳು**


1. Jawad Falak, Zeeshan Muneer and Hassan Riaz, (n.d). *"Chabahar"India's Economic Gambit*. https://cscr.pk/pdf/ib/Chabahar.pdf
2. Amirthan, S. (2016). What are India, Iran, and Afghanistan’s Benefits from the Chabahar Port Agreement? *Strategic Analysis*, *41*(1), 87–93. https://doi.org/10.1080/09700161.2016.1249184.
3. Omidi, A., & Noolkar-Oak, G. (2021). Geopolitics of Chabahar Port for Iran, India and Afghanistan. *South Asia Research*, *42*(1), 21–39. https://doi.org/10.1177/02627280211055981 p.27
4. Narayan, S. M. S. (2023, July 27). India, Iran set to ink long-term deal on Chabahar port | Mint. *Mint*. https://www.livemint.com/news/india/india-iran-set-to-ink-long-term-deal-on-chabahar-port-11690482752365.html
5. *GDP growth (annual % ) India*. (n.d.). World Bank Open Data. https://data.worldbank.org/indicator/NY.GDP.MKTP.KD.ZG?locations=IN
6. Omidi, A., & Noolkar-Oak, G. (2021). Geopolitics of Chabahar Port for Iran, India and Afghanistan p.26
7. ವಿದೇಶಾಂಗ ವ್ಯವಹಾರಗಳ ಸಚಿವಾಲಯ, ಸಿ.ಎಂ ರಮೇಶ್‌ರವರ ಪ್ರಶ್ನೆ ಸಂಖ್ಯೆ 432, ದಿನಾಂಕ: 21.07.2016 (ಚಬಹಾರ್ ಬಂದರಿನ ಕುರಿತು ಭಾರತ ಮತ್ತು ಇರಾನ್ ನಡುವಿನ ಇತ್ತೀಚಿನ ಒಪ್ಪಂದದ ಮುಖ್ಯಾಂಶ ಮತ್ತು ಅದು ಭಾರತಕ್ಕೆ ಎಷ್ಟರ ಮಟ್ಟಿಗೆ ಸಹಾಯಕವಾಗಿದೆ?)ಕ್ಕೆ ವಿದೇಶಾಂಗ ವ್ಯವಹಾರಗಳ ಸಚಿವ ವಿಕೆ ಸಿಂಗ್ ರವರು ನೀಡಿದ ಉತ್ತರ.
8. Narayan, S. M. S. (2023, July 27). India, Iran set to ink long-term deal on Chabahar port
9. Amirthan, S. (2016b). What are India, Iran, and Afghanistan’s Benefits from the Chabahar Port Agreement? *Strategic Analysis*, *41*(1), 87–93. https://doi.org/10.1080/09700161.2016.1249184
10. Sujata Ashwarya Cheema. (2017). Indo-Iran Relations in the Post-Cold War; A Neo-Realist analysis**.** In R. Sidda Goud, Manisha Mookherjee. (ed.) *India and Iran in Contemporary Relations***,** Allied publishers Priv.Ltd., p.27
11. India Today webdesk. (2017). New Delhi, updated: Aug 10, 2017 14:07 IST
12. Anns George. (2017). Chabahar Port and India’s New Strategic Outpost in Middle East. In R. Sidda Goud, Manisha Mookherjee. (ed.) *India and Iran in Contemporary Relations***,** Allied publishers Priv. Ltd., p.89.
13. Narayan, S. M. S. (2023, July 27). India, Iran set to ink long-term deal on Chabahar port
14. Johny, S. (2023, May 20). *North-South Transport Corridor | Connecting continents*. The Hindu. https://www.thehindu.com/news/international/north-south-transport-corridor-connecting-continents/article66875206.ece

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.19-24
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ರಾಯಚೂರು ಜಿಲ್ಲೆಯ ಉಪ್ಪಾರ ಸಮುದಾಯದ ಆರ್ಥಿಕ ಸ್ಥಿತಿಗತಿಗಳು

**ರಾಮಕೃಷ್ಣ ಡಿ**
ಸಂಶೋಧನಾ ವಿದ್ಯಾರ್ಥಿ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು.

**Abstract:**
*ಉಪ್ಪಾರ ಸಮುದಾಯದವರು ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ಇವರು ತಮ್ಮ ಬದುಕನ್ನು ಸಾಗಿಸಲು ಅವಲಂಭಿಸಿರುವ ಪ್ರಮುಖ ಕ್ಷೇತ್ರವೆಂದರೆ ಕೃಷಿ, ಕೂಲಿ ಕಾರ್ಮಿಕರಾಗಿ ದುಡಿಯುವುದು. ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಮಣ್ಣಿನಿಂದ ಉಪ್ಪನ್ನು ತಯಾರಿಸಿ ಅದನ್ನು ಮಾರಾಟ ಮಾಡಿ ಜೀವನ ನಡೆಸುತ್ತಿದ್ದರು. ಉಪ್ಪಾರ ಸಮುದಾಯದವರು ರಾಯಚೂರು ಜಿಲ್ಲೆಯ ಏಳು ತಾಲೂಕುಗಳಲ್ಲಿಯೂ ಕಾಣಸಿಗುತ್ತಾರೆ. ಇವರು ನೆಲೆಸಿರುವ ವಿವಿಧ ಹಳ್ಳಿಗಳಲ್ಲಿ ಇಂದಿಗೂ ಕೂಡ ಉಪ್ಪಿನ ಮಾಳಗಳ ದಿಬ್ಬಗಳು ಅಳಿದುಳಿದಿರುವ ಸ್ಥಿತಿಯಲ್ಲಿ ಕಂಡುಬರುತ್ತವೆ. ಇವುಗಳನ್ನು ಅಲ್ಲಿಯ ಸ್ಥಳೀಯರು 'ಮಾಳಗುಡ್ಡೆಗಳು' ಎಂದು ಕರೆಯುತ್ತಾರೆ. ಉಪ್ಪನ್ನು ಮಾರಾಟ ಮಾಡಲು ಗಂಡಹೆಂಡಿರು ಇಬ್ಬರು ಹೋಗುತ್ತಿದ್ದರು. ಗಂಡನು ಇಪ್ಪತ್ತು ಸೇರು ಉಪ್ಪನ್ನು ಹೆಂಡತಿ ಹದಿನೈದು ಸೇರು ಉಪ್ಪನ್ನು ಪುಟ್ಟಿಯಲ್ಲಿ ಹಾಕಿಕೊಂಡು ತಲೆಯ ಮೇಲೆ ಇಟ್ಟುಕೊಂಡು ಆರು ಹರದಾರಿ ಅಂದರೆ ಇಪ್ಪತ್ನಾಲ್ಕು ಕಿ.ಮೀ. ದೂರದವರೆವಿಗೂ ಉಪ್ಪನ್ನು ಮಾರಾಟ ಮಾಡಲು ಹೋಗಿ ಬರುತ್ತಿದ್ದರು. ಈ ಲೇಖನದಲ್ಲಿ ಉಪ್ಪಾರ ಸಮುದಾಯದ ಪ್ರಸ್ತುತ ಆರ್ಥಿಕ ಸ್ಥಿತಿಗತಿಗಳ ಕುರಿತು ಅಧ್ಯಯನ ಮಾಡಲಾಗಿದೆ.*

**Keywords:** *ಉಪ್ಪಾರ ಸಮುದಾಯ, ರಾಯಚೂರು, ಉಪ್ಪು, ಗಣಮೂರು, ಗೋರ್ಕಲ್, ಸಾಲಗುಂದ.*

## ಪೀಠಿಕೆ

ಉಪ್ಪಾರ ಸಮುದಾಯವು ಅತ್ಯಂತ ಹಿಂದುಳಿದ ಸಮುದಾಯವಾಗಿದೆ. ಇವರು ಪ್ರಮುಖವಾಗಿ ದಕ್ಷಿಣ ಭಾರತದ ಆಂಧ್ರ ಪ್ರದೇಶ, ತೆಲಂಗಾಣ, ಕರ್ನಾಟಕ, ತಮಿಳುನಾಡುಗಳಲ್ಲಿ ಕಂಡುಬರುತ್ತಾರೆ. ಇವರು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಕಂಡುಬರುತ್ತಾರೆ. ಆರ್ಥಿಕವಾಗಿ ಹಿಂದುಳಿದಿರುವ ಈ ಸಮುದಾಯವನ್ನು ಕರ್ನಾಟಕದಲ್ಲಿ ಪ್ರವರ್ಗ–1ರಲ್ಲಿ ಸೇರಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ರಾಯಚೂರು ಜಿಲ್ಲೆಯಲ್ಲಿಯೂ ಕೂಡ ಈ ಸಮುದಾಯದವರು ಬಹುತೇಕ ಹಳ್ಳಿಗಳಲ್ಲಿ ನೆಲೆಸಿದ್ದಾರೆ. ಆರ್ಥಿಕವಾಗಿ ದುರ್ಬಲವಾಗಿರುವ ಈ ಸಮುದಾಯ ಇಂದಿಗೂ ಕೂಡ ಕೃಷಿ ಕೂಲಿಯಾಳುಗಳಾಗಿ ದುಡಿದು ಜೀವನ ಸಾಗಿಸುತ್ತಿದ್ದಾರೆ.

ಈ ಮೊದಲು ಇವರು ಮಣ್ಣಿನಿಂದ ಉಪ್ಪನ್ನು ತಯಾರಿಸಿ ಮಾರಾಟ ಮಾಡಿ ಜೀವನ ನಡೆಸುತ್ತಿದ್ದರು. ಹಾಗಾಗಿ ಇವರನ್ನು ಮಣ್ಣು ಉಪ್ಪಾರರು ಎಂದೂ ಸಹ ಕರೆಯುತ್ತಾರೆ. ಉಪ್ಪು ಮಾರಾಟ ಮಾಡುವುದು ಈ ಸಮುದಾಯದ ಮುಖ್ಯ ಕಸುಬಾಗಿತ್ತು. ಇದರೊಂದಿಗೆ ಕೆಲವರು ಸುಣ್ಣದ ಕಲ್ಲುಗಳನ್ನು ಸುಟ್ಟು ಸುಣ್ಣವನ್ನು ತಯಾರಿಸುತ್ತಿದ್ದರು. ಉಪ್ಪಾರರು ಮನೆಗಳಿಗೆ ಮಣ್ಣಿನ

***Please cite this article as:*** ರಾಮಕೃಷ್ಣ ಡಿ. (2024). ರಾಯಚೂರು ಜಿಲ್ಲೆಯ ಉಪ್ಪಾರ ಸಮುದಾಯದ ಆರ್ಥಿಕ ಸ್ಥಿತಿಗತಿಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 2(6), 19–24.

ಗೋಡೆಗಳನ್ನು ಕಟ್ಟುವ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲಾರಂಭಿಸಿದರು.

ಗಣಮೂರು ಗ್ರಾಮವು ರಾಯಚೂರು ತಾಲೂಕಿನ ವ್ಯಾಪ್ತಿಯಲ್ಲಿದೆ. ಈ ಊರಿನಲ್ಲಿ ಮೊದಲು ಮೂರು ಮಾಳಗಳಿದ್ದವು. ಈಗ ಅವುಗಳನ್ನು ನೆಲಸಮಗೊಳಿಸಿ ಹೊಲಗಳನ್ನಾಗಿ ಮಾರ್ಪಾಡಿಸಿದ್ದಾರೆ. ಉಳಿದ ಎರಡು ಮಾಳಗಳ ದಿಬ್ಬಗಳು ಉಳಿದಿವೆ. ಶ್ರೀ ಬಮಲ್ಲಪ್ಪ ತಂದೆ ಯಂಕಪ್ಪ, ಸರ್ವೆ ನಂಬರ 112 ಹಿಸ್ಸಾ–1 ಇವರ ಹೊಲದ ಬಳಿ ಒಂದು ಮಾಳವಿದೆ. ಇದು ಸುಮಾರು ಒಂದೂವರೆ ಎಕರೆ ಸುತ್ತಳತೆಯನ್ನು ಹೊಂದಿದೆ. ಇನ್ನೊಂದು ಮಾಳವು ಸುಮಾರು ನಾಲ್ಕು ಎಕರೆ ವಿಸ್ತೀರ್ಣವನ್ನು ಹೊಂದಿದ್ದು ಇದು ಊರಿನ ಕೆರೆಯ ಭಾಗದ ಕಡೆ ಇದೆ. ಈ ಮಾಳೆಗಳಲ್ಲಿ ಉಪ್ಪನ್ನು ಉತ್ಪಾದಿಸುವ ಮತ್ತು ಅದನ್ನು ಮಾರಾಟ ಮಾಡುವ ವೃತ್ತಿ ಜೀವನವನ್ನು ಸುಮಾರು ಅರವತ್ತು ವರ್ಷಕ್ಕೂ ಹಿಂದೆ ಆರು ಗುಂಪುಗಳು ಕೈಗೊಂಡಿದ್ದರು. ಆ ಗುಂಪುಗಳನ್ನು ಮುಖ್ಯಸ್ಥರಿಂದ ಗುರುತಿಸುತ್ತಿದ್ದರು. ಆ ಗುಂಪುಗಳೆಂದರೆ ಜಂಬಯ್ಯ, ಸ್ವಾರಕಾಯಿ ಲಸ್ಮಪ್ಪ, ಸೆವಟಿ ನಾಗಣ್ಣ, ಉಪ್ಪಾರ ನರಸಪ್ಪ, ಉಪ್ಪಾರ ಪೆದ್ದಪಾಗುಂಟಪ್ಪ, ತೀಸ ಪಾಗುಂಟಪ್ಪ ದೊಡ್ಡ ಹನುಮಪ್ಪ, ಸಣ್ಣ ಹನುಮಪ್ಪ, ತಾಯಪ್ಪ, ಗಟ್ಟನ್ನ ಮುಂತಾದವವರು ಸಹ ಈ ಮಾಳಗಳಲ್ಲಿ ಉಪ್ಪನ್ನು ಉತ್ಪಾದನೆ ಮಾಡುತ್ತಿದ್ದರು. ಆದರೆ ಇವರ ಮಕ್ಕಳಾದ ರಂಗಪ್ಪ, ಶ್ರೀನಿವಾಸ, ಪಾಗುಂಟಪ್ಪ, ಹನುಮಂತ ಇನ್ನಿತರರು ಇಂದು ಈ ವೃತ್ತಿಯನ್ನು ಕೈಬಿಟ್ಟು ಇದೇ ಊರಿನಲ್ಲಿರುವ ಭೂಮಾಲೀಕರ ಹೊಲಗಳಲ್ಲಿ ದಿನಗೂಲಿ ಮಾಡುತ್ತಿದ್ದಾರೆ. ಈ ವಿಷಯವನ್ನೆಲ್ಲಾ ವಿವರಿಸಿ ಹೇಳಿದ ಉಪ್ಪಾರ ಜನಾಂಗದ ಹಿರಿಯಾರಾದ ಮುನಿಯಪ್ಪನವರಿಗೆ ಈಗ ಸುಮಾರು ಎಪ್ಪತ್ತು ವರ್ಷಗಳಾಗಿವೆ. ಇವರು ತಮಗೆ ಸುಮಾರು ಹದಿನಾರು ವಯಸ್ಸು ಇರುವಾಗಲೇ ಈ ಮಾಳೆಗಳು ಚಾಲ್ತಿಯಲ್ಲಿದ್ದವೆಂದು ಹೇಳುತ್ತಾರೆ. ಇದೇ ಗ್ರಾಮದ ನರಸಿಂಹಲು ತಂದೆ ದೊಡ್ಡ ರಂಗಣ್ಣ ಈಗ ಅವರ ವಯಸ್ಸು ಅರವತ್ತು ಮೇಲ್ಪಟ್ಟು ಆಗಿದ್ದು ತಾವು ಸುಮಾರು ಹದಿನೈದು ವಯಸ್ಸಿನವರಾಗಿದ್ದಾಗ ಈ ಮಾಳೆಗಳು ಚಾಲ್ತಿಯಲ್ಲಿದ್ದವೆಂದು ಹೇಳುತ್ತಾರೆ. ಎಪ್ಪತ್ತೆರಡು ವಯಸ್ಸಿನ ಗೋವಿಂದಪ್ಪನವರ ಪ್ರಕಾರ ಹೀಗೆ ಸುಮಾರು ಅರವತ್ತು ವರ್ಷಗಳ ಹಿಂದೆ ನಮ್ಮ ತಂದಿರು (ತಂದೆ) ಉಪ್ಪನ್ನು ತಯಾರಿಸುವಾಗ ನಾನು ಹನ್ನೆರಡು ವರ್ಷದ ಹುಡುಗನಾಗಿದ್ದೆನು ಎಂದು ತಿಳಿಸಿದರು.

ಗೋರ್ಕಲ್ ಈ ಗ್ರಾಮವು ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿದೆ. ಈ ಊರಿನಲ್ಲಿ ಸುಮಾರು ನಾಲ್ಕು ಕಡೆಗಳಲ್ಲಿ ಹಿಂದೆ ಉಪ್ಪನ್ನು ತಯಾರು ಮಾಡಲಾದ ಮಾಳೆಗಳ ದಿಬ್ಬಗಳು ಕಂಡುಬರುತ್ತವೆ. ಒಂದು ಮಾಳೆವು ಗೋರ್ಕಲ್ ಗ್ರಾಮದಿಂದ ಸುಮಾರು ಒಂದೂವರೆ ಕಿ.ಮೀ. ದೂರದಲ್ಲಿದೆ. ಅಂದರೆ ಗೋರ್ಕಲ್‌ನ ಅಡ್ಡರಸ್ತೆಯಿಂದ ರಾಜಲಬಂಡಕ್ಕೆ ಹೋಗುವ ಮುಖ್ಯ ಹಾದಿಯ ಎಡ ಭಾಗದಲ್ಲಿದೆ. ಉಳಿದ ಎರಡು ಮಾಳೆಗಳು ಗೋರ್ಕಲ್ ಅಡ್ಡರಸ್ತೆಯಿಂದ ಊರಿನೆಡೆಗೆ ಹೋಗುವ ಹಾದಿಯಲ್ಲಿ ಬಲಗಡೆ ತಿರುಗಿ ಸುಮಾರು ಅರ್ಧ ಕಿ.ಮೀ. ಅಂತರದಲ್ಲಿ ಎರಡು ಮಾಳೆಗಳು ಸಿಗುತ್ತವೆ. ಇನ್ನೊಂದು ಮಾಳೆ ಊರಿನ ಅಗಸೆ ದ್ವಾರದ ಮುಂದಿನ ಎಡಭಾಗದ ರಸ್ತೆಯಿಂದ ಊರಿನ ಹಿಂದುಗಡೆ ಸುಮಾರು ಮೂರು ಕಿ.ಮೀ. ದೂರದಲ್ಲಿ ಕಂಡುಬರುತ್ತದೆ. ಈ ಊರಿನಲ್ಲಿ ಹಿಂದೆ ಸಮಾರು ಅರವತ್ತು–ಅರವತ್ತೈದು ವರ್ಷಗಳ ಹಿಂದೆ ನಾಲ್ವರು ಅಣ್ಣತಮ್ಮಂದಿರು ಉಪ್ಪು ಮಾಡುವ ಕಾಯಕದಲ್ಲಿ ನಿರತರಾಗಿದ್ದರು. ಅವರುಗಳೆಂದರೆ, ತಿಪ್ಪಣ್ಣ, ತಾಯಪ್ಪ, ಬಸವರಾಜಪ್ಪ ಮತ್ತು ಯಂಕಪ್ಪ. ಅಂದಿನ ಉಪ್ಪನ್ನು ತಯಾರಿಸುವ ಕಾಯಕದಲ್ಲಿ ಉಪ್ಪನ್ನು ತಯಾರಿಸಿ ಅದನ್ನು ಸರಬರಾಜು ಮಾಡುವ ವಿಷಯದಲ್ಲಿ ತುಂಬಾ ಎಚ್ಚರಿಕೆಯನ್ನು ವಹಿಸಬೇಕಾಗಿತ್ತು. ಆದುದರಿಂದ ತಿಪ್ಪಣ್ಣ, ತಾಯಪ್ಪ, ಬಸವರಾಜಪ್ಪ ತಲಾ ಒಂದು ಕೋಣವನ್ನು ಮತ್ತು ಯಂಕಪ್ಪನು ಎರಡು ಕೋಣಗಳನ್ನು ಹೊಂದಿದ್ದರು.

ಪ್ರತಿಯೊಬ್ಬರು ಸುಮಾರು ಐದರಿಂದ ಆರು ಕ್ವಿಂಟಲ್ ಉಪ್ಪನ್ನು ತಯಾರಿಸುತ್ತಿದ್ದರು.

ಸಾಲಗುಂದ ಗ್ರಾಮವು ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಸಾಲಗುಂದ ಹೋಬಳಿಯ ಒಂದು ಸಣ್ಣ ಗ್ರಾಮವಾಗಿದೆ. ಈ ಗ್ರಾಮವು ಜಿಲ್ಲಾ ಕೇಂದ್ರವಾದ ರಾಯಚೂರು ನಗರದಿಂದ ಸುಮಾರು 110 ಕಿ.ಮೀ. ಮತ್ತು ತಾಲೂಕು ಕೇಂದ್ರವಾದ ಸಿಂಧನೂರು ಪಟ್ಟಣದಿಂದ ಸುಮಾರು 19 ಕಿ.ಮೀ. ದೂರದಲ್ಲಿದೆ. ಈ ಊರಿನಲ್ಲಿ ಎರಡು ದೊಡ್ಡ ಉಪ್ಪಿನ ಮಾಳೆಗಳ ದಿಬ್ಬಗಳು ಕಂಡುಬರುತ್ತವೆ. ಒಂದು ಮಾಳೆಯು ಸುಮಾರು 4 ಎಕರೆ ವಿಸ್ತೀರ್ಣ ಸ್ಥಳದಲ್ಲಿ ಕಂಡುಬರುತ್ತದೆ. ಇನ್ನೊಂದು ಮಾಳೆಯು ಸುಮಾರು 3 ಎಕರೆ ವಿಸ್ತೀರ್ಣ ಸ್ಥಳದಲ್ಲಿದೆ. ಈಗ ಮಾಳೆಗಳು ಅಳಿದು ಹೋಗಿ ಮಾಳೆಯ ದಿಬ್ಬಗಳು ಮಾತ್ರ ಕಂಡುಬರುತ್ತವೆ. ಈ ದಿಬ್ಬಗಳು ಸುಮಾರು 30 ಅಡಿ ಎತ್ತರವಾಗಿರುತ್ತವೆ. ಶ್ರೀ ತಿಪ್ಪಣ್ಣ ತಂದೆ ಛತ್ರಪ್ಪ ವಯಸ್ಸು ಸುಮಾರು 72. ಇವರು ಹೇಳುವ ಪ್ರಕಾರ ಇವರು ತಮ್ಮ ತಂದೆಯವರಾದ ಛತ್ರಪ್ಪನವರೊಂದಿಗೆ ಸುಮಾರು 18 ವಯಸ್ಸಿನವರಾದ ಇವರು ಅವರ ಜೊತೆಯಲ್ಲಿ ಸೇರಿಕೊಂಡು ಉಪ್ಪನ್ನು ಉತ್ಪಾದನೆ ಮಾಡುತ್ತಿದ್ದರು. ಹೀಗೆ ಈ ಕಾಯಕವನ್ನು ಸುಮಾರು ತಮ್ಮ 25ನೇ ವಯಸ್ಸಿನವರೆಗೆ ಮುಂದುವರೆಸಿದ್ದಾರೆ. ಈ ಊರಿನ ಮಾಳೆಗಳು ಈ ಊರಿನಿಂದ ನದಿಗೆ ಹೋಗುವ ಹಾದಿಯಲ್ಲಿ ಎಡಭಾಗದಲ್ಲಿವೆ. ಇವು ಊರಿನಿಂದ ಸುಮಾರು 2.5 ಕಿ.ಮೀ. ದೂರದಲ್ಲಿವೆ. ಮಾಳೆಗಳಿಂದ ಸುಮಾರು 1 ಕಿ.ಮೀ.ದೂರದಲ್ಲಿ ಉಪ್ಪುಮಣ್ಣು ದೊರೆಯುವ ಸ್ಥಳವಿದೆ. ಈ ಉಪ್ಪುಮಣ್ಣು ದೊರೆಯುವ ಸ್ಥಳವು ಸಾಲಗುಂದ, ಸೋಮ್ಲಾಪುರ ನಡುವಿನ ಅಡವಿ ಪ್ರದೇಶವಾಗಿದ್ದು ಇದನ್ನು ಡೇಗಲ್ ಪ್ರದೇಶ ಎಂದು ಸ್ಥಳೀಯರು ಕರೆಯುತ್ತಾರೆ. ಅಂದು ಆ ಮಾಳೆಗಳಲ್ಲಿ ಉಪ್ಪು ತಯಾರಿಸುತ್ತಿದ್ದ ಪ್ರಮುಖ ವ್ಯಕ್ತಿಗಳೆಂದರೆ, ಒಣಕೆ ರಂಗಮ್ಮ, ಛತ್ರಪ್ಪನವರು, ತಲೆಖಾನ್ ರಂಗಪ್ಪ, ತಲೆಖಾನ್ ಲಕ್ಷ್ಮಪ್ಪ, ತಲೆಖಾನ್ ಬಸಪ್ಪ ಮುಂತಾದವರು. ಪ್ರತಿ ಕುಟುಂಬದವರು ಒಂದೊಂದು ಕೋಣವನ್ನು ಸಾಕಿದ್ದರು. ಏಕೆಂದರೆ ಇವರಿಗೆ ಉಪ್ಪಿನ ಮಣ್ಣು ಬೇಕಾದಾಗ ಉಪ್ಪಿನಮಣ್ಣು ಸಿಗುವ ಸ್ಥಳಕ್ಕೆ ಹೋಗಿ ಅಲ್ಲಿಂದ ಒಂದು ಕೋಣದ ಮೇಲೆ ಎರಡು ಚೀಲಗಳಂತೆ ಮಣ್ಣನ್ನು ಸಾಗಿಸಿ ತಂದು ಮಾಳೆಯಲ್ಲಿ ಸಂಗ್ರಹಿಸುತ್ತಿದ್ದರು. ಆ ಒಂದೊಂದು ಚೀಲವು 40 ರಿಂದ 50 ಕೆಜಿ ಉಪ್ಪಿನ ಮಣ್ಣನ್ನು ತುಂಬಿಸಲಾಗುತ್ತಿತ್ತು. ಹೀಗೆ ಒಂದು ದಿನದಲ್ಲಿ ಒಂದು ಕೋಣದಿಂದ ಎರಡು ಬಾರಿ ಉಪ್ಪು ಮಣ್ಣನ್ನು ಮಾಳಿಗಳಿಗೆ ತಂದು ಸಂಗ್ರಹಿಸುತ್ತಿದ್ದರು.

ತಿಪ್ಪಣ್ಣನವರು ತಮ್ಮ ತಂದೆಯವರು ಉಪ್ಪನ್ನು ತಯಾರಿಸುತ್ತಿದ್ದ ವಿಧಾನವನ್ನು ಎಳೆ ಎಳೆಯಾಗಿ ಬಿಡಿಸಿ ವಿವರಿಸಿದರು. ಮೊದಲನೆಯದಾಗಿ ಮಾಳೆದಲ್ಲಿ ಅಮರೆ ತಪ್ಪಲನ್ನು ಹಾಕಿ ಅದನ್ನು ಮಾಳೆಯ ಮೋರಿಗೆ ಇಟ್ಟಿರುತ್ತಾರೆ. ಏಕೆಂದರೆ ಮಾಳೆಯಲ್ಲಿನ ಉಪ್ಪಿನ ಸಾರ ನಿಧಾನವಾಗಿ ಬಸಿಯಲೆಂದು ಅಡ್ಡವಾಗಿ ಇಟ್ಟಿರುತ್ತಾರೆ. ನಂತರ ಅದರ ಮೇಲೆ ಸ್ವಲ್ಪ ಪ್ರಮಾಣದಲ್ಲಿ ಸವಳು ಮಣ್ಣನ್ನು ಹಾಕುತ್ತಾರೆ, ನಂತರ ಅದರ ಮೇಲೆ ಕೆಲವಷ್ಟು ಬಿಂಚೆಕಲ್ಲುಗಳನ್ನು ಹಾಕುತ್ತಾರೆ. ನಂತರ ಅದರ ಮೇಲೆ ಉಪ್ಪಿನ ಮಣ್ಣನ್ನು ಸುರಿಯುತ್ತಾರೆ. ಅದರ ಮೇಲೆ ಮೂರು ಇಂಚುಗಳಷ್ಟು ಎತ್ತರ ನೀರು ನಿಲ್ಲುವವರೆಗೆ ನೀರು ಹಾಕಿ ಅದನ್ನು ಸುಮಾರು 24 ಗಂಟೆಗಳ ಕಾಲ ಹಾಗೆಯೇ ಬಿಟ್ಟುಬಿಡುತ್ತಾರೆ. ಒಳಗಿನ ಆ ಮಣ್ಣು ಪೂರ್ತಿಯಾಗಿ ನೆನೆದು ನಂತರ ಆ ಮೋರಿಯಿಂದ ನಿಧಾನವಾಗಿ ನೀರು(ಚಾರ) ಬಸಿಯಲು ಆರಂಭವಾಗುತ್ತದೆ. ಆ ಬಸಿಯುವಂತ ಸಾರವು ಒಂದು ಕಡೆ ಸಂಗ್ರಹವಾಗುವಂತೆ ಮೋರಿಯ ಕೆಳಗೆ ಒಂದು ಕೇಲನ್ನು ನಿರ್ಮಾಣ ಮಾಡಿಟ್ಟಿರುತ್ತಿದ್ದರು. ನಂತರ ಸಂಗ್ರಹವಾದ ಆ ಚಾರವನ್ನು ಕೊಡ(ಬಿಂದಿಗೆ)ಗಳಲ್ಲಿ ತೆಗೆದುಕೊಂಡು ಕಟ್ಟೆಗಳ ಮೇಲೆ ಆ ಚಾರವನ್ನು ಹಾಕುತ್ತಿದ್ದರು. ಸಾಲಗುಂದದಲ್ಲಿ ಒಟ್ಟು ಎರಡು ಮಾಳೆಯ

ದಿಬ್ಬಗಳಿವೆ. ಒಂದು ದೊಡ್ಡ ಮಾಳೆಯ ದಿಬ್ಬದ ಮಧ್ಯದಲ್ಲಿ 3 ಕಟ್ಟೆಗಳಿವೆ. ಒಂದೊಂದು ಕಟ್ಟೆಗಳ ಉದ್ದ 6 ಮತ್ತು ಅಗಲ 6 ಅಡಿಗಳ ವಿಸ್ತೀರ್ಣವನ್ನು ಹೊಂದಿವೆ. ಒಂದು ಬಾರಿ ಕಟ್ಟೆಗಳ ಮೇಲಿನ ಉಪ್ಪನ್ನು ಬಸಿದುಕೊಂಡರೆ ಒಂದು ಕಟ್ಟೆಗೆ ಒಂದು ಚೀಲದಂತೆ ಮೂರು ಕಟ್ಟೆಗಳಿಂದ ಒಮ್ಮೆ ಸಂಗ್ರಹಿಸಿದ ಉಪ್ಪು ಸುಮಾರು 50 ಕೆ.ಜಿ. ಗಳಷ್ಟು ದೊರಕುತ್ತಿತ್ತು.

ಮೇಲೆ ವಿವರಿಸಲಾದಂತೆ ಉತ್ಪಾದಿಸಲಾದ ಉಪ್ಪನ್ನು ಮಣ್ಣುಪ್ಪು ಎಂದು ಕರೆಯುತ್ತಾರೆ. ಈ ಉಪ್ಪನ್ನು ಕೆಲವು ಗಿಡಮೂಲಿಕೆ ಔಷಧಗಳಲ್ಲಿ ಉಪಯೋಗಿಸುತ್ತಾರೆ. ಕಟ್ಟೆಗಳ ಮೇಲೆ ಹಾಕಲಾದ ಆ ಉಪ್ಪಿನ ಚಾರವು ವಾತಾವರಣವನ್ನು ಅವಲಂಬಿಸಿ ಮೂರು ದಿನಗಳಲ್ಲಿ ಹೆಪ್ಪುಗಟ್ಟಿ ಉಪ್ಪಿನ ಹರುಳುಗಳಾಗಿ ಮಾರ್ಪಡುತ್ತದೆ. ಇಂತಹ ಉಪ್ಪನ್ನು ಇವರು 1 ರೂಪಾಯಿಗೆ 16 ಸೇರುಗಳಂತೆ ಮಾರಾಟ ಮಾಡುತ್ತಿದ್ದರು. ಇವರು ಉಪ್ಪನ್ನು ಮಾರಾಟ ಮಾಡಲು ತಮ್ಮ ಗ್ರಾಮದ ಸುತ್ತಮುತ್ತಲಿನ ಹಳ್ಳಿಗಳಾದ ಕೆಂಗೆಲ್, ಅಲಬನೂರು, ಹರಟೆನೂರು, ಗಿಣಿವಾರ, ಬಾದರ್ಲಿ, ಕನ್ನಾರಿ, ಮಾಡಶಿರವಾರ ಇತ್ಯಾದಿ ಕಡೆಗಳಿಗೆ ಹೋಗುತ್ತಿದ್ದರು. ಅಗಸರು ಇವರ ಬಟ್ಟೆಗಳನ್ನು ತೊಳೆಯುತ್ತಿದ್ದರು ಮತ್ತು ಅದಕ್ಕೆ ಪ್ರತಿಯಾಗಿ ವರ್ಷಕ್ಕೆ ಒಂದು ಚೀಲ ಉಪ್ಪನ್ನು ಕೊಡುತ್ತಿದ್ದರು. ಇವರಿಗೆ 2 ಸೇರು ಮುಂಗಾರು ಜೋಳ ಕೊಟ್ಟರೆ, ಇವರು ಅವರಿಗೆ 16 ಸೇರು ಉಪ್ಪನ್ನು ಕೊಡುತ್ತಿದ್ದರು. 1 ಸೇರು ಮುಂಗಾರು ಜೋಳ ಕೊಟ್ಟರೆ, ಇವರು ಅವರಿಗೆ 8 ಸೇರು ಉಪ್ಪನ್ನು ಕೊಡುತ್ತಿದ್ದರು.

ಸಿದ್ದಪ್ಪನವರು ತಮ್ಮ 25ರ ವಯಸ್ಸಿನ ನಂತರ ಒಕ್ಕಲುತನದಲ್ಲಿ ರಾಸಾಯನಿಕ ಗೊಬ್ಬರ ಮತ್ತು ನೀರಾವರಿಯ ಸೌಲಭ್ಯಗಳಿಂದಾಗಿ ಉಪ್ಪು ಉತ್ಪಾದಿಸುವ ತಮ್ಮ ಕುಲಕಸಬನ್ನು ಬಿಟ್ಟು ಪೂರ್ಣವಾಗಿ ತಮ್ಮನ್ನು ಒಕ್ಕಲುತನದಲ್ಲೆ ತೊಡಗಿಸಿಕೊಂಡರು. ಇದಕ್ಕೆ ಕಾರಣವೆನೆಂದರೆ ಸರ್ಜಾಪುರ ಗ್ರಾಮವು ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲೂಕಿನ ವ್ಯಾಪ್ತಿಯಲ್ಲಿದೆ. ಈ ಊರಿನಲ್ಲಿ ಒಟ್ಟು ಸುಮಾರು ಎಂಟು ಮಾಳೆಗಳಿವೆ. ಊರಿನಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿ ಎರಡು ಮಾಳೆಗಳಿವೆ. ಸರ್ಜಾಪುರ ಗ್ರಾಮದಿಂದ ಗುಡದನಾಳ ಗ್ರಾಮಕ್ಕೆ ಹೋಗುವ ದಾರಿಯ ಎಡಭಾಗದಲ್ಲಿ ಎರಡು ಮಾಳೆಗಳಿವೆ. ಸರ್ಜಾಪುರ ಗ್ರಾಮದಿಂದ ಸಂತೆಕಲ್ಲೂರಿಗೆ ಹೋಗುವ ಕಾಲುದಾರಿಯ ಬಲಭಾಗದಲ್ಲಿ ಎರಡು ಮಾಳೆಗಳಿವೆ. ಇವು ಊರಿನಿಂದ ಸುಮಾರು ಒಂದು ಕಿ.ಮೀ. ದೂರದಲ್ಲಿವೆ. ಊರು ಮುಂದಿನ ಹಳ್ಳದ ದಂಡೆಯಲ್ಲಿ ಒಂದು ಮಾಳೆಯಿದೆ. ಇಲ್ಲಿನ ಉಪ್ಪಾರರು ಉಪ್ಪನ್ನು ಉತ್ಪಾದಿಸಲು ಉಪ್ಪಿನ ಮಣ್ಣನ್ನು ಮಾಳೆಗಳಿಂದ ಸುಮಾರು ಒಂದು ಕಿ.ಮೀ. ದೂರದಲ್ಲಿರುವ ಹಿರೆಹಳ್ಳ ಎಂಬ ಹಳ್ಳದ ದಡಗಳ ಭಾಗದಿಂದ ಸಂಗ್ರಹಿಸುತ್ತಿದ್ದರು. ಈ ಮಣ್ಣನ್ನು ಇಲ್ಲಿಂದ ಮಾಳೆಗಳವರೆಗೆ ಹೊಯ್ಯಲು ಅಥವಾ ತೆಗೆದುಕೊಂಡು ಹೋಗಲು ಇವರು ಕೋಣಗಳನ್ನು ಸಾಕಿದ್ದರು. ಪ್ರತಿ ಕೋಣದ ಮೇಲೆ ಎರಡು ಗೋಣಿ ಚೀಲಗಳ ತುಂಬ ಮಣ್ಣನ್ನು ಹೊಯ್ಯುತ್ತಿದ್ದರು. ಇವರು ಒಂದು ಮಾಳೆದಲ್ಲಿ ಹತ್ತು ಬುಟ್ಟಿ ಪುಟ್ಟಿಗಳ ಮಣ್ಣು ಹಾಕಿದರೆ ಸುಮಾರು ಆರು ಕೊಡ ನೀರು ಬೆರೆಸುತ್ತಿದ್ದರು. ಉಪ್ಪು ಮಣ್ಣು ಮತ್ತು ನೀರು ನೆನೆದು ಆ ಮಾಳೆಯ ಮೋರಿಯ ಮೂಲಕ ನಿಧಾನವಾಗಿ ಚಾರವಾಗಿ ಮೋರಿಯ ಕೆಳಗಿದ್ದ ಕೇಲಿನಲ್ಲಿ ಸೋರುತ್ತಿತ್ತು. ಅದು ಸುಮಾರು ಮೂವತ್ತು ಲೀಟರ್‌ನ ನಾಲ್ಕು ಕೊಡದಷ್ಟು ಆಗುತ್ತಿತ್ತು. ಆ ನಾಲ್ಕು ಕೊಡದಷ್ಟು ಚಾರವನ್ನು ಮಾಳೆ ಕಟ್ಟೆಗಳ ಮೇಲೆ ಸುರಿಯುತ್ತಿದ್ದರು. ಅದು ಸುಮಾರು ಒಂದು ವಾರದಲ್ಲಿ ಉಪ್ಪಾಗಿ ಸಿದ್ಧವಾಗುತ್ತಿತ್ತು. ಸಿದ್ಧವಾದ ಉಪ್ಪನ್ನು ಅಗೆವುಗಳಿಗೆ ಹಾಕಿ ಉಪ್ಪನ್ನು ಸಂಗ್ರಹ ಮಾಡುತ್ತಿದ್ದರು. ಈ ಉಪ್ಪನ್ನು ಉತ್ಪಾದನೆ ಮಾಡುವ ಕಾರ್ಯವು ಸಾಮಾನ್ಯವಾಗಿ ಎಳ್ಳ ಅಮವಾಸ್ಯೆಯಿಂದ ಮೊದಲ್ಗೊಂಡು ಸುಮಾರು ಎಂಟು ತಿಂಗಳಗಳ ಕಾಲ ಈ ಉಪ್ಪನ್ನು ಉತ್ಪಾದಿಸುವ ಕಾರ್ಯಕ್ರಮವು

ನಡೆಯುತ್ತದೆ. ನಂತರದ ಕಾಲವನ್ನು ಮನೆಕೆಲಸ, ಒಕ್ಕಲುತನ, ಕೂಲಿ ಮೊದಲಾದ ಕಾರ್ಯಗಳಲ್ಲಿ ನಿರತರಾಗುತ್ತಾರೆ. ನಂತರ ಉಪ್ಪನ್ನು ತೆಗೆದುಕೊಂಡು ಮಾರಾಟಕ್ಕೆ ಹೋಗುತ್ತಿದ್ದರು. ಅಂದು ಆ ಊರಿನಲ್ಲಿ ಉಪ್ಪನ್ನು ಉತ್ಪಾದಿಸಿ ಮಾರಾಟ ಮಾಡುತ್ತಿದ್ದ ವ್ಯಕ್ತಿಗಳೆಂದರೆ, ಗುಂಟಿ ಜಯಪ್ಪ, ಗುಂಟಿ ಸಾಬಣ್ಣ, ರತ್ತಾಳ ಯೋಗಪ್ಪ, ಮಣ್ಣಗುಳಿ ಸಂಗಪ್ಪ, ಮಣ್ಣಗುಳಿ ಅಮರಪ್ಪ, ಪೂಜಾರಿ ಕನಕಪ್ಪ, ಬುಡ್ಡ ಅಮರಪ್ಪ (ಯಾದಗಿರಿ), ಸಂಜೀವಪ್ಪ (ಯಾದಗಿರಿ), ಮಣ್ಣಗುಳಿ ಹನುಮಂತ, ಮಣ್ಣಗುಳಿ ವಿರುಪಣ್ಣ, ಮಾಲಗಿತ್ತಿ ತಿಪ್ಪಣ್ಣ, ಯಾದಗಿರಿ ಸಾಬಣ್ಣ, ವಡವಟ್ಟಿ ಅಮರಪ್ಪ, ತೊರ್ಲಬೆಂಚಿ ದೇವೇಂದ್ರಪ್ಪ, ತೊರ್ಲಬೆಂಚಿ ಆದಪ್ಪ, ವಡವಟ್ಟಿ ಬಾಲಪ್ಪ, ಗೋಡಿಹಾಳ ದೇವೇಂದ್ರಪ್ಪ, ತಳ್ಳಿ ಅಮರಪ್ಪ, ಯಮುನಮ್ಮ, ಗೋಗಿ ಯಮುನಮ್ಮ ಇನ್ನೂ ಅನೇಕರು. ಅವರು ತಮ್ಮ ಸುತ್ತಮುತ್ತಲಿನ ಹಳ್ಳಿಗಳಿಗೆ ಹೋಗಿ ಉಪ್ಪನ್ನು ಮಾರಾಟ ಮಾಡಿಕೊಂಡು ಬರುತ್ತಿದ್ದರು. ಉದಾಹರಣೆಗಾಗಿ ನಾಗರಹಾಳ, ಕೊಡಿಹಾಳ, ತೊಂಡಿಹಾಳ, ಕರಡಿ, ಗಜ್ಜಲಗಟ್ಟ, ನೀಲೋಗಲ್, ನಾಗನೂರು, ಅನ್ವರಿ, ಪಾಮನ ಕಲ್ಲೂರು, ಸಂತೆಕಲ್ಲೂರು, ಹಳ್ಳಿ, ಮಟ್ಟೂರು, ಉಡ್ಯಾಳ ಮೊದಲಾದವು.

ಸ್ವಂತ ಎತ್ತುಗಳು ಮತ್ತು ಬಂಡಿ ಇದ್ದವರು ಎತ್ತಿನ ಬಂಡಿಯ ಮೇಲೆ ಉಪ್ಪನ್ನು ಮಾರಾಟ ಮಾಡಲು ಹೊಯ್ಯುತ್ತಿದ್ದರು. ಇಲ್ಲದವದವರು ಉಪ್ಪನ್ನು ಪುಟ್ಟಿಯಲ್ಲಿ ಹಾಕಿಕೊಂಡು ಅದನ್ನು ತಲೆಯ ಮೇಲೆ ಇರಿಸಿಕೊಂಡು ಉಪ್ಪನ್ನು ಮಾರಾಟ ಮಾಡಲು ಗಂಡಹೆಂಡಿರು ಇಬ್ಬರೂ ಹೋಗುತ್ತಿದ್ದರು. ಗಂಡನು ಇಪ್ಪತ್ತು ಸೇರು ಉಪ್ಪನ್ನು ಹೆಂಡತಿ ಹದಿನೈದು ಸೇರು ಉಪ್ಪನ್ನು ಪುಟ್ಟಿಯಲ್ಲಿ ಹಾಕಿಕೊಂಡು ತಲೆಯ ಮೇಲೆ ಇಟ್ಟುಕೊಂಡು ಆರು ಹರದಾರಿ ಅಂದರೆ ಇಪ್ಪತ್ನಾಲ್ಕು ಕಿ.ಮೀ. ದೂರದವರೆವಿಗೂ ಉಪ್ಪನ್ನು ಮಾರಾಟ ಮಾಡಲು ಹೋಗಿ ಬರುತ್ತಿದ್ದರು. ಇವರು ಒಂದು ಸೇರು ಜೋಳಕ್ಕೆ ಎರಡು ಸೇರು ಉಪ್ಪನ್ನು ಹಾಕುತ್ತಿದ್ದರು. ಒಂದು ಸೇರು ಹೆಸರು ಕಾಳುಗಳಿಗೆ ಮೂರು ಸೇರು ಉಪ್ಪನ್ನು ಹಾಕುತ್ತಿದ್ದರು. ನಂತರದ ದಿನಗಳಲ್ಲಿ ಈ ವೃತ್ತಿಯನ್ನು ಅವರ ವಂಶಸ್ಥರು ವಂಶಪಾರಂಪರ್ಯವಾಗಿ ಮುಂದುವರೆಸಿಕೊಂಡು ಹೋಗಲಾಗಲಿಲ್ಲ. ಅವರ ಮಕ್ಕಳು ಮತ್ತು ಮೊಮ್ಮಕ್ಕಳ ಪ್ರಸ್ತುತ ಸ್ಥಿತಿಗತಿಗಳು ಈ ಮುಂದಿನಂತೆ ಕಂಡುಬಂದಿವೆ. ಗುಂಟಿ ಜಯಪ್ಪನವರಿಗೆ ಬಸ್ಸಪ್ಪ ಮತ್ತು ಶಣ್ಮೂಖಪ್ಪ ಎಂಬ ಇಬ್ಬರು ಮಕ್ಕಳಿದ್ದು ಬಸ್ಸಪ್ಪನು ಒಕ್ಕಲುತನ ಮತ್ತು ಕೂಲಿ ಮಾಡುತ್ತಾನೆ. ಬಸ್ಸಪ್ಪನಿಗೆ ಹನುಮಂತ ಮತ್ತು ರಮೇಶ ಎಂಬ ಇಬ್ಬರು ಮಕ್ಕಳಿದ್ದು, ಇವರಿಬ್ಬರು ಡ್ರೈವರ್ ವೃತ್ತಿಯನ್ನು ಮಾಡುತ್ತಿದ್ದಾರೆ. ಶಣ್ಮೂಖಪ್ಪನು ಮೃತಪಟ್ಟಿದ್ದು ಈತನಿಗೆ ಹನುಮಂತ, ದೇವಪ್ಪ, ನಾಗಪ್ಪ ಎಂಬ ಮಕ್ಕಳಿದ್ದು ಹನುಮಂತನು ಹಟ್ಟಿ ಚಿನ್ನದ ಗಣಿಯಲ್ಲಿ ಕೆಲಸ ಮಾಡುತ್ತಿದ್ದಾನೆ ಮತ್ತು ದೇವಪ್ಪ, ನಾಗಪ್ಪನವರು ಗಾರೆ ಕೆಲಸವನ್ನು ಮಾಡುತ್ತಿದ್ದಾರೆ. ಗುಂಟಿ ಸಾಬಣ್ಣವವರಿಗೆ ಗಂಡು ಸಂತಾನವಿಲ್ಲ. ರತ್ತಾಳ ಯೋಗಪ್ಪನವರಿಗೆ ಷಣ್ಮೂಖಪ್ಪ ಎಂಬ ಮಗನಿದ್ದು ಆತನು ಸರ್ಕಾರಿ ತೆರಿಗೆ ಇಲಾಖೆಯ ಅಧಿಕಾರಿಯಾಗಿದ್ದು ಈಗ ನಿವೃತ್ತಿ ಹೊಂದಿದ್ದಾರೆ. ಷಣ್ಮೂಖಪ್ಪನಿಗೆ ವೆಂಕಟೇಶ ಎಂಬ ಮಗನಿದ್ದು ಆತನು ಖಾಸಗಿಯಾಗಿ ಇಂಜಿನೀಯರಿಂಗ್ ಉದ್ಯೋಗ ಮಾಡುತ್ತಿದ್ದಾನೆ. ಮಣಗುಳಿ ಸಂಗಪ್ಪನವರ ಮಗನು ಒಕ್ಕಲುತನ ಮಾಡುತ್ತಿದ್ದಾನೆ. ಈತನಿಗೆ ಗಂಗಪ್ಪ, ಸಂಗಪ್ಪ, ಮುದಿಯಣ್ಣ ಎಂಬ ಮಕ್ಕಳಿದ್ದು ಗಂಗಪ್ಪ ಮತ್ತು ಸಂಗಪ್ಪ ಇಬ್ಬರೂ ಕೆಎಸ್ಆರ್‌ಟಿಸಿ ಯಲ್ಲಿ ಚಾಲಕರಾಗಿದ್ದಾರೆ. ಮುದಿಯಣ್ಣನು ಒಕ್ಕಲುತನ ಮಾಡುತ್ತಿದ್ದಾನೆ. ಮಣಗುಳಿ ಅಮರಪ್ಪನವರ ಮಗ ಅಳ್ಳಪ್ಪನು ಹಟ್ಟಿ ಚಿನ್ನದ ಗಣಿಯಲ್ಲಿ ಕೆಲಸ ಮಾಡುತ್ತಿದ್ದಾನೆ. ಅಳ್ಳಪ್ಪನ ಇಬ್ಬರು ಗಂಡು ಮಕ್ಕಳು ಹಟ್ಟಿ ಚಿನ್ನದ ಗಣಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಪೂಜಾರಿ ಕನಕಪ್ಪನ ಮಕ್ಕಳಾದ ಸಿದ್ದಪ್ಪ, ಭೀಮಣ್ಣ, ಗಂಗ್ರಪ್ಪನವರು ಒಕ್ಕಲುತನ ಮತ್ತು ಕೂಲಿ ಕೆಲಸ ಮಾಡುತ್ತಿದ್ದಾರೆ. ಸಿದ್ದಪ್ಪನ ಮೂರು ಗಂಡು ಮಕ್ಕಳು

ಗವಂಡಿ ಕೆಲಸ ಮಾಡುತ್ತಾರೆ. ಭೀಮಣ್ಣನ ಮಕ್ಕಳಾದ ಶರಣಪ್ಪ, ರಾಮಲಿಂಗಪ್ಪ ಬೆಂಗಳೂರಿನಲ್ಲಿ ದಿನಕೂಲಿ ಕೆಲಸ ಮಾಡುತ್ತ ಜೀವನ ಸಾಗಿಸುತ್ತಿದ್ದಾರೆ. ಬುಡ್ಡ ಅಮರಪ್ಪನಿಗೆ ನಾಗಪ್ಪ, ವಿಠೋಬ, ಸಾಬಣ್ಣ ಎಂಬ ಮಕ್ಕಳಿದ್ದು ಇವರು ತಮ್ಮ ಜೀವನ ನಿರ್ವಹಣೆಗಾಗಿ ಒಕ್ಕಲುತನ ಮತ್ತು ಕೂಲಿಯನ್ನು ಅವಲಂಬಿಸಿದ್ದಾರೆ.

ಒಟ್ಟಾರೆಯಾಗಿ ಉಪ್ಪಾರ ಸಮುದಾಯದವರು ತಮ್ಮ ಮೂಲ ವೃತ್ತಿಯಿಂದ ವಿಮುಖರಾಗಿ ಇತರೆ ವೃತ್ತಿಗಳತ್ತ ಮುಖ ಮಾಡಿದ್ದಾರೆ. ಜಮೀನು ಇರುವವರು ವ್ಯವಸಾಯದ ಜೊತೆಗೆ ಕೂಲಿಯನ್ನು ಅವಲಂಬಿಸಿಕೊಂಡಿದ್ದರೆ, ಭೂರಹಿತರು ಕೃಷಿಕೂಲಿಯ ಜೊತೆಗೆ ಕಟ್ಟಡ ಕಾರ್ಮಿಕರಾಗಿ ದುಡಿದು ಕುಟುಂಬ ನಿರ್ವಹಿಸುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಶಿಕ್ಷಣಿ ಅರಿವು ಮೂಡಿದ್ದು, ವಿದ್ಯಾವಂತರ ಸಂಖ್ಯೆ ತಡವಾಗಿ ಹೆಚ್ಚುತ್ತಿದೆ. ಆದರೆ ಇತರೆ ಹಿಂದುಳಿದ ಸಮುದಾಯಗಳಿಗೆ ಹೋಲಿಸಿದಾಗ ಇವರಲ್ಲಿ ಅನಕ್ಷರತೆ ಪ್ರಮಾಣ ಅಧಿಕವಾಗಿದೆ. ಬಾಲ್ಯ ವಿವಾಹ, ಅನಕ್ಷರತೆ, ಬಡತನ, ನಿರುದ್ಯೋಗ ಇಂದಿಗೂ ಇವರನ್ನು ಬೆಂಬಿಡದೆ ಕಾಡುತ್ತಿದೆ.

**ಪರಾಮರ್ಶನ ಗ್ರಂಥಗಳು**


- ಎಡ್ಗರ್ ಥರ್ಸ್ಟನ್ ಮತ್ತು ಕೆ. ರಂಗಾಚಾರಿ. (1909). ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ–ಸಂಪುಟ7. ಗೌವರ್ನಮೆಂಟ್ ಪ್ರೆಸ್.
- ಹೀರೆಮಠ. ಎಸ್.ಎಸ್. (1997). ಉಪ್ಪಾರರು. ಹರಪನಹಳ್ಳಿ ತಾಲೂಕು ನೌಕರರ ಸಂಘ.
- ಕಿಟೆಲ್.ಆರ್.ಎಫ್. (1894). ಕನ್ನಡ–ಇಂಗ್ಲೀಷ್ ನಿಘಂಟು. ಬ್ಯಾಸೆಲ್ ಮಿಷನ್ ಬುಕ್ಸ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿ.
- ಲೇಪಾಕ್ಷ ಸ್ವಾಮಿಗಳು. (1999). ಉಪ್ಪಾರ ಚರಿತಾಮೃತ. ಭಗೀರಥ ಸಂಕಲ್ಪ ಟ್ರಸ್ಟ್.
- ವೆಂಕಟ ರಂಗೋಕಟ್ಟಿ. (1893). ಗ್ಯಾಝೆಟಿಯರ್ ಆಫ್ ದ ಬಾಂಬೆ ಪ್ರೆಸಿಡೆನ್ಸಿ. ಗೌವರ್ನಮೆಂಟ್ ಸೆಂಟ್ರಲ್ ಪ್ರೆಸ್.




SRUJANI: Indian Journal of Innovative Research and Development (SIJIRD)
Volume-2 Issue 6, January - February 2024, Pp. 25-32
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# CHILD MARRIAGE IN KARNATAKA: UNDERSTANDING CAUSES AND CONSEQUENCES

**DR.NAGENDRA N**
Department of Development studies, Kannada University, Hampi, Vidyaranya.

***Abstract:***

*Marriage serves as a pivotal social institution, playing a crucial role in establishing families and perpetuating societal norms through symbolic rituals. However, the prevalence of child marriage, particularly in Karnataka, presents a concerning trend. With 418 reported cases in the 2021-22 period alone, marking a staggering 300% increase from 2017-18, experts attribute this surge to pandemic-induced economic uncertainties, notably impacting rural families grappling with job losses. Over the past five years, Karnataka witnessed 1,065 instances of child marriages, accompanied by 10,352 related complaints, highlighting the widespread nature of this issue, especially in districts like Mandya, Hassan, Bengaluru Rural, and Mysuru. Despite concerted prevention efforts, 419 marriages occurred amidst 2,819 complaints in 2021-22, prompting 389 FIRs by law enforcement agencies. Former chairperson of the Karnataka State Commission for Protection of Child Rights, Kripa Alva, links this trend to heightened unemployment and financial insecurity post-COVID-19. This article endeavors to delve into the multifaceted phenomenon of child marriage in Karnataka, aiming to unravel its underlying causes and profound consequences. Through an exploration of the social, cultural, economic, and legal dynamics perpetuating this harmful practice, it seeks to shed light on its detrimental impacts on individuals, families, and communities.*

***Keywords:*** Karnataka, Child Marriage, Social factors, Poverty, Constitutional safeguards.

## INTRODUCTION

Child marriage persists as a pressing issue within Indian society, despite legal amendments setting the minimum marriage age for females at 18. Shockingly, a significant proportion of adolescent girls aged 15-19 are still married, with every third girl falling into this category, and every second married

***Please cite this article as:*** Nagendra, N. (2024). Child Marriage in Karnataka: Understanding Causes and Consequences. *SRUJANI: Indian Journal of Innovative Research and Development.* 2(6), 25-32.

adolescent having given birth. According to the Registrar General of India (RGI) Report (2001), Rajasthan tops the list with 40.8% of females in the 15-19 age group ever married, followed by Bihar (39.6%), Madhya Pradesh (34.1%), Jharkhand (32.9%), and Andhra Pradesh (32.3%). Bhilwara district in Rajasthan stands out with a staggering 61.9% rate of child marriages among various districts. (Suresh Lal, 2015)

Child marriage, deeply entrenched in Indian society for centuries, reflects a complex interplay of religious traditions, social norms, economic factors, and ingrained biases. Despite its historical roots, child marriage represents a grave violation of human rights, inflicting lasting physical, psychological, and emotional trauma. Early onset of sexual activity following marriage, coupled with early pregnancies and childbirth, significantly heightens risks of maternal and infant mortality. Additionally, women married at a young age are more susceptible to experiencing domestic violence within marital settings.

In terms of prevalence, India has one of the highest rates of child marriage globally, with a significant proportion of marriages occurring before the legal age of 18 for girls and 21 for boys. While there has been progress in reducing child marriage rates over the years, particularly in urban areas and among certain socio-economic groups, disparities persist across regions and communities.

According to UNICEF, approximately 27% of girls in India are married before the age of 18, with 7% marrying before the age of 15. This prevalence varies across regions, with states like Bihar, West Bengal, and Rajasthan reporting higher rates compared to others. Moreover, while both boys and girls are affected, girls bear the brunt of this practice disproportionately. National Family Health Survey (NFHS-4) data indicates that around 26.8% of girls aged 20-24 were married before 18, compared to only 2.3% of boys. Rural areas also experience higher rates of child marriage, with around 29% of rural girls marrying before 18, compared to 19% in urban areas according to NFHS-4.

## OBJECTIVES OF THE STUDY

- Identify factors influencing child marriages
- Examine the implications of child marriage
- Analyze constitutional and legal measures against child marriage and their implementation

## METHODS OF THE STUDY

The current study conducted an analysis using secondary data, covering various issues like poverty, domestic violence, poor understanding, level of management and their living standard of the wedded girl children.

## CHILD MARRIAGE IN KARNATAKA

In 2021, a total of 149,404 crimes against children were reported in India, averaging 409 cases recorded each day

throughout the year. Among these, 1,050 cases were registered under the Prohibition of Child Marriage Act, affecting 1,062 children. Karnataka accounted for approximately 5% of all reported crimes against children in the country, with 7,261 cases recorded, positioning the state as the 7th highest contributor to such crimes nationwide. Comparing these figures to the previous year reveals a concerning trend, with Karnataka witnessing a 33% surge in total crimes against children from 5,471 in 2020. Specifically, the number of victims of child marriage escalated by 49%, rising from 185 in 2020 to 276 in 2021, surpassing the national average increase of 34% during the same period, from 792 victims in 2020 to 1,062 in 2021.

Child marriage (i.e., marriage of girls below the age of 18 and boys below the age of 21) in India is one of the most serious crimes committed against children. It is prevalent in most of the States/UTs despite a law (Prohibition of Child Marriage Act, 2006) to root it out. Child marriage ends childhood and puts children at high risk of violence, exploitation, and abuse. It also adversely impacts their rights to education, health and protection.

Over the past three years, Karnataka has witnessed a concerning rise in the number of child marriage victims, increasing from 111 in 2019 to 276 in 2021, marking a significant surge of 149%. While there has been a slight improvement nationwide, with a 3.5 percentage point decrease in the prevalence of child marriage among women aged 20-24 between 2015-16 and 2019-21 (from 26.8% to 23.3%), Karnataka has only seen a marginal reduction of 0.1 percentage point during the same period, from 21.4% to 21.3%.

According to the 2011 Census, nearly 4.8 lakh children in Karnataka were married before reaching the legal age of marriage, constituting approximately 4% of all married children in the country. However, data from the National Crime Records Bureau (NCRB) indicates that only 572 cases of child marriage were registered in the state under the Prohibition of Child Marriage Act during 2019-21, suggesting significant underreporting of this illegal practice.

Court disposal of cases under Prohibition of Child Marriage Act:

In India, the conviction rate for child marriage cases is alarmingly low, standing at a mere 10%, which is the lowest among all types of crimes committed against children. In 2019, 2020, and 2021, only 12 (out of 1,640), 6 (out of 2,092), and 10 (out of 2,865) cases respectively resulted in convictions. As of the end of 2021, an overwhelming 96% of child marriage cases in the country were pending trial, with 2,761 out of 2,865 cases awaiting resolution. This backlog of cases highlights the significant challenges in the legal system's ability to effectively address and prosecute perpetrators of child marriage, further exacerbating the issue's persistence and prevalence.

(Kailash Satyarthi Children's Foundation, 2022)

## FACTORS INFLUENCING CHILD MARRIAGES

Several factors contribute to the persistence of child marriage in India. Poverty plays a significant role, with families often marrying off their daughters at a young age due to financial hardship or to reduce the economic burden. Gender inequality and traditional norms that prioritize early marriage for girls further perpetuate the practice. Additionally, lack of access to education, particularly for girls, and limited awareness about the harmful effects of child marriage contribute to its prevalence.

### *Sociocultural Factors*

In Indian societies, marriage is deeply intertwined with cultural traditions and norms that prioritize family honor and gender roles. For example, in some communities, early marriage is seen as a way to preserve family honor and ensure social status. Gender norms that place greater value on boys over girls can also contribute to the acceptance of child marriage, as families may prioritize marrying off their daughters at a young age.

### *Poverty*

Economic insecurity can drive families to resort to child marriage as a coping mechanism. Poverty limits opportunities for education and employment, leading families to view marriage as a way to reduce financial strain. Additionally, the practice of dowry or bride price in certain cultures may lead families to marry off their daughters at a young age in exchange for financial support.

### *Lack of Education*

Limited access to education, especially for girls, perpetuates the cycle of poverty and reinforces traditional gender roles. Without education, girls may lack the knowledge and resources to challenge the practice of child marriage or pursue alternative opportunities. Families may prioritize marriage over education for their daughters due to societal expectations or economic constraints.

### *Gender Inequality*

Deep-rooted gender inequalities, including discriminatory attitudes towards girls and women, contribute to the prevalence of child marriage. In many communities, girls are considered to be of lesser value than boys and are often denied opportunities for personal development and autonomy. This unequal power dynamic within households and communities leaves girls vulnerable to early marriage and restricts their ability to make decisions about their own lives.

### *Family Dynamics*

Pressures from family members, including parents or relatives, can play a significant role in perpetuating child marriage. Families may believe that marrying off their daughters at a young age will protect them from premarital relationships or provide financial security. Additionally, social pressure to conform

to cultural norms and traditions may compel families to arrange marriages for their children, regardless of the potential harm.

### *Legal Loopholes*

Weak enforcement of existing laws and legal loopholes contribute to the persistence of child marriage. While laws may exist to prohibit child marriage, they are often not effectively enforced or may contain exceptions that allow the practice to continue under certain circumstances. Inadequate access to legal resources and services further exacerbates the problem, leaving girls and their families with limited recourse to challenge child marriage.

## IMPLICATIONS OF CHILD MARRIAGE

### *Health Risks*

Child brides, particularly girls, face significant health risks due to early and frequent pregnancies. Their bodies are often not fully developed, increasing the likelihood of complications during pregnancy and childbirth. This can result in maternal mortality, pregnancy-related injuries, and adverse health outcomes for both mother and child.

### *Educational Disruption*

Child marriage often disrupts a girl's education, as she is expected to assume domestic responsibilities and start a family. This deprives girls of the opportunity to complete their schooling and limits their future prospects for employment and economic independence. Lack of education perpetuates cycles of poverty and reinforces gender inequalities.

### *Economic Vulnerability*

Child brides are often economically dependent on their husbands and families, as they lack the education and skills needed to secure stable employment. This leaves them vulnerable to financial exploitation and limits their ability to support themselves and their children. Economic vulnerability perpetuates cycles of poverty and social marginalization.

### *Gender Inequality*

Child marriage perpetuates gender inequalities by reinforcing traditional gender roles and power dynamics. Girls are often married off to older men who exert control over their lives, limiting their autonomy and agency. This perpetuates the subordinate status of women and girls in society and denies them opportunities for empowerment and self-determination.

### *Social Isolation*

Child brides often experience social isolation and exclusion from their peer groups and communities. They may be forced to leave school, cut ties with friends and family, and assume adult responsibilities at a young age. This isolation can have negative impacts on their mental health and well-being, leading to feelings of loneliness, depression, and anxiety.

### *Human Rights Violations*

Child marriage constitutes a gross violation of human rights, denying

children their right to a safe and healthy childhood, education, and freedom from exploitation. It undermines international human rights standards and perpetuates cycles of gender-based violence and discrimination.

## CONSTITUTIONAL AND LEGAL MEASURES AGAINST CHILD MARRIAGE

Constitutional and legal measures against child marriage in India are designed to combat this deeply entrenched practice and safeguard the rights and well-being of children. Let's delve deeper into these measures and their implementation:

***Prohibition of Child Marriage Act, 2006***

This legislation is the primary legal framework aimed at preventing and prohibiting child marriage. It establishes the legal age of marriage as 18 for females and 21 for males, making it a punishable offense to solemnize, facilitate, or participate in child marriages. The Act also provides for annulment of child marriages and rehabilitation of victims. While the Act provides a strong legal foundation, challenges remain in its implementation, including awareness-raising efforts, enforcement, and accessibility to legal remedies, particularly in rural and marginalized communities.

***National Plan of Action for Children, 2016***

This government initiative outlines a comprehensive strategy for protecting the rights of children, including measures to prevent and address child marriage. It emphasizes collaboration between government agencies, civil society organizations, and communities to combat child marriage through awareness-raising campaigns, capacity-building programs, and support services for victims. However, effective implementation requires sustained political will, resource allocation, and coordination among stakeholders at the national, state, and local levels.

***Protection of Children from Sexual Offences (POCSO) Act, 2012***

While primarily aimed at addressing sexual abuse and exploitation of children, the POCSO Act also recognizes child marriage as a form of sexual abuse. It defines child marriage as a criminal offense and imposes stringent penalties on offenders. However, challenges such as underreporting, social stigma, and delays in legal proceedings may hinder effective enforcement of the Act, highlighting the need for strengthened mechanisms for victim support, legal aid, and access to justice.

***Education Initiatives***

Government initiatives promote education as a key strategy for preventing child marriage and empowering children, especially girls. These initiatives include schemes to increase school enrollment, provide scholarships, and raise awareness about the importance of education. While education is critical for empowering children and challenging harmful social norms, barriers such as poverty, inadequate infrastructure, and gender discrimination may still hinder access to

quality education, particularly for marginalized groups.

## RECOMMENDATIONS FOR ABOLISHING CHILD MARRIAGE

To effectively address the pervasive issue of child marriage, a multifaceted approach is necessary. Firstly, strengthening legal measures is imperative. This involves enhancing the enforcement of existing laws, such as the Prohibition of Child Marriage Act, by imposing stricter penalties for offenders and improving mechanisms for reporting and prosecuting cases of child marriage. Additionally, providing adequate resources and training for law enforcement agencies and legal professionals is essential to ensure the effective implementation of these laws.

Furthermore, raising awareness is crucial in combating child marriage. Comprehensive awareness campaigns targeting communities, parents, and children can educate them about the harmful effects of child marriage. Emphasizing the legal consequences of child marriage and promoting alternative solutions for addressing social and economic challenges without resorting to early marriage are key components of these campaigns.

Empowering girls is also essential in the fight against child marriage. Providing girls with access to education, life skills, and economic opportunities can enable them to make informed decisions about their lives and resist pressures to enter into child marriage. Initiatives such as vocational training, scholarships, and support services for girls at risk of or affected by child marriage can help them build a better future.

Engaging communities is another critical aspect of abolishing child marriage. Collaborating with community leaders, religious institutions, and civil society organizations can help challenge social norms and traditions that perpetuate child marriage. Dialogue and community-led initiatives aimed at shifting attitudes and behaviors towards valuing girls' rights and delaying marriage until they are physically, mentally, and emotionally ready can make a significant impact.

Additionally, supporting families facing economic hardship or social pressures is crucial. Providing them with support and resources can help prevent them from considering child marriage as a solution. Access to social welfare programs, livelihood opportunities, and counseling services can address underlying issues and promote alternative pathways for improving family well-being.

Finally, strengthening health and education systems is paramount. Improving access to quality healthcare and education services, particularly in rural and marginalized communities, can address underlying factors contributing to child marriage, such as poverty and lack of opportunities. Investments in infrastructure, trained personnel, and outreach programs are necessary to ensure that girls have access to essential services

and information to support their well-being and development.

**CONCLUSION**

Child marriage remains a pervasive issue in Karnataka, with a significant increase in reported cases in recent years. Despite legal provisions and initiatives aimed at prevention, the practice continues to threaten the well-being of children, particularly girls, in the state. The surge in child marriages is attributed to various factors, including economic hardships exacerbated by the COVID-19 pandemic. Districts like Mandya, Hassan, Bengaluru Rural, and Mysuru have witnessed notable spikes in child marriage cases, highlighting the urgent need for targeted interventions and enforcement measures.

Constitutional and legal measures against child marriage, such as the Prohibition of Child Marriage Act, 2006, and initiatives like the National Plan of Action for Children and the Protection of Children from Sexual Offences Act, provide a framework for prevention and protection. However, challenges remain in the implementation of these measures, including awareness gaps, enforcement issues, and resource constraints. Strengthening collaboration between government agencies, civil society organizations, and communities is essential to effectively combat child marriage and uphold the rights of children in Karnataka.

In conclusion, child marriage in Karnataka persists as a significant social challenge, posing grave risks to the well-being and rights of children. Addressing this issue requires a comprehensive approach that addresses underlying factors and strengthens legal and institutional mechanisms for prevention and protection. By raising awareness, promoting education, empowering communities, and enforcing existing laws, Karnataka can work towards creating a future where every child can grow up free from the harms of early marriage.

**REFERENCES**


- Agarwal, Deepti & Mehra, Sunil. (2004). *Adolescent Health Determinants for Pregnancy and Child Health Outcomes among the Urban Poor, Indian Pediatrics*. Environmental Health Project, Special Article Services, Volume 41.
- Bhatt, A. Sen and U. Pradhan. (2005). *Child Marriage & the Law in India.* Human Rights Law Network. p.259
- Biswajit Ghosh. (2006). *Trafficking in Women & Children, Child Marriage and Dowry: A Study for Action Plan in West Bengal*. Dept of Women & Child Development & Social Welfare, Govt. of West Bengal & UNICEF.
- Child Marriage and Other Crimes Against Children In Karnataka. (2022).
- *National Family Health Survey 5 - 2019-21.* (n.d). Ministry of Health and Family Welfare.
- Suresh Lal. B. (2015). Child Marriage in India: Factors and Problems. *International Journal of Science and Research (IJSR).* 4(4).

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.33-40
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಸಲಾಂ ಬೆಂಗಳೂರಿನ–ಸಂಕೀರ್ಣ ಬದುಕು

**ಶಿವಕುಮಾರ್ ಜೆ[1] ಮತ್ತು ಡಾ. ಬಿ. ಪ್ರಭುಸ್ವಾಮಿ[2]**

[1]ಸಂಶೋಧನಾರ್ಥಿ, [2]ಸಹಾಯಕ ಪ್ರಾಧ್ಯಾಪಕರು

ಕನ್ನಡ ಸ್ನಾತಕೋತ್ತರ ಮತ್ತು ಸಂಶೋಧನಾ ವಿಭಾಗ. ಜೆಎಸ್‌ಎಸ್ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು, ಊಟಿ ರಸ್ತೆ, ಮೈಸೂರು.

***Abstract:***

*ಅನೇಕ ಮಹಾನಗರಗಳು ಒಂದು ಕಾಲದಲ್ಲಿ ಹಳ್ಳಿಗಳೇ ಆಗಿದ್ದವು. ಹಳ್ಳಿಗಳಾಗಿದ್ದುಕೊಂಡೇ ನಾಗರಿಕತೆಯ ಪಯಣ ಶುರುಮಾಡಿ ನಗರಗಳಾಗಿ ಮಹಾನಗರಗಳಾಗಿರುತ್ತವೆ. ಅಂತೆಯೇ ಬೆಂದಕಾಳೂರು ಕ್ರಮೇಣ ಬೆಂಗಳೂರಾಗಿ, ಮಹಾನಗರವಾಗಿ ಬದಲಾಗಿದ್ದರೂ ಕಳೆಯುತ್ತಾ ಉಳಿಯುತ್ತಾ ತನ್ನದೇ ಆದ ಅಸ್ತಿತ್ವವನ್ನು ಕಾಪಾಡಿಕೊಂಡಿದೆ. ಆರ್ಥಿಕವಾಗಿ ಬೆಳೆಯುವುದಕ್ಕೆ ಬೇಕಾದ ಎಲ್ಲಾ ಸೌಲಭ್ಯಗಳನ್ನೂ ಮಹಾನಗರಗಳು ನೀಡುತ್ತಿವೆಯಾದರೂ, ಆಧುನಿಕತೆಯ ಭರದಲ್ಲಿ ಎಷ್ಟು ವೇಗವಾಗಿ ಬೆಳೆಯುತ್ತವೆಯೋ ಅಷ್ಟೇ ವೇಗವಾಗಿ ಮಾನವೀಯ ಮೌಲ್ಯಗಳು, ಸಂಬಂಧಗಳು ಕುಂಠಿತವಾಗುತ್ತಿವೆ. ಜೋಗಿಯವರ ಸಲಾಂ ಬೆಂಗಳೂರು ಇಂತಹ ನಗರಚಿತ್ರಣವನ್ನು ನೀಡುತ್ತಾ ಮಾನವೀಯ ಮೌಲ್ಯ, ಸಂಬಂಧಗಳು, ನಗರ ಜೀವನದ ವಿವಿಧ ಆಯಾಮಗಳ ಬಗ್ಗೆ ವಿಚಿಕಿತ್ಸಕ ದೃಷ್ಟಿಯನ್ನು ಬೀರುತ್ತದೆ.*

**Keywords:** *ಸಲಾಂ ಬೆಂಗಳೂರು, ಬೆಂದಕಾಳೂರು, ನಗರೀಕರಣ, ಆಧುನೀಕರಣ, ಮಹಾನಗರ, ಪಾಮಜ್ಜಿ, ಜೋಗಿ, ವೆಂಕಟರಮಣ.*

**ಪೀಠಿಕೆ**

21ನೇ ಶತಮಾನದ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಗುರುತಿಸಿಕೊಳ್ಳುತ್ತಿರುವ ಜೋಗಿಯವರು ನಗರ ಬದುಕಿನ ತಲ್ಲಣಗಳನ್ನು ಕಟ್ಟಿಕೊಡುತ್ತಿದ್ದಾರೆ. ಇಂದಿನ ಬೆಂಗಳೂರಿನಂತಹ ಮಹಾನಗರವನ್ನು, ಅದರೊಡನೆ ಸಾಗುವ ಬದುಕನ್ನು ಸಮರ್ಥವಾಗಿ ಇವರ ಕಾದಂಬರಿಗಳು ನಮ್ಮ ಮುಂದೆ ಇರಿಸುತ್ತವೆ. ಬೆಂಗಳೂರನ್ನು ಒಳಹೊಕ್ಕರೆ ಹೇಗೆ ಬೆಂಗಳೂರೇ ಸಂಕೀರ್ಣವಾದುದು ಎಂದೆನಿಸುವುದೋ ಹಾಗೆಯೇ ಇವರ ಕಾದಂಬರಿಗಳನ್ನು ಪ್ರವೇಶಿಸಿದಾಗ ಬೆಂಗಳೂರಿನಂತಹ ದೊಡ್ಡ ನಗರಗಳ ಬದುಕು ಎಷ್ಟು ಸಂಕೀರ್ಣವಾಗಿದೆ ಎಂಬುದರ ಅರಿವು ಓದುಗರಿಗುಂಟಾಗುತ್ತದೆ.

2018ರಲ್ಲಿ ಪ್ರಕಟವಾದ 'ಸಲಾಂ ಬೆಂಗಳೂರು' ಜೋಗಿಯವರ ಕಾದಂಬರಿಗಳಲ್ಲಿ ವಿಶಿಷ್ಟವಾದುದು. ಬೆಂಗಳೂರು ಎಂಬ ಮಹಾನಗರದಲ್ಲಿ ಜೀವಿಸುತ್ತಿರುವ ಮನುಷ್ಯ ಸಂಕುಲದ ಜೀವನವನ್ನು ಕಾದಂಬರಿ ಎಳೆ ಎಳೆಯಾಗಿ ಚಿತ್ರಿಸುತ್ತಾ ಮಾನವ ಸಂಬಂಧವನ್ನು ಗಟ್ಟಿಗೊಳಿಸುವ ಆಶಯವನ್ನು ಹೊಂದಿದೆ. ತಾವು ವಾಸಿಸುತ್ತಿರುವ ಬೆಂಗಳೂರಿನ ಒಡನಾಟದ ಘಟನೆಗಳನ್ನು ಆಧರಿಸಿ ಸಲಾಂ ಬೆಂಗಳೂರು ಕಾದಂಬರಿಯನ್ನು ಸೃಷ್ಟಿಸಿದ್ದಾರೆ.

***Please cite this article as:*** ಶಿವಕುಮಾರ್ ಜೆ & ಬಿ. ಪ್ರಭುಸ್ವಾಮಿ. (2024). ಸಲಾಂ ಬೆಂಗಳೂರಿನ–ಸಂಕೀರ್ಣ ಬದುಕು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 2(6), 33–40.

ಪ್ರಸ್ತುತ ಬೆಂಗಳೂರಿನ ವಾಸ್ತವತೆಯನ್ನು ವಿವರಿಸುತ್ತ, ಮನುಷ್ಯ ಸಂಬಂಧಗಳ ಜೊತೆಗೆ ಮಾನವೀಯ ಮೌಲ್ಯಗಳು, ಹಳ್ಳಿಯ ಜೀವನವನ್ನು ತ್ಯಜಿಸಿ ನಗರ ಜೀವನವನ್ನು ಆಯ್ದುಕೊಳ್ಳುವ ಜನರ ಮನಸ್ಥಿತಿ ಹಾಗು ಮಹಾನಗರಗಳಿಂದ ಮನುಷ್ಯನಿಗೆ ಆಗುತ್ತಿರುವ ಲಾಭ ನಷ್ಟಗಳ ಬಗೆಯನ್ನು ಕಾದಂಬರಿಯಲ್ಲಿ ತೆರೆದಿಟ್ಟಿದ್ದಾರೆ.

ಒಂದು ಕಾಲದಲ್ಲಿ ಬೆಂದಕಾಳೂರೆಂಬ ಹಳ್ಳಿಯಾಗಿದ್ದ ಊರು ಬೆಂಗಳೂರಾಗಿ ಬದಲಾಗಿರುವ ಮಹಾನಗರದ ವಾತಾವರಣವನ್ನು ಮತ್ತು ಆಧುನೀಕರಣದ ಹೆಸರಿನಲ್ಲಿ ವೇಗವಾಗಿ ಬದಲಾಗುತ್ತಲೇ ಇರುವ ಅಲ್ಲಿನ ಜನರ ಬದುಕಿನ ಶೈಲಿಯನ್ನು ಕಾದಂಬರಿಕಾರರು ತಮ್ಮ ಬರವಣಿಗೆಯ ಮೂಲಕ ಹಿಡಿದಿಟ್ಟಿದ್ದಾರೆ. ಪುನರುಜ್ಜೀವನದ ಯಾವ ಆಸೆಗಳೂ ಇಲ್ಲದೆ ನಿರುತ್ಸಾಹಕ್ಕೆ ಮಾರುಹೋದ ಒಬ್ಬ ತಪಸ್ವಿಯಂತೆ ಕಾಣುವ ಮಹಾನಗರಗಳಿಗೆ ಇರುವ ಕೆಟ್ಟ ಗುಣವೆಂದರೆ ಭಯ. ಧೈರ್ಯಶಾಲಿಯಂತೆ ಕಾಣುವ ಒಂದೊಂದು ಮಹಾನಗರವೂ ಸಹ ತನ್ನ ಅಂತರಂಗದೊಳಗೆ ಎಂಥ ಕೀಳರಿಮೆಯ ಭಾವವನ್ನಿಟ್ಟುಕೊಂಡು ಬದುಕುತ್ತಿರುತ್ತವೆ ಎಂದರೆ ಯಾವ ದೌರ್ಜನ್ಯ ಅಥವಾ ಹಿಂಸೆಯನ್ನು ಕನಿಷ್ಠ ಪಕ್ಷ ಪ್ರತಿಭಟಿಸುವ ಹೆಜ್ಜೆಯನ್ನು ಕೂಡ ಇಡುವುದಿಲ್ಲ. ಹಾಗಾಗಿ "ಕಂಡೋರ ಸುದ್ದಿ ನಮಗ್ಯಾಕೆ ಅಂತ ಸುಮ್ಮನಿರುವ ಮಧ್ಯಮವರ್ಗದಂತೆ ಮಹಾನಗರಗಳು ಎಲ್ಲವನ್ನು ಕಂಡು ಕಾಣದಂತೆ ಇದ್ದುಬಿಡುತ್ತವೆ"[1] ನಗರಗಳಲ್ಲಿ ವಾಸಿಸುವ ಜನರ ಮನಸ್ಥಿತಿಯನ್ನು ಈ ವಾಕ್ಯ ಧ್ವನಿಸುತ್ತದೆ. ಇಟ್ಟರೆ ಸಗಣಿಯಾದೆ, ತಟ್ಟಿದರೆ ಬೆರಣಿಯಾದೆ, ಸುಟ್ಟರೆ ನೊಸಲಿಗೆ ವಿಭೂತಿಯಾದೆ ನೀನಾರಿಗಾದೆಯೊ ಎಲೆಮಾನವ ಎಂಬ ನುಡಿಯಂತೆ ಮನುಷ್ಯ ಸದಾ ಪ್ರೀತಿ, ವಿಶ್ವಾಸ, ತ್ಯಾಗಭಾವದಿಂದ ಬಾಳಬೇಕು ಎಂಬುದೇ ಸತ್ಯ. ಮಾನವ ಕುಲದ ಉಳಿವಿಗೂ ಇದು ಕಾರಣ. ಇದೇ ಕಾದಂಬರಿಯ ಉದ್ದೇಶ ಮತ್ತು ಆಶಯವಾಗಿದೆ. ಆದರೆ ಆ ಆಶಯವಿಲ್ಲದ ಮನುಷ್ಯನ ಬದುಕಿನ ಗತಿ ಹೇಗಿರುತ್ತದೆಂಬುದನ್ನು ಕಾದಂಬರಿ ವಿಸ್ತಾರವಾಗಿ ಚಿತ್ರಿಸುತ್ತದೆ.

ಲೇಖಕನೊಬ್ಬ ತಾನು ಬೆಳೆಯುತ್ತಿರುವ ಪರಿಸರ, ಜೊತೆಯಲ್ಲಿ ವಾಸಿಸುವ ಜನರು ಇವುಗಳಿಂದ ಪ್ರಭಾವಿತಗೊಂಡು, ಆತನ ತಳಮಳ, ಅಭಿವ್ಯಕ್ತಿಯ ರೂಪ ತಾಳಿ ಬರವಣಿಗೆಯಲ್ಲಿ ಜನ್ಮತಾಳುವಂತೆ ಜೋಗಿಯವರು ತಮ್ಮ ಅನುಭವಗಳನ್ನು ಕಾದಂಬರಿ ಮೂಲಕ ವ್ಯಕ್ತ ಪಡಿಸಿದ್ದಾರೆ. "ಬೆಳೆದು ದೊಡ್ಡವನಾಗಿ ಏನಾಗಬೇಕು ಅಂತ ಅಂದುಕೊಂಡಿರುವೆ? ನಮ್ಮೂರು ಉಪ್ಪಿನಂಗಡಿಯನ್ನು ಕೇಳಿದೆ. ಧಿಮಾಕಿನಿಂದ ಬೆಂಗಳೂರು ಎಂದಿತು. ಮುಂದೆ ನೀನೇನಾಗಬೇಕು ಅಂದುಕೊಂಡಿದ್ದೀಯಾ ಅಂತ ಬೆಂಗಳೂರನ್ನು ಕೇಳಿದೆ. ಸಂಕೋಚದಿಂದ ಉಪ್ಪಿನಂಗಡಿ ಅಂದಿತು."[2] ಎಂತಹ ತಾತ್ವಿಕತೆಯ ದರ್ಶನವನ್ನು ಈ ಮೇಲಿನ ಮಾತು ಮಾಡಿಸುತ್ತದೆ ಎಂದರೆ ಉಪ್ಪಿನಂಗಡಿಯಂತಹ ಸಣ್ಣ ಹಳ್ಳಿಗಳಲ್ಲಿ ವಾಸಿಸುವ ಜನರು ಜೀವನೋಪಾಯಕ್ಕಾಗಿ ಬೆಂಗಳೂರಿನಂತಹ ಮಹಾನಗರದ ಬದುಕನ್ನು ಬಯಸಿ ಬರುತ್ತಾರೆ. ತಮ್ಮದಲ್ಲದ ಊರಿನಲ್ಲಿ ಮೂರುಹೊತ್ತಿನ ಊಟಕ್ಕಾಗಿ, ತೊಡುವ ಬಟ್ಟೆಗಾಗಿ ಕಷ್ಟ ಪಡುತ್ತಾರೆ. ಜಾಗತೀಕರಣದ ಪರಿಣಾಮದಿಂದ ಒಂದು ಕ್ಷಣವೂ ನಿಲ್ಲದೆ ಯಾಂತ್ರಿಕವಾಗಿ ಇಪ್ಪತ್ನಾಲ್ಕು ಗಂಟೆಗಳೂ ಓಡುತ್ತಲೇ ಇರುವ ಮಹಾನಗರದ ವೇಗದ ಸಮಕ್ಕೆ ಅದರ ಜೊತೆ ಜೊತೆಗೇ ಓಡುವ ಶಕ್ತಿಯೂ ಇಲ್ಲದೆ, ನಿಲ್ಲಲೂ ಆಗದೆ ನೆಮ್ಮದಿಯನ್ನು ಕಳೆದುಕೊಂಡು ಹೆಣಗಾಡುತ್ತಿರುತ್ತಾರೆ. ಇಲ್ಲಿ ಹಣ ಸಂಪಾದನೆಗೆ ಯಾವುದೇ ಕೊರತೆಯಿಲ್ಲದಿರಬಹುದು, ಆದರೆ ಹಣದಿಂದ ಆಹಾರವನ್ನು, ಮನೆಯನ್ನು, ಬಟ್ಟೆಯನ್ನು, ಔಷಧಿಗಳನ್ನು ಕೊಂಡಕೊಳ್ಳಬಹುದೇ ವಿನಃ ನೆಮ್ಮದಿ ಮತ್ತು ಪ್ರೀತಿ ತುಂಬಿದ ಸಂಬಂಧಗಳನ್ನು, ಆರೋಗ್ಯವನ್ನು ಕೊಂಡುಕೊಳ್ಳಲು ಎಂದಿಗೂ ಸಾಧ್ಯವಿಲ್ಲ. ಇದನ್ನು ಅರಿತಾಗ ಮಾತ್ರ ಬೆಂಗಳೂರು ಉಪ್ಪಿನಂಗಡಿಯಾಗಲು ಬಯಸಿದರೆ ಉಪ್ಪಿನಂಗಡಿ

ಉಪ್ಪಿನಂಗಡಿಯಾಗಿಯೇ ಉಳಿಯಲು ಬಯಸುತ್ತದೆ. ಆಗಮಾತ್ರ ವಲಸೆ ಬಂದ ಮಂದಿ ಪುನಃ ತಮ್ಮ ತಮ್ಮ ಹಳ್ಳಿಗಳಿಗೆ ಹಿಂತಿರುಗುವ ಆಶಯವನ್ನು ವ್ಯಕ್ತಪಡಿಸುತ್ತಾರೆ. ಉಪ್ಪಿನಂಗಡಿ ಮತ್ತು ಬೆಂಗಳೂರಿನ ಸ್ವಗತದಿಂದ ಇದನ್ನು ಧ್ವನಿಸಿದ್ದಾರೆ. ಜೋಗಿಯವರು ತಾವು ಬೆಳೆದ ಉಪ್ಪಿನಂಗಡಿ ಮತ್ತು ಜೀವಿಸುತ್ತಿರುವ ಬೆಂಗಳೂರಿನ ಪರಿಸರವನ್ನು ಕಂಡುಂಡವರು. ಆ ಹಿನ್ನೆಲೆಯಲ್ಲಿ ಎರಡೂ ಪರಿಸರದ ಮುಖಾಮುಖಿಯೊಡನೆ ತಮ್ಮ ಜೀವನದ ಅನುಭವ ಹಾಗು ನೆನಪುಗಳನ್ನು ತೆರೆದಿಡುತ್ತಾ ನಗರ ಜನ ಜೀವನದ ವಿವಿಧ ಆಯಾಮಗಳನ್ನು ಕಾದಂಬರಿಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಪರಂಪರಾಗತ ಮೌಲ್ಯಗಳನ್ನು ನಂಬಿಕೊಂಡಿದ್ದ, ಹಳ್ಳಿಯಲ್ಲಿ ತನ್ನ ಜೀವನವನ್ನು ಸಂತೋಷದಿಂದ ಕಳೆಯುತ್ತಿದ್ದ 'ಪಾಮಜ್ಜಿ' ಸಲಾಂ ಬೆಂಗಳೂರು ಕಾದಂಬರಿಯ ಕೇಂದ್ರವ್ಯಕ್ತಿ. ಪರಂಪರಾಗತವಾದ ಮೌಲ್ಯಗಳನ್ನು ಕೀರ್ತಿಸುವ ಹಂಬಲ ಕಾದಂಬರಿಯ ಉದ್ದೇಶವಲ್ಲ. ಆದರೆ ನಗರ ಜೀವನದ ಸಾಮಾಜಿಕ ಪರಿಸ್ಥಿತಿಯಲ್ಲಿ ಹುಟ್ಟಿಕೊಳ್ಳುವ ಅನುಭವದ ಪದರಗಳನ್ನು ಜಿಗುಪ್ಸೆಯ ಸ್ಥಾಯಿಯಲ್ಲಿ ಕತೆಯನ್ನು ಬಿಚ್ಚುತ್ತಲೇ ನಗರವಾಸಿಗಳ ಬದುಕಿನ ಧ್ವನಿಯನ್ನು ಸದ್ದಿಲ್ಲದೆ ಚಿತ್ರಣಗೊಳಿಸುವುದಾಗಿದೆ. ಬೆಂಗಳೂರಿನ ಚಿತ್ರಣವನ್ನು ವ್ಯಕ್ತಪಡಿಸುವುದಕ್ಕೆ ಕಾದಂಬರಿಯಲ್ಲಿ ಸೃಷ್ಟಿಸಿದ ಪಾತ್ರ 'ವೆಂಕಟರಮಣ'. ಈತ ಪಾಮಜ್ಜಿಯ ಮೊಮ್ಮಗ. ಹಳ್ಳಿ ಬಿಟ್ಟು ಬೆಂಗಳೂರಿಗೆ ಓಡಿಬಂದ ಮೊಮ್ಮಗ ವೆಂಕಟರಮಣನನ್ನು ಹುಡುಕಿಕೊಂಡು ಬರುವ ಪಾಮಜ್ಜಿ ಬೆಂಗಳೂರಿನಲ್ಲಿ ಪಡುವ ಪಾಡು ಈ ಕಾದಂಬರಿಯ ವಸ್ತುವಾಗಿದೆ. ರೈತನ ಮಗನಾಗಿ ಹುಟ್ಟಿದ ವೆಂಕಟರಮಣ ಹಳ್ಳಿಯ ಜೀವನ ಬೇಸರಿಸಿ, ತನ್ನ ಜಮೀನನ್ನು ಮಾರಿಕೊಂಡು ಬೆಂಗಳೂರಿಗೆ ಹೋಗಬೇಕೆಂಬ ಆಲೋಚನೆಗೆ ಪಾಮಜ್ಜಿ ತಿರಸ್ಕಾರವನ್ನು ಸೂಚಿಸುತ್ತಾಳೆ. ನಾನು ಬದುಕಿರುವ ತನಕ ನನ್ನ ಜಮೀನನ್ನು ಯಾರಿಗೂ ಮಾರುವುದಿಲ್ಲ ಎಂಬ ಪಾಮಜ್ಜಿಯ ನಿರ್ಧಾರವನ್ನು ಕೇಳಿದ ವೆಂಕಟರಮಣ ಬೇರೆ ದಾರಿಕಾಣದೆ ತನ್ನ ಅಜ್ಜಿಗೆ ಹೇಳದೆ ಕೇಳದೆ ಬೆಂಗಳೂರಿಗೆ ಬಂದಿರುತ್ತಾನೆ. ಇರುವ ಒಬ್ಬ ಮೊಮ್ಮಗನನ್ನು ಕಳೆದುಕೊಳ್ಳುವೆನೆಂಬ ಭಯದಿಂದ ಆತನನ್ನು ಹುಡುಕಿಕೊಂಡು ಬೆಂಗಳೂರಿಗೆ ಪಾಮಜ್ಜಿ ಬಂದಿರುತ್ತಾಳೆ. ಲೇಖಕರ ಬೆಂಗಳೂರು ಕಾದಂಬರಿಯಲ್ಲಿ ಬರುವ ವೆಂಕಟರಮಣನ ಪಾತ್ರವೇ ಅಜ್ಜಿಯ ಮೊಮ್ಮಗನಾಗಿ ಇಲ್ಲಿಯೂ ಮುಂದುವರೆದಿರುವುದು ವಿಶೇಷ ಸಂಗತಿ. ಜೋಗಿಯವರ ಬೆಂಗಳೂರು ಕಾದಂಬರಿಯನ್ನು ಓದಿದ್ದ ಅವರ ಸ್ನೇಹಿತರಾದ ಕುಂಟಿನಿಯವರ ಅಕ್ಕನಿಂದ ವಿಷಯ ತಿಳಿದ ಪಾಮಜ್ಜಿಯು ತನ್ನ ಮೊಮ್ಮಗನ ಬಗ್ಗೆ ಲೇಖಕರು ತಿಳಿದಿದ್ದಾರೆಂದು ಊಹಿಸಿ ಅವರಿಂದ ನನ್ನ ಮೊಮ್ಮಗ ಸಿಗುತ್ತಾನೆ ಎಂಬ ಆಸೆಹೊತ್ತು ಅವರ ಬಳಿ ಬಂದು ತನ್ನ ಮೊಮ್ಮಗನ ಬಗೆಗೆ ವಿಚಾರಿಸುವುದು ಮತ್ತು ಹುಡುಕಲು ಸಹಾಯ ಬೇಡುವುದು ಕಾದಂಬರಿಯ ತಂತ್ರವಾಗಿ ಮೂಡಿಬಂದಿದೆ. ಪಾಮಜ್ಜಿ ಒಂದು ಮುಗ್ಧ ಮನಸ್ಸಿನ ಪ್ರತೀಕ. ಪಾಮಜ್ಜಿಗೆ ಇದ್ದ ತಿಳಿವು ಮನುಷ್ಯ ಸಂಬಂಧದ್ದಾಗಿದೆ. ತನ್ನ ಮೊಮ್ಮಗನಿಗಾಗಿ ತೊಳಲಾಡುತ್ತಿರುವ ಪಾಮಜ್ಜಿಯೊಂದಿಗೆ ಹಳ್ಳಿಗಳನ್ನು ಪ್ರತೀಕವಾಗಿರಿಸಿಕೊಂಡು ನಗರ ಜೀವನವನ್ನು ಪರಿಚಯಿಸುವಲ್ಲಿ ಕಾದಂಬರಿಯು ಆಕಾರವನ್ನು ಪಡೆದುಕೊಂಡಿದೆ.

ಕಾದಂಬರಿಯಲ್ಲಿ ಚಿನ್ಮಯಿ, ವಿಜಯಲಕ್ಷ್ಮಿ ಪಾತ್ರಗಳನ್ನು ಸಂದರ್ಭಕ್ಕನುಗುಣವಾಗಿ ತಂದು ನಗರ ಜೀವನದ ಜೊತೆಗೆ ಈಗಿನ ಮಾನವ ಸಂಬಂಧಗಳ ಪರಿಚಯವನ್ನು ಸನ್ನಿವೇಶಕ್ಕನುಗುಣವಾಗಿ ಮಾಡಿಕೊಡಲಾಗಿದೆ.

ಲೇಖಕರು ಹೊಸದಾಗಿ ಕಥೆಯನ್ನು ರಚಿಸಬೇಕಿದ್ದ ಸಿನಿಮಾವೊಂದರ ಬಗೆಗೆ ಚಿಂತಿಸುತ್ತಾ, ಅವರು ಕಥೆಯಲ್ಲಿ ಸೃಷ್ಟಿಸಿದ್ದ ಪಾತ್ರವಾದ ಚಿನ್ಮಯಿಯ ಜೀವನದ ಬಗೆಗೆ ಯೋಚನೆ ಮಾಡುತ್ತಿರುತ್ತಾರೆ. ಆ ಸಂದರ್ಭದಲ್ಲಿ ಅವಳು ಯಾರನ್ನಾದರು ಪ್ರೇಮಿಸಿದರೆ ಮತ್ತು ಮನೆಯವರು ನೋಡಿದ ಗಂಡನ್ನು

ವಿವಾಹವಾದರೆ ಹೇಗೆ ಕಥೆಯನ್ನು ಮಾರ್ಪಾಡು ಮಾಡಿಕೊಳ್ಳಬಹುದು ಎಂದು ಆಲೋಚಿಸುತ್ತಿರುತ್ತಾರೆ. ಕೊನೆಗೆ ತಮ್ಮ ಕಥೆಯಲ್ಲಿ ಅವಳಿಗೆ ತಂದೆ ತಾಯಿ ನಿಶ್ಚಯ ಮಾಡಿದಂತೆ ವಿವಾಹವನ್ನು ಮಾಡಿಸಿ ನಂತರದ ಸಮಯದಲ್ಲಿ ಆ ಮದುವೆ ಅವಳಿಗೆ ಇಷ್ಟವಿಲ್ಲದೆ ಅದರಿಂದ ಮುಕ್ತಳಾಗಲು ಅವಳು ಯಾವ ನಿರ್ಧಾರಕ್ಕೆ ಬದ್ಧಳಾಗುತ್ತಾಳೆ ಎಂಬುದನ್ನು ಈ ರೀತಿ ಚಿತ್ರಿಸಿದ್ದಾರೆ. "ನಾನು ಅವನೂ ಪ್ರೀತಿಸಿ ಮದುವೆ ಆದವರಲ್ಲ. ನನ್ನನ್ನು ನನ್ನ ಮನೆಯವರು ಒಪ್ಪಿಸಿದರು. ಅವನಿಗೆ ನಾನೇ ಆಗಬೇಕಿರಲಿಲ್ಲ. ಯಾರೇ ಆಗಿದ್ದರೂ ಒಪ್ಪಿಕೊಳ್ಳುತ್ತಿದ್ದ".[3] ಎಂಬುದು ಚಿನ್ಮಯಿಯ ಮನಸ್ಸಿನಲ್ಲಿ ಮದುವೆಯ ಬಗೆಗೆ ಇದ್ದ ನಿಲುವನ್ನು ಸ್ಪಷ್ಟ ಪಡಿಸುತ್ತದೆ. ಮಗಳಿಗೆ ಮದುವೆ ಮಾಡುವುದೇ ದೊಡ್ಡ ಸಾಧನೆ ಎಂದು ನಂಬಿರುವ ಪೋಷಕರು, ಹೆಣ್ಣು ಮಕ್ಕಳಿಗೆ ಏನು ಕಡಿಮೆ ಮಾಡಿದ್ದೇವೆ ಎಂದು ಯೋಚಿಸುವುದಕ್ಕಿಂತ ತನಗೆ ಬೇಡವಾದದ್ದನ್ನು ಬೇಡ ಎಂದು ನಿರ್ಭಯವಾಗಿ ಹೇಳುವ ಸ್ವಾತಂತ್ರ್ಯವನ್ನು ಮಾತ್ರ ನೀಡಿರುವುದಿಲ್ಲ. ನಿರಾಕರಿಸುವ ಹಕ್ಕಿನಿಂದ ಹೆಣ್ಣು ಮಕ್ಕಳು ಎಂದಿಗೂ ವಂಚಿತರಾಗಿಯೇ ಇರುತ್ತಾರೆ ಎಂಬ ನಿಲುವನ್ನು ಪ್ರತಿಪಾದಿಸುವ ಚಿನ್ಮಯಿ ಜಗತ್ತಿನ ಅನೇಕ ಗ್ರಂಥಗಳನ್ನು, ಪುರಾಣಗಳನ್ನು ಓದಿರುತ್ತಾಳೆ ಮತ್ತು ಹೆಣ್ಣಿಗಾದ ಅವಮಾನಗಳನ್ನು, ಶೋಷಣೆಯನ್ನು ಅರ್ಥ ಮಾಡಿಕೊಂಡಿರುತ್ತಾಳೆ. ಇದೇ ಆಲೋಚನೆಯಿಂದ ಕೆಲವೊಮ್ಮೆ ಪೂರ್ವಗ್ರಹಪೀಡಿತಳಾಗಿಯೂ ಇರುತ್ತಾಳೆ. "ಬಂಧು ಬಳಗ, ಅಣ್ಣ–ತಮ್ಮ, ಅಕ್ಕ–ತಂಗಿ, ತಂದೆ–ಮಕ್ಕಳು–ತಾಯಿ ಇವರೆಲ್ಲರ ಮಧ್ಯೆ ಇದ್ದ ಸಂಬಂಧಗಳು ಮಾರುಕಟ್ಟೆಯ ಸಂಬಂಧಗಳಾಗಿ ಪರಿವರ್ತಿತವಾಗುತ್ತಿವೆ".[4] ಎಂಬ ಮಾತಿನಂತೆ ತಾನು ಇಷ್ಟ ಪಟ್ಟು ಮದುವೆಯಾಗಿದ್ದರೆ ಸುಖವಾಗಿರುತ್ತಿದ್ದೆ, ಎಂದುಕೊಳ್ಳುತ್ತಾಳೆ. ತಂದೆ ತಾಯಿ ತನ್ನ ಒಪ್ಪಿಗೆಯನ್ನು ಕೇಳದೆಯೇ ಸಮ್ಮತಿಸಿ ಮದುವೆ ಮಾಡಿರುವುದರಿಂದ, ಗಂಡನಿಂದ ಸಣ್ಣ ಪುಟ್ಟ ತಪ್ಪುಗಳಾದರು ಸಹ ಅವುಗಳು ತನ್ನ ಮೇಲೆ ನಡೆಯುವ ದೌರ್ಜನ್ಯ, ಎಂದು ಭಾವಿಸುತ್ತಾಳೆ. ಗಂಡ ಕಾರು ಓಡಿಸುವಾಗ ವಿಪರೀತ ಹಾರನ್ ಮಾಡುತ್ತಿರುವುದು ನನ್ನ ಮೇಲಾಗುತ್ತಿರುವ ಹಿಂಸೆ ಎಂದುಕೊಳ್ಳುತ್ತಾಳೆ. ಗಂಡ ಹೆಂಡತಿಯರಲ್ಲಿ ಮುಖ್ಯವಾಗಿ ಇರಬೇಕಾದದ್ದು ಹೊಂದಾಣಿಕೆ ಎಂಬ ಅರಿವು ಆಕೆಗಿರುವುದಿಲ್ಲ. ಒಂದು ಮದುವೆಯನ್ನು ಮುರಿಯುವುದಕ್ಕೆ ಹಾರ್ನಿನ ಕರ್ಕಶ ಸದ್ದು ಸಾಕು ಎಂಬುದು ಅವಳ ಮನಸ್ಥಿತಿಯಾಗಿದ್ದು, ಗಂಡನಿಂದ ವಿಚ್ಛೇದನ ಪಡೆಯಲು ಕಾರಣಗಳನ್ನು ಹುಡುಕುವ ಪಾತ್ರವಾಗಿ ಚಿನ್ಮಯಿ ಕಂಡು ಬರುತ್ತಾಳೆ.

ಚಿನ್ಮಯಿಯ ಕಥೆಯಂತೆಯೆ ಲೀಲಾವತಿಯ ಕಥೆಯೂ ಆಗಿದೆ. "ನಿನ್ನಂಥ ಬಿಕನಾಸಿಗೆ ನನ್ನ ಕೊಟ್ಟು ಮದುವೆ ಮಾಡಿದ. ನಿನ್ನಂಥೋನನ್ನು ಕಟ್ಟಿಕೊಂಡು ಹಾಳಾಗಿ ಹೋದೆ. ಬೇರೆ ಯಾರನ್ನ ಮದುವೆಯಾಗಿದ್ದರೂ ಸುಖವಾಗಿರುತ್ತಿದ್ದೆ."[5] ಎಂಬುದು ದಿನ ನಿತ್ಯವೂ ಕುಡಿದು ಬರುವ ಹಾಗೂ ದುಡಿದದ್ದನ್ನೆಲ್ಲ ಗಡಂಗಿನಲ್ಲಿ ಕಳೆದು ಬರಿಗೈಯಲ್ಲಿ ಮನೆಗೆ ಬರುತ್ತಿದ್ದ ತನ್ನ ಗಂಡನಿಗೆ ಲೀಲಾವತಿ ಬೈಯ್ಯುವ ಬೈಗುಳವಾಗಿದೆ. ಮನೆಯ ಬಗೆಗೆ ಜವಾಬ್ದಾರಿ ಇಲ್ಲದೆ ತನ್ನಷ್ಟಕ್ಕೆ ತಾನು ಕುಡಿಯುವುದು, ಸುತ್ತುವುದು ಇದೇ ರೀತಿಯ ತನ್ನ ತಂದೆಯ ದಿನಚರಿಯಿಂದ ಮತ್ತು ತನ್ನ ತಾಯಿಯ ಕಷ್ಟ ನೋವುಗಳಿಂದ ಬೇಸತ್ತಿದ್ದ ಲೀಲಾವತಿಯ ಮಗಳು ವಿಜಯಲಕ್ಷ್ಮಿ ಕುಡಿದು ಬಂದ ತನ್ನ ಅಪ್ಪನನ್ನು ಕೊಲೆಮಾಡಿಬಿಡುತ್ತಾಳೆ. ಈ ಪಾತ್ರಗಳನ್ನು ಸೃಷ್ಟಿಸಿರುವ ಕಾದಂಬರಿಕಾರನಿಗೆ ಯಾವ ಬಗೆಯ ಸಂಶಯ ಇದ್ದಂತಿಲ್ಲ. ನಮ್ಮ ಸಮಾಜ ಈ ಬಗೆಯಲ್ಲಿದೆಯೇ ಎಂಬುದನ್ನು ಸತ್ಯ ಶೋಧನೆ ಮಾಡಬೇಕಾಗುತ್ತದೆ. ಇದರಿಂದ ಬದುಕಿನ ಸತ್ಯಗಳನ್ನು ಹುಡುಕುವಲ್ಲಿ ಬೌದ್ಧಿಕ ಕ್ಷಮತೆಯನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ.

ಕಾದಂಬರಿಕಾರರು ತಮ್ಮ ಕಥಾ ನಿರೂಪಣೆಯನ್ನು ಎರಡು ಭಾಗಗಳಲ್ಲಿ ವಿಂಗಡಿಸಿದ್ದಾರೆ. ಒಂದು ಹಳ್ಳಿಯ ಚಿತ್ರಣ, ಮತ್ತೊಂದು ನಗರ ಚಿತ್ರಣವಾಗಿದೆ.

"ನನಗೆ ಇಲ್ಲಿದ್ದರೆ ಮದುವೆ ಆಗೋದಿಲ್ಲ ಯಾರೂ ಹೆಣ್ಣು ಕೊಡೋದಿಲ್ಲ ಊರಲ್ಲಿ ಮರ್ಯಾದೆ ಇಲ್ಲ".[6] ಎಂಬ ವೆಂಕಟರಮಣನ ಈ ಮಾತು ಹಳ್ಳಿಯಲ್ಲಿ ಜೀವಿಸಿ ಅಲ್ಲಿನ ವಾತಾವರಣಕ್ಕೆ ಸೋತ ಮನಸ್ಥಿತಿಯಾಗಿದೆ. ಆತನ ಆಲೋಚನೆ ಹಳ್ಳಿಯಲ್ಲಿ ಜೀವಿಸುವ ಎಷ್ಟೋ ಯುವ ಮನಸ್ಸುಗಳ ಪ್ರತೀಕವಾಗಿದೆ. ಹಳ್ಳಿಯಲ್ಲಿ ಹುಟ್ಟಿ ಬೆಳೆದು ಪಟ್ಟಣವನ್ನು ಅರಸಿ ಬಂದು ತಮ್ಮ ಜೀವನವನ್ನು ನೆಮ್ಮದಿ ಇಲ್ಲದಂತೆ ಮಾಡಿಕೊಂಡು ಮತ್ತೆ ಹಳ್ಳಿಗೆ ವಾಪಸ್ಸಾಗುವ ಎಷ್ಟೋ ಮಂದಿಗೆ ಈ ಕಾದಂಬರಿ ನೀತಿಪಾಠವನ್ನು ಹೇಳುತ್ತದೆ. "ಗ್ರಾಮೀಣ ಪ್ರದೇಶಗಳು ಮಾನವೀಯತೆಗೆ ಮಾನವ ಸಂಬಂಧಗಳಿಗೆ ಮುಖ್ಯವಾದ ಸ್ಥಾನ ಮತ್ತು ಆದ್ಯತೆಯನ್ನು ನೀಡುತ್ತಿದ್ದವು. ಆದರೆ ಜಾಗತೀಕರಣದ ಪ್ರಭಾವದಿಂದ ಮಾನವ ಸಂಬಂಧಗಳು ಆರ್ಥಿಕ ಸ್ಥಿತಿಗತಿಗಳನ್ನು ಅವಲಂಬಿಸಿ ನಿರ್ಧಾರವಾಗುತ್ತವೆ".[7] ಅಂತೆಯೇ ಮದುವೆ, ಸಂಬಂಧಗಳಲ್ಲಿಯೂ ಕೂಡ. ಪ್ರತಿಯೊಬ್ಬ ಮನುಷ್ಯನು ತನ್ನ ಜೀವನವನ್ನು ತಾನೇ ಎದುರಿಸಬೇಕು. ಹುಟ್ಟಿದ ಮರುಕ್ಷಣದಿಂದ ಸಾಯುವ ಕಡೆಘಳಿಗೆವರೆಗೂ ಮನುಷ್ಯ ತನ್ನ ಬದುಕಿನ ಹೋರಾಟವನ್ನು ನಡೆಸುತ್ತಿರುತ್ತಾನೆ. ಆದರೂ ತಾನೇ ವಾಸಿಸುವ ಸಮಾಜದಲ್ಲಿ ಹಲವು ಜೀವರಾಶಿಗಳ ಬಗೆಗೆ ಅನುಕಂಪ, ಮಾನವೀಯ ಗುಣಗಳು ಮನುಷ್ಯನಿಗೆ ಅತ್ಯಗತ್ಯ. ಕಾದಂಬರಿಯೊಳಗೆ ಹಳ್ಳಿಯನ್ನು ತ್ಯಜಿಸಿ ನಗರ ಜೀವನವನ್ನು ಅರಸಿ ಬರುತ್ತಿರುವ ವೆಂಕಟರಮಣನಂತಹ ಬಹು ಮಂದಿಗೆ ನಗರ ಜೀವನದ ಆಗು–ಹೋಗು, ಕಷ್ಟ–ಕಾರ್ಪಣ್ಯದ ಅನುಭವವಾಗಿ ನಗರ ಅಸಹ್ಯ ಎನಿಸದಿರದು. ಬೆಂಗಳೂರಿನ ಜಂಜಾಟದ ಬದುಕಿನಲ್ಲಿದ್ದರೂ ಪಾಮಜ್ಜಿಯನ್ನು ತಮ್ಮ ಮನೆಯಲ್ಲಿಯೇ ಇರಿಸಿಕೊಂಡು, ಅವಳ ಮೊಮ್ಮಗನನ್ನು ಹುಡುಕುವಷ್ಟು ದಿನವೂ ಊಟೋಪಚಾರಗಳನ್ನು ಮಾಡಿ, ಆ ಮುಗ್ಧ ಜೀವಕ್ಕೆ ಧೈರ್ಯ ತುಂಬಿ ಸಂತೈಸುವ ಲೇಖಕರ ಕುಟುಂಬ ಮತ್ತು ಅವರ ಸ್ನೇಹಿತ ಕುಂಟನಿಯಂತವರಲ್ಲಿನ ಮಾನವೀಯ ಅಂಶಗಳು ಇಂದಿಗೂ ಬೆಂಗಳೂರಿನಲ್ಲಿಯೂ ಇವೆ ಎಂಬುದನ್ನು ಮರೆಯಲಾಗದು.

ಮನುಷ್ಯ ಸಂಬಂಧಗಳ ಮೌಲ್ಯವರ್ಧನೆ ಆಗಬೇಕಾಗಿರುವುದನ್ನು ಅಭಿವ್ಯಕ್ತಿಸುವುದೇ ಈ ಕಾದಂಬರಿಯ ಮುಖ್ಯ ಉದ್ದೇಶವಾಗಿದೆ. "ಮನುಷ್ಯ ಅನ್ನವನ್ನು ತಿಂದು ಮಾತ್ರ ಬದುಕುವುದಿಲ್ಲ; ಆತ ನಂಬಿ, ಹತಾಶನಾಗಿ, ಪ್ರೇಮಿಸಿ, ನಿರಾಶನಾಗಿ, ಎಲ್ಲದರ ನಿರರ್ಥಕತೆ ತಿಳಿದು ಬದುಕುತ್ತಾನೆ".[8] ಎಂಬುದು ಕಟುಸತ್ಯ. ಮದ, ಮತ್ಸರ, ಲೋಭ, ಮೋಹ ಮತ್ತು ಕಾಮದಂತಹ ಅರಿಷಡ್ವರ್ಗಗಳಿಗೆ ಬಲಿಯಾಗಿ ಮಾನವೀಯ ಮೌಲ್ಯಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡದೆ ಜೀವಿಸುವ ಜನರ ಬದುಕಿನ ಸ್ಥಿತಿ ಅಸಹನೀಯವಾದುದು. ಗಂಡ ಕಾರು ಓಡಿಸುವಾಗ ವಿಪರೀತ ಹಾರನ್ ಮಾಡುತ್ತಿದ್ದ ಎಂಬ ಕಾರಣ ನೀಡಿ ವಿಚ್ಛೇದನ ಪಡೆಯಲೆತ್ನಿಸುವುದು, ಗಂಡ ಬೇರೊಬ್ಬ ಹೆಣ್ಣಿನ ಜೊತೆ ಮಾತಾಡಿದ ಕಾರಣಕ್ಕೆ ಕೊಲೆ ಮಾಡುವ ಹೆಂಡತಿ, ಪಕ್ಕದ ಮನೆಯಲ್ಲಿ ಗಂಡ–ಹೆಂಡತಿ ಜಗಳವಾಡಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಹೆಣ್ಣನ್ನು ನೋಡುವ ಪಕ್ಕದ ಮನೆಯವರು–ಇವುಗಳು ಹಳ್ಳಿಯಲ್ಲಿ ನಡೆಯುವುದಿಲ್ಲ ಎಂದು ಹೇಳಲಾಗುವುದಿಲ್ಲ. ಆದರೆ ನಗರ ಜೀವನದಲ್ಲಿ ಸಾಮಾನ್ಯ ಎಂದು ಭಾವಿಸಬಹುದೇನೊ. ಓದುಗರ ಮನದಲ್ಲಿ ಉಳಿಯವುವಂತೆ ಮತ್ತು ತಮ್ಮನ್ನು ತಾವು ಪರಾಮರ್ಶನ ಮಾಡಿಕೊಳ್ಳುವಂತೆ ಇವುಗಳನ್ನು ಲೇಖಕರು ಚಿತ್ರಿಸಿದ್ದಾರೆ.

"ಬ್ರಾಹ್ಮಣರ ಹುಡುಗ ಚಪ್ಪಲಿ ಮಾರುತ್ತಾನೆ, ಮಾಂಸಹಾರಿ ಹೋಟೆಲಿನಲ್ಲಿ ಸಪ್ಲೈಯರ್ ಆಗುತ್ತಾರೆ. ಗೌಡರ ಹುಡುಗ ಕೇಟರಿಂಗ್ ಸಂಸ್ಥೆಗಳಲ್ಲಿ ಜನಿವಾರ ಹಾಕಿಕೊಂಡು ಮದುವೆ ಊಟ ಬಡಿಸುತ್ತಾನೆ".[9] ಎಂಬ ಮಾತು ಒಂದೆಡೆ ಜಾತಿ ಮೀರಿದ ಬದುಕನ್ನು ತಿಳಿಸಿದರೆ ಮತ್ತೊಂದೆಡೆ ನಗರಗಳಲ್ಲಿಯೂ ಜಾತಿ ವ್ಯವಸ್ಥೆ ಇಂದಿಗೂ ಗಟ್ಟಿಯಾಗಿ ನೆಲೆಸಿರುವುದನ್ನು

ತಿಳಿಸುತ್ತದೆ. ಹಳ್ಳಿಯಲ್ಲಿ ಇಂದಿಗೂ ಜೀವಂತವಾಗಿರುವ ಜಾತಿ ವ್ಯವಸ್ಥೆ ನಗರ ಜೀವನದಲ್ಲಿ ಆದಷ್ಟು ಕಡಿಮೆಯಿದೆ ಎಂಬುದು ಸತ್ಯ. ಜಾತ್ಯಾತೀತವಾದ ವರ್ಣಾಶ್ರಮ ಧರ್ಮವನ್ನು ಮೀರಿದ ಸಮಾಜದ ನಿರ್ಮಾಣದ ಆಶಯವನ್ನು ಲೇಖಕರು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಹೀಗೆ ಕಾಲ ಕಳೆದಂತೆ ಎಲ್ಲವೂ ಬದಲಾವಣೆಯನ್ನು ಹೊಂದುವುದು ಸಹಜ ಗುಣ. ಇದಕ್ಕೆ ಪ್ರಕೃತಿಯು ಹೊರತಾಗಿಲ್ಲ. "ಪಾಳೆಯಗಾರಿಕೆಯ ಸಂಸ್ಕೃತಿ ಜಾತಿಯನ್ನು, ಜಾತಿಯ ವೃತ್ತಿ ಮತ್ತು ಕುಶಲತೆಯನ್ನು ರಕ್ಷಿಸುವ ವ್ಯವಸ್ಥೆ. ನೂರಾರು ವರ್ಷಗಳ ಹಿಂದೆ ಬದುಕಿನ ಗುಡಿಗಾರನೊಬ್ಬ ಕೃಷ್ಣನ ವಿಗ್ರಹವನ್ನು ಕೆತ್ತಿ ದೊರೆಗೆ ಅರ್ಪಿಸುವುದನ್ನು ಕಲ್ಪಿಸಿಕೊಂಡರೆ ಇದು ಅರ್ಥವಾಗುತ್ತದೆ. ಯಾರು ಜಾತಿಯ ಶೋಷಣೆ, ಪಾಳೇಗಾರಿಕೆಯ ನೆಮ್ಮದಿ, ಚಲನೆಯಿಲ್ಲದ ಸಮಾಜದ ಮೌಢ್ಯವನ್ನು ನಂಬಿ ಬದುಕುತ್ತಾರೋ ಅವರಿಗೆ ಈ ವ್ಯವಸ್ಥೆಯೇ ಅನುಕೂಲ".[10] ಎಂಬ ಮಾತಿನಂತೆ ಮನುಷ್ಯನ ಬದುಕು ವಿದ್ಯೆ, ವಿಜ್ಞಾನ, ಸಂಸ್ಕೃತಿ, ಭಾಷೆ, ಆರ್ಥಿಕತೆ, ಸಾಹಿತ್ಯ ಮುಂತಾದ ಅನೇಕ ಕ್ಷೇತ್ರಗಳಲ್ಲಿ ಸಾಕಷ್ಟು ಅಭಿವೃದ್ಧಿ ಸಾಧಿಸಿದ್ದರೂ ಕೂಡ, ಆಧುನಿಕ ಮಹಾನಗರಗಳ ವೈಭವ, ಆಡಂಬರಗಳ ಮುಂದೆ ಮುಗ್ಧತೆಯ ಪ್ರತೀಕಗಳಂತೆ ಕಾಣುವ ಹಳ್ಳಿಗಳಲ್ಲಿ ಜಾತಿ ವ್ಯವಸ್ಥೆ, ಲೇಖಕರು ಕೊಡುವ ನಗರ ಜೀವನದ ಜಾತಿ ವ್ಯವಸ್ಥೆಯ ಹೇಳಿಕೆಯಂತೆ ಬದಲಾಗಿಲ್ಲ. ಬಡತನ, ದಾರಿದ್ರ್ಯ, ಮೌಢ್ಯಗಳಲ್ಲೇ ಇಂದಿಗೂ ಉಸಿರಾಡುತ್ತಿರುವ ಹಳ್ಳಿಗಳಿಗೆ ಜಾತಿ ವ್ಯವಸ್ಥೆ ಮತ್ತೊಂದು ಮಾರಕ. ಯಾವ ರೀತಿಯಲ್ಲಾದರೂ ಸರಿ ಜಾತಿ ಪದ್ಧತಿಯನ್ನು ಬುಡಸಮೇತ ಕಿತ್ತು ವಿಶ್ವಮಾನವತೆಯ ಬೀಜವನ್ನು ನೆಡಬೇಕು, ಸಮಾನತೆಯ ಸಮಾಜ ಕಟ್ಟಬೇಕು. ಆಗ ಮಾತ್ರ ಸುಸ್ಥಿರ ಸಮಾಜದ ನಿರ್ಮಾಣ ಸಾಧ್ಯ. ಆದರೆ ನಗರ ಜೀವನದಲ್ಲಿ ಎಲ್ಲ ಎಲ್ಲೆಗಳ ಮೀರಿ ಬದುಕಬೇಕಾದ ಅನಿವಾರ್ಯತೆ ಇರುತ್ತದೆ. ಹೇಗಾದರೂ ಸರಿ ತನ್ನ ಹೊಟ್ಟೆಯನ್ನು ತಾನೆ ತುಂಬಿಸಿಕೊಳ್ಳಬೇಕಾದ ಪರಿಸ್ಥಿತಿ ಇರುತ್ತದೆ. ಆದ್ದರಿಂದ ಸಸ್ಯಹಾರಿಯಾದ ಬ್ರಾಹ್ಮಣ ಮಾಂಸಹಾರಿ ಹೋಟೆಲ್ನಲ್ಲಿ ಕೆಲಸ ಮಾಡುತ್ತಾನೆ. ಒಕ್ಕಲಿಗನಾದ ಗೌಡ ಕೇಟರಿಂಗ್ ಮಾಡುತ್ತಾನೆ. ಜಾತಿಯನ್ನು ಮುರಿಯುವುದಕ್ಕೆ ಜಾತ್ಯಾತೀತ ವಿವಾಹವಾಗುವುದೊಂದೇ ದಾರಿಯಲ್ಲ. ಹೊಟ್ಟೆಪಾಡು, ಜೀವನೋಪಾಯದ ಹಸಿವು ಕೂಡ ಜಾತಿಯನ್ನು ಮೀರುವ ಹಾಗೆ ಮಾಡುತ್ತದೆ. ಈ ಆಧುನಿಕ ನಗರ ಜೀವನದಲ್ಲಿ ತಾನು ಇಂಥ ಜಾತಿಯಲ್ಲಿ ಹುಟ್ಟಿದವನೆಂಬ ಭಾವನೆಯನ್ನು ತಮ್ಮ ತಮ್ಮ ಮನೆಗಳಿಗೆ ಮಾತ್ರವೇ ಸೀಮಿತವಾಗಿರಿಸಬೇಕು. ಹೊರಗಿನ ಸಮಾಜದಲ್ಲಿ ಅವನು ಜಾತ್ಯಾತೀತನಾಗಿ ಬದುಕಬೇಕಾಗುತ್ತದೆ. ಹಾಗೆಯೇ ಬದುಕಿದರೆ ಮಾತ್ರ ಜೀವನ ಸುಲಭವೂ ಸಹಜವೂ ಆಗಿರುತ್ತದೆ. ಆದರೂ ಕೆಲವೊಮ್ಮೆ ನಾವು ಬಿಟ್ಟರೂ ಜಾತಿ ನಮ್ಮನ್ನು ಬಿಡದೆ ಬೆನ್ನಟ್ಟುತ್ತದೆ. ಕೆಲವೊಮ್ಮೆ ನಮ್ಮದಲ್ಲದ ಜಾತಿಯ ವೇಷ ಹಾಕಿ ಬದುಕಬೇಕಾಗುತ್ತದೆ. ಆಧುನಿಕ ಜೀವನದಲ್ಲಿ ಜಾತಿ ಪರಿಕಲ್ಪನೆ ಹೀಗೆ ಬದಲಾಗಿರುವುದು ವಿಪರ್ಯಾಸ.

ಜೋಗಿಯವರ ನಗರ ಜೀವನದ ಒಡನಾಟದ ಅನುಭವವೇ ಕಾದಂಬರಿಯ ರೂಪ ಪಡೆದಿದೆ. "ಅನುಭವಗಳನ್ನು ಬಹುಶಃ ಯಾರೂ ಹುಡುಕಿಕೊಂಡು ಹೋಗುವುದಿಲ್ಲ ಲೋಕಕ್ಕೂ ನಮಗೂ ಒದಗುವ ನಿರಂತರ ಸಂಪರ್ಕ ಹಾಗೂ ಸಂಘರ್ಷಗಳ ಪರಿಣಾಮಗಳೆ ಅನುಭವಗಳಾಗಿ ಲಭಿಸುತ್ತವೆ."[11] ಎಂಬ ಜಿಎಸ್ಎಸ್ ಅವರ ಮಾತು ನೆನಪಾಗುತ್ತದೆ. ಜೋಗಿಯವರ ಬಹುಪಾಲು ಕಾದಂಬರಿಗಳಲ್ಲಿ ನಗರ ಜೀವನದ ಸಂಘರ್ಷವೇ ಸ್ಥಾಯಿಯಾಗಿರುತ್ತದೆ. ಆ ಸಂಘರ್ಷ ತಂದೊಡ್ಡುವ ದುರಂತವನ್ನು ಅನುಕಂಪ, ಮಾನವೀಯ ದೃಷ್ಟಿಯಿಂದ ನೋಡುವ ಒಬ್ಬ ಮೌಲ್ಯವುಳ್ಳ ವ್ಯಕ್ತಿಯಾಗಿ ಕಾದಂಬರಿಕಾರರು ಕಾಣುವರು. ಆ ಹಿನ್ನೆಲೆಯಲ್ಲಿ ಜೋಗಿಯವರು ತಮ್ಮ ಕಾದಂಬರಿಗಳಲ್ಲಿ ಒಂದು ಪೋಷಕ ಪಾತ್ರವಾಗಿ ಮಿಕ್ಕ

ಪಾತ್ರಗಳಿಗೆ ಜೀವ ಕೊಡುತ್ತಾರೆ. ಅವರು ಯಾರಿಗೋ ಹೇಳುತ್ತಿರುವಂತೆ ಇಲ್ಲವೇ ಅವರಿಗೆ ಯಾರೋ ಹೇಳುತ್ತಿರುವಂತೆ ತಂತ್ರ ಇರುತ್ತದೆ.

ಒಂದು ಬೃಹತ್ ನಗರದಲ್ಲಿ ವಾಸಿಸುವ ಮನುಷ್ಯ ಜೀವನವನ್ನು ಶ್ರದ್ಧೆಯಿಂದ ಪರಿಭಾವಿಸುವ, ವ್ಯಾಖ್ಯಾನಿಸುವ ಮತ್ತು ವಿಮರ್ಶಿಸುವ ಮನಸ್ಸು ಜೋಗಿಯವರದು. ಕಾದಂಬರಿಯಲ್ಲಿ ರೂಪು ಪಡೆಯುವ ಅನುಭವ ನಗರ ಜೀವನದ ಬೋಧೆಯಾಗಿದೆ. ಪ್ರಸ್ತುತ ನಗರ ಸಂಸ್ಕೃತಿಯ ಸತ್ವವನ್ನು ಅದರ ಗುಣಾವಗುಣಗಳನ್ನು ಸಂದರ್ಭಕ್ಕನುಗುಣವಾಗಿ ಚಿನ್ಮಯಿ, ಲೀಲಾವತಿ, ವೆಂಕಟರಮಣ ಮತ್ತು ಪಾಮಜ್ಜಿಯ ಜೀವನದ ಹಲವು ಸನ್ನಿವೇಶಗಳಿಂದ ಲೇಖಕರು ಚಿತ್ರಿಸುತ್ತಾರೆ. ಆಧುನಿಕ ಮಾನವನ ಲಕ್ಷಣಗಳನ್ನು ತೆರೆದು ತೋರುವ ಜೋಗಿಯವರಲ್ಲಿ ಮಾನವೀಯ ಮೌಲ್ಯ, ಜೀವನ ವಿವೇಕ, ಸದೃಢವಾದ ಅನುಭವ ಸಮೃದ್ಧವಾಗಿದೆ. ಅದರ ಜೊತೆಗೆ ಸುಂದರ ನಿರೂಪಣೆಯ ಗುಣವೂ ಕಾದಂಬರಿಯ ಉನ್ನತ ಕಲೆಗಾರಿಕೆಗೆ ಕಾರಣವಾಗಿದೆ.

ಬಹಳ ವರ್ಷಗಳಿಂದ ಬೆಂಗಳೂರಿನಲ್ಲೇ ಜೀವನ ಮಾಡುತ್ತಿದ್ದವರೂ ಕೂಡ ಒಮ್ಮೆಗೇ ದಾಟಲಾಗದಂತಹ ರಸ್ತೆಗಳು, ನಿರ್ಭಯವಾಗಿ ನಡೆಯಲಾರದಂತಹ ಫುಟ್‌ಪಾತು, ಹಿಡಿಯಲಾರದಂತಹ ಬಸ್ಸುಗಳು, ಕರೆದೆಡೆಗೆ ಬರದ ಆಟೋಗಳು, ವಯಸ್ಸಾದವರು ಹತ್ತಲಾರದಷ್ಟು ಎತ್ತರದಲ್ಲಿರುವ ಮೆಟ್ರೋ ಸ್ಟೇಷನ್ನುಗಳು, ಇಂಗ್ಲೀಷ್ ಗೊತ್ತಿಲ್ಲದವರಿಗೆ ಕಂಗಾಲು ಮಾಡುವ ಮಹಾನಗರ, ಕರ್ನಾಟಕದಲ್ಲಿದ್ದರೂ ಯಾವುದೋ ಹೊರರಾಜ್ಯದವರಂತೆ ಕನ್ನಡ ಗೊತ್ತಿಲ್ಲದ ಜನಸಮೂಹ, ಬಹುತೇಕ ಹೊಸಬರಿಂದಲೇ ತುಂಬಿರುವ ಮತ್ತು ಮೂಲನಿವಾಸಿಗಳು ಮರೆಯಾದ ಊರು, ಹೊರಗಡೆ ಯಾರನ್ನೇ ಕೇಳಿದರೂ ನಾನು ಕೂಡ ಈ ಸಿಟಿಗೆ ಹೊಸಬ ಎಂಬ ಉತ್ತರವನ್ನು ಕೊಟ್ಟು ಪಾರಾಗುವವರೇ ತುಂಬಿರುವ ಬೆಂಗಳೂರು ಒಂದು ವಿಸ್ಮಯ. ಬೆಂಗಳೂರಿನಂತೆ ಅನೇಕ ಮಹಾನಗರಗಳೂ ವಿಸ್ಮಯವೇ ಆಗಿವೆ. ಪಾಮಜ್ಜಿಯ ಅಸಹಾಯಕತೆಯನ್ನು ಒಮ್ಮೆ ನೆನೆದ ಲೇಖಕರು **"ಮಹಾನಗರಕ್ಕೆ ವಯಸ್ಸಾದವರ ಮೇಲೆ ಯಾವ ಕರುಣೆಯೂ ಇಲ್ಲ ಅದು ಎಲ್ಲರನ್ನೂ ಒಂದೇ ಥರ ನೋಡುತ್ತದೆ".**[12] ಎಂದು ಹೇಳಿದ್ದಾರೆ. ಮನುಷ್ಯನಿಗೆ ಪ್ರಕೃತಿದತ್ತವಾಗಿ ಬಂದ ಮೂಲ ಶಕ್ತಿಗಳಲ್ಲಿ ಅನುಕಂಪ, ಮಾನವೀಯ ಮೌಲ್ಯಗಳು ಮುಖ್ಯವಾದವು. ಮಾನವ ಪ್ರಪಂಚದಲ್ಲಿ ಇವುಗಳಿಗೆ ಸ್ಥಾನ ದೊರೆತಾಗ ಮಾತ್ರ ಮನುಷ್ಯ ಸಂಕುಲ ಸುಖ, ನೆಮ್ಮದಿಯಿಂದ ಜೀವಿಸುತ್ತದೆ. ಮಾನವ ಜನಾಂಗದ ಒಳಮನಸ್ಸು ಈ ಪ್ರಮುಖ ಅಂಶಗಳನ್ನು ಇಟ್ಟುಕೊಂಡು ಉನ್ನತ ಮತ್ತು ಉದಾತ್ತ ನೆಲೆಯಲ್ಲಿ ಪ್ರಕಾಶಗೊಳ್ಳಬೇಕು. ಬೆಂಗಳೂರು ನಗರ ಜೀವನದ ಲಕ್ಷಣಗಳನ್ನು ಚಿತ್ರಿಸಿರುವ ಲೇಖಕರ ನಿಲುವು ಮಾನವೀಯ ಮೌಲ್ಯಗಳನ್ನು ಸ್ಥಾಪಿಸುವುದೇ ಆಗಿದೆ.

ಯಾವುದೇ ಬಗೆಯ ಮಡಿವಂತಿಕೆಯಿಲ್ಲದೆ ಸಂಕೋಚವಿಲ್ಲದೆ ಬದುಕಿನ ಎಲ್ಲಾ ಬಗೆಯ ಅನುಭವಗಳಿಗೆ ಮುಕ್ತವಾಗಿ ತೆರೆದುಕೊಂಡಿರುವ ಮನಸ್ಥಿತಿ ಜೋಗಿಯವರದು. ಅವರ ಬರವಣಿಗೆಯ ಮಾನವೀಯ ದೃಷ್ಟಿಕೋನದ ಜೀವಂತ ತುಡಿತವೇ ಸಲಾಂ ಬೆಂಗಳೂರು ಕಾದಂಬರಿ.

**ಕೊನೆ ಟಿಪ್ಪಣಿಗಳು**

1. ಜೋಗಿ. (2020). ಸಲಾಂ ಬೆಂಗಳೂರು. ಪು. 7
2. ಅದೇ. ಪು.124
3. ಅದೇ. ಪು.15
4. ಪೋತೆ, ಎಚ್. ಟಿ. ವಿಚಾರ ಸಾಹಿತ್ಯ, ಪು.303
5. ಜೋಗಿ. (2020). ಪೂರ್ವೋಕ್ತ. ಪು.23
6. ಅದೇ. ಪು.59
7. ಪೋತೆ, ಎಚ್. ಟಿ. ಪೂರ್ವೋಕ್ತ. ಪು.303
8. ಲಂಕೇಶ್. ಪಿ. (2010). ಟೀಕೆ ಟಿಪ್ಪಣಿ, ಪು.191
9. ಜೋಗಿ. (2020). ಪೂರ್ವೋಕ್ತ. ಪು.34
10. ಲಂಕೇಶ್. ಪಿ. (2010). ಪೂರ್ವೋಕ್ತ. ಪು.179

11. ಶಿವರುದ್ರಪ್ಪ ಜಿ ಎಸ್. (2016). ಸಮಗ್ರ ಗದ್ಯ 2, ಪುಟ 2
12. ಜೋಗಿ. (2020). ಪೂರ್ವೋಕ್ತ. ಪು.80

**ಪರಾಮರ್ಶನ ಗ್ರಂಥಗಳು**


- ಜವರೇಗೌಡ ದೇ. (2012). *ಕನ್ನಡ ಸಂಸ್ಕೃತಿ.* ಕನ್ನಡ ಸಾಹಿತ್ಯ ಪರಿಷತ್ತು.
- ಜೋಗಿ. (2020). *ಸಲಾಂ ಬೆಂಗಳೂರು.* ಅಂಕಿತ ಪುಸ್ತಕ.
- ಕೀರ್ತಿನಾಥ ಕುರ್ತಕೋಟಿ. (2016). *ಯುಗಧರ್ಮ ಹಾಗೂ ಸಾಹಿತ್ಯ ದರ್ಶನ.* ಮನೋಹರ ಗ್ರಂಥಮಾಲಾ.
- ಲಂಕೇಶ್, ಪಿ. (2010). *ಟೀಕೆ ಟಿಪ್ಪಣಿ.* ಲಂಕೇಶ್ ಪ್ರಕಾಶನ.
- ರಾಮಚಂದ್ರನ್, ಸಿ ಎನ್. (2010). ವಸಾಹತೋತ್ತರ ಚಿಂತನೆ : ಅಂಕಿತ ಪುಸ್ತಕ.
- ರಾಮಚಂದ್ರನ್, ಸಿ ಎನ್. (2017). *ಸಮಕಾಲೀನ ತಲ್ಲಣಗಳು, ಚರಿತ್ರೆ, ಸಾಹಿತ್ಯ.* ಸಪ್ನ ಬುಕ್ ಹೌಸ್.
- ರಹಮತ್ ತರೀಕೆರೆ. (2019). *ಸಾಂಸ್ಕೃತಿಕ ಅಧ್ಯಯನ.* ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಸತ್ಯನಾರಾಯಣ. (2012). *ಜಾಗತೀಕರಣ ಮತ್ತು ಕರ್ನಾಟಕ.* : ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.
- ಶಿವರುದ್ರಪ್ಪ ಜಿ ಎಸ್. (2016). ಸಮಗ್ರ ಗದ್ಯ–2, ಪ್ರಿಯದರ್ಶಿನಿ ಪ್ರಕಾಶನ.
- ಶಿವರಾಮಕಾರಂತ ಕೆ. (2018). *ಬಾಳ್ವೆಯೇ ಬೆಳಕು.* ಸಪ್ನ ಬುಕ್ ಹೌಸ್.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.41-45
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಶಿವಶರಣರ ಬದುಕು ಸಾರ್ವಕಾಲಿಕ ಆದರ್ಶ

**ಡಾ. ರಾಜಶೇಖರ ಎಸ್. ದಾನರಡ್ಡಿ**
ಸಹಾಯಕ ಕನ್ನಡ ಪ್ರಾಧ್ಯಾಪಕ, ಪಂಡಿತ ಪಂಚಾಕ್ಷರಿ ಗವಾಯಿಗಳವರ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಗದಗ

***Abstract:***
*ಶರಣರು ಈ ಭೂಮಿಗೆ ಬಂದ ವಿಚಾರವಂತರು ದೈವಿಸಂಭೂತರು ಸಮಾಜದ ಕಲ್ಯಾಣದೆಡೆಗೆ ಸದಾ ಚಿಂತನೆ ನಡೆಸಿದವರು. ಅವರ ವಿಚಾರಗಳು ಅವರ ವಚನಗಳಲ್ಲಿ ವ್ಯಕ್ತವಾಗಿವೆ. ಶರಣರು ಬದುಕಿದಂತೆ ಬರೆದರು ಮತ್ತು ಬರೆದಂತೆ ಬದುಕಿದರು. ಬಹು ಸಂಖ್ಯೆಯಲ್ಲಿ ಇಂಥ ಶರಣರನ್ನು ಪಡೆದ ಕರ್ನಾಟಕವು ಒಂದು ಪುಣ್ಯಭೂಮಿ. ಅವರು ನಡೆದ ಈ ನೆಲ, ಕುಡಿದ ಜಲಗಳೆಲ್ಲವೂ ಪಾವನ. ಸಮಾಜ ಕಲ್ಯಾಣವನ್ನು ಗುರಿಯಾಗಿಟ್ಟುಕೊಂಡು ನಡೆಸಿದ ಚಿಂತನೆಯೇ ಇದಕ್ಕೆ ಕಾರಣ. ಶಿವಶರಣರ ಪ್ರತಿಯೊಂದು ವಚನವೂ ಅವರ ಬದುಕಿನ ನಡೆಯನ್ನೇ ಹೇಳುತ್ತೇವೆ. ಅವರ ಬದುಕು ಮೌಲ್ಯಯುತವಾಗಿತ್ತು. ಅವರ ಒಂದೊಂದು ಮಾತುಗಳ ಸಹ ಕಾವ್ಯದಂತೆಯೇ ಗೋಚರಿಸಿದವು. ಅದಕ್ಕಾಗಿಯೇ ಅವರ ಮಾತುಗಳು ಇಂದಿಗೂ ನಮಗೆ ವಚನಗಳಾಗಿ ಉಳಿದುಕೊಂಡಿವೆ.*

***Keywords:*** *ಕನ್ನಡ ಸಾಹಿತ್ಯ, ವಚನ ಸಾಹಿತ್ಯ, ಶಿವಶರಣರು, ಆದರ್ಶ ಜೀವನ.*

## ಪೀಠಿಕೆ

ಸಮಾಜದ ಕಲ್ಯಾಣದೆಡೆಗೆ ಸದಾ ಚಿಂತನೆ ನಡೆಸಿದ ಶಿವಶರಣರು ಬರೆಯಬೇಕೆಂದು ಬರೆದವರಲ್ಲ, ಅವರು ಬರೆದು ಪ್ರಸಿದ್ಧಿಗಳಿಸುವ ಯಾವ ಹಮ್ಮು-ಬಿಮ್ಮುಗಳೂ ಇರಲಿಲ್ಲ. ಅವರು ಬರೆದುದು ತಮಗಾಗಿ ಅಲ್ಲ ಜನತೆಗಾಗಿ ಜನರ ಜೀವನ ಹಸನಾಗಬೇಕು, ಅವರ ಬದುಕಿನಲ್ಲಿರುವ ಅಂಧಃ ಶ್ರದ್ಧೆ, ಮೂಢನಂಬಿಕೆ, ಕಂದಾಚಾರಗಳು, ಹೀಗೆ ಇನ್ನೂ ಮುಂತಾದ ಸಮಾಜಕ್ಕಂಟಿರುವ ಶಾಪವನ್ನು ಕಳೆದು ಅಂದಿನ ಸಮಾಜಕ್ಕೆ ಅರಿವು ಕೊಡುವುದೇ ಶರಣರ ಉದ್ದೇಶವಾಗಿತ್ತು. ಹೀಗಾಗಿ ಕಾಯಕ ಮಾಡುತ್ತಾ ದಾಸೋಹ ಕಾರ್ಯವನ್ನು ನಡೆಸುತ್ತಾ ತಮ್ಮ ಬಿಡುವಿನ ವೇಳೆಯಲ್ಲಿ ವಚನ ರಚನೆಗಳ ಮೂಲಕ ಸಮಾಜವನ್ನು ತಿದ್ದಲು ಪ್ರಯತ್ನ ಪಟ್ಟರು. ಹೀಗಾಗಿ ಅವರ ವಚನಗಳೆಲ್ಲವೂ ನಮಗೆ ಸಾರ್ವಕಾಲಿಕ ಆದರ್ಶವಾಗಿ ಇವತ್ತಿಗೂ ಜೀವಂತವಾಗಿವೆ.

ಶರಣ ಎನ್ನುವದನ್ನು ನಾವು ಭಕ್ತ ಎನ್ನುವ ಅರ್ಥದಲ್ಲಿ ಪರಿಭಾವಿಸುವುದೇ ಹೆಚ್ಚು ಹನ್ನೆರಡನೇ ಶತಮಾನದಲ್ಲಿ ಬಸವಾದಿ ಪ್ರಮಥರು ದೇವರನ್ನು ಅರಿತವರಾಗಿ, 'ನಾನು ದೇವರನ್ನು ಅರಿತಿದ್ದೇನೆ' ಎಂದು ಹೇಳದೆ ದೇವರ ಒಂದು ಭಾಗವೇ ಆಗಿ ದೇವರಲ್ಲಿ ನಾವು ಆವಾಹಿಸಿಕೊಂಡಂಥ ದಯೆ ಮತ್ತು ಕಾರುಣ್ಯಭಾವದ ಪ್ರತಿರೂಪವಾಗಿದ್ದರು. ಅಣ್ಣ ಬಸವಣ್ಣ ಸಹಜ ಜೀವನದಲ್ಲೇ ಶರಣತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡವನು. ಆದ್ದರಿಂದಲೇ ಆತ.

***Please cite this article as:*** ರಾಜಶೇಖರ ಎಸ್. ದಾನರಡ್ಡಿ. (2024). ಶಿವಶರಣರ ಬದುಕು ಸಾರ್ವಕಾಲಿಕ ಆದರ್ಶ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್,* 2(6), 41–45.

*ಅಂದು ಇಂದು ಮತ್ತೊಂದೆನಬೇಡ*
*ದಿನವಿಂದೇ ಶಿವಶರಣೆಂಬವಂಗೆ*
*ದಿನವಿಂದೇ ಹರ ಶರಣೆಂಬವರಿಗೆ*
*ದಿನವಿಂದೇ ನಮ್ಮ ಕೂಡಲ ಸಂಗನ ಮಾಣದೆ ನೆನವಂಗೆ*

ಎನ್ನುತ್ತಾನೆ. ಅಂದರೆ ನಾನು ನಿನ್ನೆ ಶರಣನಾಗಿದ್ದೆ, ಇಂದು ಶರಣನಾಗುವೆ ಎನಬೇಡ. ಇಂದು ಈ ಕ್ಷಣವೆ ಶರಣನಾಗಲು ಪ್ರಶಸ್ತ ಮತ್ತು ಪ್ರತ್ಯಕ್ಷ ಕ್ಷಣ ಕೂಡಾ ಎನ್ನುವದು. ಕೂಡಲಸಂಗನನ್ನು ತಪ್ಪದೆ ನೆನಸಿಕೊಳ್ಳುತ್ತಾ ಶರಣನಾಗು ಎನ್ನುವ ಕರೆಯಷ್ಟೇ ಅಲ್ಲ. ಆ ಕರೆಯಲ್ಲಿ ತಾನೂ ಒಳಗೊಂಡಿದ್ದೆನೆ ಎನ್ನುವ ಭಾವ. ಆದರೆ ಅಲ್ಲಮ,

*ಹರಿವ ನದಿಗೆ ಮೈಯೆಲ್ಲಕಾಲು*
*ಉರಿವ ಕಿಚ್ಚಿಗೆ ಮೈಯೆಲ್ಲ ನಾಲಿಗೆ*
*ಬೀಸುವ ಗಾಳಿಗೆ ಮೈಯೆಲ್ಲಾ ಮುಖ(ಕೈ)*
*ಗುಹೇಶ್ವರಾ ನಿಮ್ಮ ಶರಣರಿಗೆ*
*ಸರ್ವಾಂಗವೆಲ್ಲ ಲಿಂಗ!*

ಎಂದು ತನ್ನನ್ನು ಬಿಟ್ಟು ಶಿವ ಎನ್ನುವದು ಬೇರೆ ಇರಲು ಸಾಧ್ಯವಿಲ್ಲ ಎಂದು ಶಿವತತ್ತ್ವವೇ ಶರಣತತ್ತ್ವ ಎಂದು ವ್ಯಾಖ್ಯಾನಿಸುತ್ತಾನೆ. ಆದರೆ ಈ ಶಿವತತ್ತ್ವವನ್ನು ಸಾಮಾನ್ಯರು ಸಾಕ್ಷಾತ್ಕರಿಸಿಕೊಳ್ಳುವದು ಕಷ್ಟ ಸಾಧ್ಯ ಎಂದು ಕೊಂಡೇ ಬಸವಣ್ಣ.

*ಎನ್ನ ಕಾಯವ ದಂಡಿಗೆಯ ಮಾಡಯ್ಯ*
*ಎನ್ನಶಿರವ ಸೋರೆಯ ಮಾಡಯ್ಯ*
*ಎನ್ನ ನರನ ತಂತಿಯ ಮಾಡಯ್ಯ*
*ಎನ್ನ ಬೆರಳ ಕಡ್ಡಿಯ ಮಾಡಯ್ಯ*
*ಬತ್ತೀಸರಾಗವ ಪಾಡಯ್ಯ ಉರದಲೊತ್ತಿ ಬಾರಿಸು*
*ಕೂಡಲ ಸಂಗಮದೇವಾ.*

ಎನ್ನುತ್ತಾನೆ. ಇದು ಶರಣ ತತ್ವದೊಂದಿಗೆ ಐಕ್ಯವಾಗದವರ ಭಕ್ತಿಮಾರ್ಗ. ಆದರೂ ಇಲ್ಲಿನ ತಾತ್ವಿಕತೆಯೂ ಇನ್ನೂ ಅಕ್ಷರ ಜ್ಞಾನವಿಲ್ಲದ ಸಾವಿರಾರು ಜನರಿಗೆ ತಲುಪಬೇಕು ಎನ್ನುವಂತೆ ದೇವಾಲಯ ಸಂಸ್ಕೃತಿಯನ್ನು ನಿಧಾನವಾಗಿ ಧಿಕ್ಕರಿಸಲು ಕರೆಕೊಡುತ್ತಾನೆ.

*ಉಳ್ಳವರು ಶಿವಾಲಯವ ಮಾಡುವರು*
*ನಾನೇನು ಮಾಡಲಿ ಬಡವನಯ್ಯಾ?*
*ಎನ್ನ ಕಾಲೇಕಂಬ, ದೇಹವೇ ದೇಗುಲ*
*ಶಿರವೇ ಹೊನ್ನ ಕಲಶವಯ್ಯ*
*ಕೂಡಲ ಸಂಗಮದೇವ ಕೇಳಯ್ಯ*
*ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ*

ತೋರಿಕೆಗೆ ಇದು ಶಿವತತ್ತ್ವನ್ನು ಪ್ರತಿಪಾದಿಸುವ ಚಿಂತನೆಯಾದರೂ ಇದರೊಳಗೆ ಅಪರೂಪದ ಒಂದು ಸೂಕ್ಷ್ಮ ಸಂವೇದನೆ ಇದೆ. ವರ್ಗ–ವರ್ಣ ವ್ಯವಸ್ಥೆಗೆ, ತನ್ಮೂಲಕ ಸ್ಪರ್ಶ ಅಸ್ಪೃಶ್ಯತೆಯ ಮೂಲದಿಂದ ಉಂಟಾಗಿದ್ದ ಅಸಮಾನತೆಗೆ ದೇವಾಲಯವೇ ಕಾರಣವಾಗಿರುವದರಿಂದ ದೇವರು ಎನ್ನುವವನು ದೇವಾಲಯದಲ್ಲಿ ಇಲ್ಲ ಆತ ನಮ್ಮಲ್ಲೇ ಇದ್ದಾನೆ ಎಂದು ಜನ ಭಾವಿಸಿಕೊಂಡರೆ ಅದು ಶಿವತತ್ತ್ವವಷ್ಟೇ ಅಲ್ಲ. ಸಾಮಾಜಿಕ ನ್ಯಾಯವೂ ಹೌದು ಎನ್ನುವ ದೂರದೃಷ್ಟಿ (ಸಮೀಪ ದೃಷ್ಟಿಯೂ ಹೌದು) ಬಸವಣ್ಣನದ್ದು. ಶರಣಭಾವ ಎನ್ನುವದು ಬಸವಣ್ಣನ ಕಾಲದ ತನಕ ಸಾಮಾಜಿಕವಾಗಿ ಹೊರಗಿತ್ತು. ಅಂದರೆ ಭಕ್ತಿ ಭಾವದಲ್ಲೂ ಒಳಹೊರಗೆ ಎಂಬುದು ವೇದಾದಿ ಆಗಮಗಳಲ್ಲಿ ಇರದೇ ಇದ್ದರೂ ಅದನ್ನು ಅರ್ಥಮಾಡಿಕೊಳ್ಳಲಾಗದ ಮೇಲ್ವರ್ಗದವರು, ವೇದಾದಿ ಆಗಮಗಳನ್ನೇ ತಪ್ಪಾಗಿ ಅರ್ಥೈಸಿ ಅದನ್ನು ಮುಂದೆ ದೇವಾಲಯ ಸಂಸ್ಕೃತಿಯ ಭಾಗವಾಗಿಸಿದರು. ಅದನ್ನು ಒಡೆಯುವದು ಅಂದರೆ ವೇದಾದಿಗಳನ್ನು ತಿರಸ್ಕರಿಸುವುದು ಎಂದು ಹೇಳುವದೇ ಬಸವಣ್ಣನಿಗೆ ಮುಖ್ಯವಾಗಿತ್ತು. ಆದರೆ ಅವುಗಳಲ್ಲಿ ತಾತ್ವಿಕ ಅಂಶಗಳನ್ನು ದೇಶಿ ಭಾಷೆಯಲ್ಲಿ ವಚನ ರೂಪಕ್ಕೆ ತರುವದು ಮತ್ತು ದೇವಾಲಯ ಸಂಸ್ಕೃತಿಯ ಜೊಳ್ಳನ್ನು ವಚನಗಳ ರೂಪದ ಅರಿವಿನಿಂದ ನಿವಾರಿಸುವುದು ನಿಜವಾದ 'ಧರ್ಮವೇ' ಎಂದು ಬಸವಣ್ಣ ನಂಬಿದ್ದ.

ಶರಣರು ನುಡಿದಂತೆ ನಡೆದರು. ಅರಿವು ಆಚಾರಗಳನ್ನು ಸಮನ್ವಯಗೊಳಿಸಿ ಅನುಭಾವವನ್ನು ಹೊಂದಿದರು. ಪರಮ ಸುಖಿಗಳಾದರು. ಅರಿವು ಆಚಾರವಿಲ್ಲದೆ ಅನುಭಾವವಿಲ್ಲ. ಅನುಭಾವವಿಲ್ಲದೆ ಆನಂದವಿಲ್ಲ. ಪಕ್ಷಿಯ ಎರಡು ರೆಕ್ಕೆಗಳಂತೆ ಜ್ಞಾನ ಕ್ರೀಯೆ ಎರಡೂ ಮುಖ್ಯ. ಅಕ್ಕಿಯಿಲ್ಲದ ತುಷಕ್ಕೆ ಅಗ್ಘವಣಿಯನರೆದಡೆ ಅದೆಂದಿಗೆ ಬೆಳೆದು ಫಲವಪ್ಪುದಯ್ಯ? ಎಂದು ಮಹಾದೇವಿಯಕ್ಕ ಕೇಳುತ್ತಾರೆ. ಅಂದರೆ ಅಕ್ಕಿಯಿಲ್ಲದ ಬರಿ ತೌಡು ಬಿತ್ತಿ ನೀರನ್ನು ಎರೆದರೆ ಫಲವಿಲ್ಲ ಎಂಬುದು ಅರಿವು. ಇನ್ನೂ ತೌಡು ತಗೆದು ಬರಿ ಅಕ್ಕಿಯನ್ನು ಬಿತ್ತಿದರೂ ಫಲವಿಲ್ಲ. ಇದು ಆಚಾರ, ಅದಕ್ಕೆ ತೌಡಿನ ಸಹಿತ ಅಕ್ಕಿ ಇದ್ದ ಬತ್ತವನ್ನು ಬಿತ್ತಿದರೆ ಫಲವಿದೆ. ಅದಕ್ಕೆ ಅರಿವಿಲ್ಲದ ಆಚಾರ ಕುಂಟು. ಆಚಾರವಿಲ್ಲದ ಅರಿವು ಕುರುಡು ಎಂದಿರುವರು ಶರಣರು. ನಡೆ ನುಡಿಗೆ ಸಂಬಂಧಿಸಿದಂತೆ ಮಾದಾರ ಚೆನ್ನಯ್ಯನ ವಚನವೊಂದು ಹೀಗಿದೆ–

***ನಡೆ ನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆಸೂತಕವಿಲ್ಲ***

***ನುಡಿ ಲೇಸು ನಡೆಯ ಧರ್ಮವಾದಲ್ಲಿ***

***ಅದು ಬಿಡುಗಡೆಯಿಲ್ಲದ ಹೊಲೆ***

***ಕಳವು ಪಾರದ್ವಾರಂಗಳಲ್ಲಿ ಹೊಲಬನರಿಯದೆ***

***ಕೆಟ್ಟು ನಡೆವುತ್ತ ಮತ್ತೆ ಕುಲಜರೆಂಬ ಒಡಲವರುಂಟೆ?***

***ಆಚಾರವೇ ಕುಲ, ಅನಾಚಾರವೆ ಹೊಲೆ,***

***ಇಂತೀ ಉಭಯವ ತಿಳಿದರಿಯಬೇಕು.***

***ಕೈಯುಳಿಕತ್ತಿ ಅಡಿಗೊಂಟಕೆ? ಅಡಿಯಾಗಬೇಡ***

***ಅರಿನಿಜಾತ್ಮಾರಾಮನಾ***

ನಮ್ಮ ನಡೆ ಮತ್ತು ನುಡಿಯಲ್ಲಿ ವ್ಯತ್ಯಾಸವಾದರೆ ಆತ್ಮ ವಂಚಕರಾಗುವೆವು. ನಮ್ಮ ನಡೆ ನುಡಿಗಳೇ ನಮ್ಮ ಸಿದ್ಧಾಂತವಾಗಬೇಕು. ಅಂದರೆ ನಮ್ಮ ನಡೆ ನುಡಿಯಲ್ಲಿ ಯಾವುದೇ ವ್ಯತ್ಯಾಸವಾಗಬಾರದು. ಹೀಗೆ ಬದುಕುವವರೇ ಕುಲಜರು. ಅಂದರೆ ಅವರು ಯಾವುದೇ ಕುಲದವರಿದ್ದರೂ ಕುಲಸೂತಕವಿರುವದಿಲ್ಲ. ಹೊಲೆಸೂತಕ ವಿರುವದಿಲ್ಲ. ಒಳ್ಳೆಯ ಮಾತನಾಡುತ್ತಾ ಕೆಟ್ಟ ನಡವಳಿಕೆ ಇದ್ದರೆ ಅದು ಮುಕ್ತಿ ಕಾಣದ ಹೊಲೆಬದುಕು. ಕಳ್ಳತನ, ವ್ಯಬಿಚಾರ ಮುಂತಾಗಿ ದಾರಿತಪ್ಪಿ ಹಾಳಾಗಿ ಹೋಗುವವರು ಕುಲೋತ್ತಮರು ಎಂದು ಹೇಳಲು ಸಾಧ್ಯವೇ ಎಂದು ಚೆನ್ನಯ್ಯನವರು ಪ್ರಶ್ನಿಸುತ್ತಾರೆ. ಸದಾಚಾರವೇ ಕುಲ, ಅನಾಚಾರವೆ ಹೊಲೆ, ಎಂದು ವ್ಯಾಖ್ಯಾನಿಸುತ್ತಾರೆ. ಈ ಸರಿ ತಪ್ಪುಗಳ ಬಗ್ಗೆ ಪರಿಜ್ಞಾನವಿರಬೇಕು. ಅಂದಾಗ ಮಾತ್ರ ನನ್ನೊಳಗಿನ ಘನವನ್ನು ತಿಳಿದುಕೊಂಡು ಘನಮನದವರಾಗಲು ಸಾಧ್ಯ ಎಂದು ಈ ವಚನದಲ್ಲಿ ತಿಳಿಸಿರುವರು.

ಜೇಡರ ದಾಸಿಮಯ್ಯ ಶಿವನಿಗೆ ಸವಾಲು ಹಾಕುವ ವಚನವೊಂದು ಹೀಗಿದೆ–

***ಒಡಲುಗೊಂಡವ ಹಸಿವ; ಒಡಲುಗೊಂಡವ ಹುಸಿವ***

***ಒಡಲುಗೊಂಡವನೆಂದು***

***ನೀನೆನ್ನ ಜಡಿದೊಮ್ಮೆ ನುಡಿಯದಿರ***

***ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡ ರಾಮನಾಥ.***

ದೇವರು ನಿರಾಕಾರನಾಗಿದ್ದಾನೆ. ಹಸಿವು ತೃಷೆಗಳು ಆತನಬಳಿ ಸುಳಿಯಲಾರವು. ಆದರೆ ಜನ ಲೌಕಿಕ ಜಗತ್ತಿನಲ್ಲಿದ್ದಾರೆ ಅವರಿಗೆ ಹಸಿವು ನೀರಡಿಕೆಗಳಾಗುತ್ತವೆ. ಬಡವರಿಗಂತೂ ಹೊಟ್ಟೆ ತುಂಬಿಸಿಕೊಳ್ಳುವದೇ ದೈನಂದಿನ ಸಮಸ್ಯೆಯಾಗಿರುತ್ತದೆ. ಹೊಟ್ಟೆಪಾಡಿಗಾಗಿ ಕೆಲವರು ಸುಳ್ಳು ಹೇಳುವುದು ಸಹಜವಾಗಿದೆ. ದಾಸಿಮಯ್ಯನವರು ಅಂಥ ನಿರ್ಗತಿಕರ ಪರವಾಗಿ ನಿಂತು ದೇವರ ಜೊತೆ ವಾಗ್ವಾದಕ್ಕೆ ಇಳಿಯುತ್ತಾರೆ. ಆ ಕಡು ಬಡವರ ಧ್ವನಿಯಾಗಿ ದೇವರನ್ನು ಪ್ರಶ್ನಿಸುತ್ತಾರೆ. ನಾನು ಹಸಿಯುವ ದೇಹವುಳ್ಳವನೆಂದು ಗದರಿಸಿ ಮಾತನಾಡಬೇಡ ಎಂದು ದೇವರಿಗೆ ಎಚ್ಚರಿಕೆ ನೀಡುತ್ತಾರೆ. ನೀನು ನನ್ನ ಹಾಗೆ ಒಂದು ಸಲವಾದರೂ ದೇಹವನ್ನು ಧರಿಸಿ ನೋಡು. ಆಗ ನಿನಗೆ ಹಸಿವಿನ ಸಮಸ್ಯೆಯ ಅರಿವಾಗುತ್ತದೆ. ನೀನು

ಕೂಡ ಸುಳ್ಳು ಹೇಳುವ ಪ್ರಸಂಗ ಬರುತ್ತದೆ. ಆಗ ದೇಹ ಹೊಂದಿದವರ ಸಮಸ್ಯೆಗಳ ಅರಿವಾಗುತ್ತದೆ ಎಂದು ದಾಸಿಮಯ್ಯನವರು ದೇವರಿಗೆ ಸವಾಲು ಹಾಕುತ್ತಾರೆ. ಹೀಗೆ ಅವರು ಬಡವರ ಪಕ್ಷ ವಹಿಸುತ್ತಾರೆ. ಬಡವರ ಅಸಹಾಯಕ ಬದುಕಿನ ಬಗ್ಗೆ ಅವರು ಸ್ಪಂದಿಸಿದ ಕ್ರಮ ಹೃದಯಸ್ಪರ್ಶಿಯಾಗಿದೆ.

ಕಾಶ್ಮೀರದಲ್ಲಿನ ಸವಾಲಾಕ್ಷದ ದೊರೆ ಮಹದೇವ ಭೂಪಾಲ, ಬಸವಣ್ಣನವರ ನವ ಸಮಾಜದ ಪರಿಕಲ್ಪನೆಗೆ ಮನಸೋತು, ಪತ್ನಿ ಗಂಗಾದೇವಿ (ಮಹಾದೇವಿ) ಜೊತೆ ಕಲ್ಯಾಣಕ್ಕೆ ಬಂದು ಕಟ್ಟಿಗೆ ಮಾರುವ ಕಾಯಕಕ್ಕೈಗೊಂಡ ಕಾರಣ ಮೋಳಿಗೆ ಮಾರಯ್ಯನೆಂದೆ ಪ್ರಸಿದ್ಧರಾದರು. ಅವರು ಕಾಯಕದಲ್ಲಿ ಅರಸೊತ್ತಿಗೆಗಿಂತ ಹೆಚ್ಚಿನ ಶಾಂತಿ ಸಮಾಧಾನಗಳನ್ನು ಹೊಂದಿದ್ದರು. ಅವರ ವಚನವೊಂದು ಮೋಳಿಗೆ ಮಾರಯ್ಯನವರ ಜೀವನ ದರ್ಶನಕ್ಕೆ ಸಾಕ್ಷಿಯಾಗಿದೆ.

***ಆನೆಕುದುರೆ ಭಂಡಾರವಿರ್ದಡೇನು?***

***ತಾನುಂಬುದು ಪಡಿಯಕ್ಕಿ, ಒಂದಾವಿನ ಹಾಲು, ಮಲಗುವುದರ್ಧಮಂಚ***

***ಈ ಹುರುಳಿಲ್ಲದ ಸಿರಿಯ ನೆಚ್ಚಿ ಕೆಡಬೇಡ ಮನುಜಾ***

***ಒಡಲು ಭೂಮಿಸಂಗ, ಒಡವೆ ತಾನೇನಪ್ಪುದೊ?***

***ಕೈವಿಡಿದ ಮಡದಿ ಪರರ ಸಂಗ, ಪ್ರಾಣ ವಾಯುವಿನಸಂಗ***

***ಸಾವಿಂಗೆ ಸಂಗಡವಾರೂ ಇಲ್ಲ ಕಾಣಾ, ನಿಃಕಳಂಕ ಮಲ್ಲಿಕಾರ್ಜುನಾ***

ಮನುಷ್ಯನ ಹತ್ತಿರ ಆನೆಗಳಿರಬಹುದು. ಕುದುರೆಗಳಿರಬಹುದು ಹಾಗೂ ಭಂಡಾರದ ತುಂಬೆಲ್ಲ ಧನ–ಕನಕ ತುಂಬಿರಬಹುದು ಆದರೆ ಇವು ಯಾವವೂ ಆತನ ಹಸಿವನ್ನು ನಿಗಿಸುವದಿಲ್ಲ. ಇಷ್ಟೆಲ್ಲ ಇದ್ದವನಿಗೆ ಊಟಕ್ಕೆ ಬಹಳವಾದರೆ ಅರ್ಧ ಸೇರು ಅಕ್ಕಿಬೇಕು ಮತ್ತು ಒಂದು ಹಸುವಿನ ಹಾಲು ಸಾಕು–ಮಲಗುವದಕ್ಕೆ ಅರ್ಧ ಮಂಚ ಸಾಕು. ಉಳಿದ ಸಂಪತ್ತೆಲ್ಲವೂ ಹೆಸರಿಗೆ ಮಾತ್ರ ಆದ್ದರಿಂದ ಅರ್ಥಹೀನ ಶ್ರೀಮಂತಿಕೆಯನ್ನು ನಂಬಿ ಹಾಳಾಗಬೇಡ ಎಂದು ಮೋಳಿಗೆ ಮಾರಯ್ಯನವರು ಮಾನವ ಜನಾಂಗಕ್ಕೆ ಸಾರಿದ್ದಾರೆ. ಈ ದೇಹ ಒಂದು ದಿನ ಮಣ್ಣು ಪಾಲಾಗುವದು, ಸಂಪತ್ತು ಯಾರದೋ ಪಾಲಾಗುವದು, ಹೆಂಡತಿ ಇನ್ನೊಬ್ಬರ ಪಾಲಾಗುವಳು ನಮ್ಮ ದೇಹದಲ್ಲಿರುವ ಪ್ರಾಣವಾಯು ಗಾಳಿಯ ಪಾಲಾಗುವದು. ಹೀಗೆಲ್ಲ ಇರುವಾಗ ಸತ್ತವನ ಜೊತೆ ಹೋಗುವವರು ಯಾರು ? ಸಾವಿಗೆ ಯಾರೂ ಜೊತೆಗಾರರಿರುವದಿಲ್ಲ ಎನ್ನುವ ಬದುಕಿನ ಕಟು ವಾಸ್ತವವನ್ನು ಈ ವಚನದಲ್ಲಿ ಮೋಳಿಗೆ ಮಾರಯ್ಯನವರು ತೆರೆದಿಡುರುತ್ತಾರೆ.

ಬಸವಣ್ಣನವರ ಪ್ರಸಿದ್ಧವಾದ ವಚನವೊಂದನ್ನು ಈ ಸಂದರ್ಭದಲ್ಲಿ ನೋಡಬಹುದಾಗಿದೆ.

***"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ!***

***ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ!***

***ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ!***

***ಇದೇ ಅಂತರಂಗ ಶುದ್ಧಿ! ಇದೇ ಬಹಿರಂಗ ಶುದ್ಧಿ!***

***ಇದೇ ನಮ್ಮ ಕೂಡಲ ಸಂಗಮ ದೇವನೊಲಿಸುವ ಪರಿ!'***

ಈ ವಚನದಲ್ಲಿ ಬಸವಣ್ಣನವರು ಏನೇನು ಮಾಡಬಾರದು ಎಂಬುದನ್ನು ಹೇಳುತ್ತಾರೆಯೇ ಹೊರತು ಏನು ಮಾಡಬೇಕು ಎಂಬುದನ್ನು ಹೇಳುವದಿಲ್ಲ. ಅಂತರಂಗ ಬಹಿರಂಗ ಈ ಎರಡೂ ಶುದ್ಧವಾಗಿರಬೇಕೆಂಬುದೇ ವೇದ ಆಗಮ, ಶಾಸ್ತ್ರ, ಪುರಾಣ ಮುಂತಾದ ಎಲ್ಲ ಧರ್ಮವಾಣಿಯ ಮರ್ಮ ಧ್ವನಿ. ಆದರೆ ಇದನ್ನು ನಿತ್ಯ ವ್ಯವಹಾರಕ್ಕೆ ಇಳಿಸುವ ವಿವರ ವಿವೇಚನಾ ಶಕ್ತಿಯಿಲ್ಲದ ಜನ ಅನೂಚಾನವಾಗಿ ಬಂದ ಕೇವಲ ಆಡಂಬರದ ಅರ್ಚನೆ ಪೂಜೆಗಳಲ್ಲಿ ತೊಡಗಿ ಕಾಯ ಕ್ಲೇಶಕ್ಕೂ ಜಪತಪಗಳಲ್ಲಿ ತೊಡಗಿ ಮನಃ ಕ್ಲೇಶಕ್ಕೂ ಈಡಾಗಿ, ಇದೇ ಅಂತರಂಗ–ಬಹಿರಂಗ ಶುದ್ಧಿಯೆಂದು ವ್ಯರ್ಥಶ್ರಮ ಪಡುವುದನ್ನು ಕಂಡು ಬಸವಣ್ಣನವರು

ಮಾನವನ ಗಮನವನ್ನು ಆದ್ಯಂತವಾಗಿ ಅವನ ನಿತ್ಯ ವ್ಯವಹಾರದತ್ತ ಸೆಳೆದು ಅಲ್ಲಿ ಆಯ ತಪ್ಪದಿರಲೆಂದು ಕರೆ ನೀಡಿದರು. ಕಳ್ಳತನ ಮಾಡಬಾರದು. ಕೊಲ್ಲಬಾರದು, ಸುಳ್ಳು ಹೇಳಬಾರದು, ಸಿಟ್ಟಿಗೆ ಬರಬಾರದು, ಅನ್ಯರಿಗೆ ಅಸಹ್ಯಪಡಬಾರದು, ಅಪಮಾನ ಮಾಡಬಾರದು, ಆತ್ಮಪ್ರಶಂಶೆ ಮಾಡಬಾರದು ಇವೆಲ್ಲವನ್ನು ಮಾಡದೆ ಇದ್ದರೆ ವಿಶ್ವಮಾನರಾಗುತ್ತಾರೆ. ಅವರೇ ದೇವರನ್ನು ಒಲಿಸಿಕೊಂಡವರು. ಮನದ ದೌರ್ಬಲ್ಯದಿಂದ ಮನುಷ್ಯ ಕೆಟ್ಟದ್ದನ್ನು ಮಾಡುತ್ತಾನೆ. ಕೆಟ್ಟದನ್ನು ಬಿಟ್ಟಾಗ ಒಳ್ಳೆಯವನಾಗುತ್ತಾನೆ. ಅದಕ್ಕೆ ಒಳ್ಳೆಯದನ್ನು ಮಾಡದಿದ್ದರೂ ಸರಿ ಕೆಟ್ಟದ್ದನ್ನು ಮಾಡಬಾರದೆಂದು ಹೇಳುತ್ತಾರೆ.

ಬಸವಣ್ಣನವರ ಇನ್ನೊಂದು ವಚನವನ್ನು ನೋಡಬಹುದು ನುಡಿಯ ಕುರಿತು ಹೀಗೆ ಹೇಳುತ್ತಾರೆ.

***ನುಡಿದರೆ ಮುತ್ತಿನ ಹಾರದಂತಿರಬೇಕು!***
***ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು!***
***ನುಡಿದರೆ ಸ್ಪಟಿಕೆಯ ಶಲಾಕೆಯಂತಿರಬೇಕು!***
***ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು!***
***ನುಡಿಯೊಳಗಾಗಿ ನಡೆಯದಿದ್ದರೆ***
***ಕೂಡಲ ಸಂಗಮದೇವನೆಂತೊಲಿವನಯ್ಯ?***

ಮುತ್ತಿನ ಹಾರ ಒಂದೇ ಸಮವಾಗಿ ಒಪ್ಪ ಓರಣವಾಗಿ ಒಂದರ ನಂತರ ಒಂದು ಕೂಡಿಕೊಂಡು ಸರವು ಒಂದೇ ತೆರನಾಗಿ ಸಮವಾಗಿ ಕಾಣುವದೋ ಹಾಗೆ ನಾವಾಡುವ ಪ್ರತಿಯೊಂದು ಮಾತು ಸಮಯ, ಸಂದರ್ಭ, ನಯವಾಗಿ ಇದ್ದು ನಮ್ಮ ಮಾತನ್ನು ಕೇಳುವರಸಿಕರು ಒಪ್ಪುವಂತಿರಬೇಕು. ನಮ್ಮ ಮಾತು ಮಾಣಿಕ್ಯದಂತೆ ನಮ್ಮ ಅಂತರಂಗದ ಅನುರಾಗದ ಮೆರಗನ್ನು ಹತ್ತಾರು ಕಡೆ ಎಸಳೆಸಳಾಗಿ ಹೊರ ಹೊಮ್ಮಿಸುವಂತಿರಬೇಕು. ನಮ್ಮ ಮಾತುಗಳು ಶ್ರದ್ಧೆ, ಸ್ಪಟಿಕದ ಶಲಾಕೆಯಂತೆ ಕೊಂಕಿಲ್ಲದೆ, ನೇರವಾಗಿ ಹೃದಯಸ್ಪರ್ಶಿಯಾಗಿರಬೇಕು. ನಾವು ಮಾತನಾಡಿದರೆ ದೇವರು ಸಹ ಮೆಚ್ಚಿ ತಲೆದೂಗುವಂತಿರಬೇಕು ಎಂದು ಬಸವಾದಿ ಪ್ರಮಥರು ಬಯಸಿದ್ದರು. ಮತ್ತು ಅವರ ವಚನಗಳೆಲ್ಲ ಇದೇ ತೆರವಾಗಿಯೇ ಇದ್ದವು ಎನ್ನುವ ಕಾರಣಕ್ಕೆ ವಚನಗಳಾಗಿ ಹೊರಹೊಮ್ಮಿ ಜನ ಮಾನಸದಲ್ಲಿ ನೆಲೆನಿಂತವು ಮತ್ತು ಇವತ್ತಿಗೂ ವಚನಗಳು ಜನಪ್ರಿಯತೆಯನ್ನು ಗಳಿಸಿಕೊಂಡಿವೆ. ಅವರ ಎಲ್ಲ ವಚನಗಳಲ್ಲಿ ಬದುಕಿನ ಆದರ್ಶ ಮೌಲ್ಯಗಳನ್ನು ಕಾಣಬಹುದು. ಯಾಕೆಂದರೆ ಅವರ ಬದುಕೆ ಹಾಗಿತ್ತು. ನುಡಿದಂತೆ ನಡೆದರು, ನಡೆದಂತೆ ನುಡಿದರು, ಹಾಗಾಗಿಯೇ ಈ ಸಾಹಿತ್ಯವನ್ನು ನಡೆ ನುಡಿಸಾಹಿತ್ಯವೆಂದೆ ಹೆಸರಾಗಿದೆ. ಹೀಗಾಗಿ ಶರಣರ ಎಲ್ಲ ವಚನಗಳು ಸಾರ್ವಕಾಲಿಕ ಆದರ್ಶಗಳಾಗಿವೆ.

**ಪರಾಮರ್ಶನ/ಆಕರ ಗ್ರಂಥಗಳು**


- ಬಸವರಾಜು ಎಲ್. (1984). *ಬಸವ ವಚನಾಮೃತ.* (ಐದನೇ ಮುದ್ರಣ). ಬಸವ ಸಮಿತಿ.
- ಕಲಬುರ್ಗಿ. ಎಂ. ಎಂ. ಬಸವಸ್ತೋತ್ರದ ವಚನಗಳು. ಕನ್ನಡ ಅಧ್ಯಯನ ಪೀಟ, ಕರ್ನಾಟಕ ವಿಶ್ವವಿದ್ಯಾಲಯ.
- ಮೊಗಸಾಲೆ ನಾ. (2016). *ಅರಿವಿನೊಡನೆ ಅನುಸಂಧಾನ.* ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು.
- ರಂಜಾನ್ ದರ್ಗಾ. (2018). ವಚನ ಬೆಳಕು: ನೂರೊಂದು ವಚನ–ವಿಶ್ಲೇಷಣೆ. ಲಡಾಯಿ ಪ್ರಕಾಶನ.
- ವೀರಣ್ಣ ರಾಜೂರ. (2018). *ಡಾ. ಎಂ.ಎಂ.ಕಲಬುರ್ಗಿ ಸಮಗ್ರ ಸಾಹಿತ್ಯ : ವಚನ ಸಾಹಿತ್ಯ ಭಾಗ–1.* ವಚನಪಿತಾಮಹ ಡಾ.ಫ.ಗು.ಹಳಕಟ್ಟಿ ಸಂಶೋಧನ ಕೇಂದ್ರ.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.46-56
Bi-Monthly, Peer-Reviewed, Open Access, Indexed Journal

I S S N: 2583-3510

SIRDF JOURNALS
editor@srujani.in
www.srujani.in

# ಹೊನ್ನಶೆಟ್ಟಿಹಳ್ಳಿ ಗಿರಿರಾಜ್ ಅವರ 'ಹಿರಿಹಳ್ಳಿಯ ಹತ್ತು ಸಮಸ್ತರು! : ಒಂದು ಅಧ್ಯಯನ

**ಲೋಕಾಂಬಿಕಾ**

ಮುಖ್ಯಸ್ಥರು ಹಾಗೂ ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಅಥಣಿ ತಾಲೂಕು, ಬೆಳಗಾವಿ ಜಿಲ್ಲೆ.

**Abstract:**

*ನಾಡಿನ ಜನಪ್ರಿಯ ಬರಹಗಾರರಾದ ಶ್ರೀಯುತ 'ಹೊನ್ನಶೆಟ್ಟಿಹಳ್ಳಿ ಗಿರಿರಾಜ್' ಅವರು ಅಸಾಮಾನ್ಯ ಶಿಕ್ಷಕರು, ಹಿರಿಯ ಪ್ರಾಧ್ಯಾಪಕರು, ಸಾಹಿತ್ಯ ಪರಿಚಾರಿಕರೂ, ಪುಸ್ತಕ ಪ್ರಿಯರೂ, ಸಾಮಾಜಿಕ ಕಾರ್ಯಕರ್ತರೂ, ವಿದ್ಯಾರ್ಥಿಗಳ ನೆಚ್ಚಿನ ಗುರುಗಳೂ ಆದ ಇವರು ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕು ಹೊನ್ನಶೆಟ್ಟಿಹಳ್ಳಿ ಗ್ರಾಮದವರು. ಬಯಲು ಸೀಮೆಯ ಸಾಹಿತ್ಯಿಕ ವಾತಾವರಣದಲ್ಲಿ ಬೆಳೆದ ಇವರು ನಾಲ್ಕು ದಶಕಗಳ ಕಾಲ ಶಿಕ್ಷಣ ಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರಿಗೆ ಪತ್ರಿಕೋದ್ಯಮ, ಕಲೆ, ಸಮುದಾಯ ಚಟುವಟಿಕೆಗಳಲ್ಲಿ ಅಪಾರ ಆಸಕ್ತಿ. ಸುದೀರ್ಘ ಬೋಧನಾನುಭವ ಹೊಂದಿರುವ ಇವರು ಮೊದಲಿಗೆ ಪತ್ರಕರ್ತರಾಗಿ ಅನೇಕ ಅಂಕಣ ಬರಹಗಳನ್ನು ಬರೆದಿದ್ದಾರೆ. ಪ್ರಸ್ತುತ ಲೇಖನದಲ್ಲಿ ಹಿರಿಹಳ್ಳಿಯ ಹತ್ತು ಸಮಸ್ತರು! ಎಂಬ ಗ್ರಂಥವನ್ನು ಕುರಿತು ಅಧ್ಯಯನ ಮಾಡಲಾಗಿದೆ.*

**Keywords:** *ಕನ್ನಡ ಸಾಹಿತ್ಯ, ಹಿರಿಹಳ್ಳಿಯ ಹತ್ತು ಸಮಸ್ತರು!, ಹೊನ್ನಶೆಟ್ಟಿಹಳ್ಳಿ ಗಿರಿರಾಜ್, ಗ್ರಾಮಾಧ್ಯಯನ.*

## ಪೀಠಿಕೆ

ಬರೆಯುವ ಹವ್ಯಾಸವಿರುವ ಇವರ ಸ್ಫುಟವಾದ ಬರವಣಿಗೆಯ ಶೈಲಿ ನಮ್ಮೆಲ್ಲರ ಬುದ್ಧಿಯನ್ನಷ್ಟೇ ಅಲ್ಲದೇ ಹೃದಯವನ್ನು ಮುಟ್ಟುತ್ತದೆ. ಅಲ್ಲದೇ ಇವರೊಬ್ಬ ಜನಪದ ತಜ್ಞರೂ ಕೂಡ. ಸಂಗ್ರಹ ಸಂಪಾದನೆ ಇದರಲ್ಲೂ ಕೂಡ ಸಿದ್ಧಹಸ್ತರು. ಬಿಚ್ಚು ನಡೆ-ನುಡಿಯ ಸ್ನೇಹಪ್ರಿಯ ಮತ್ತು ಅಭಿಮಾನ ಶ್ರೀಮಂತಿಕೆಯನ್ನು ಬಾಲ್ಯದಿಂದಲೇ ಮೈಗೂಡಿಸಿಕೊಂಡು ಬಂದ ಇವರ 'ನಿಸರ್ಗ' ಕಥಾ ಸಂಕಲನ ಪ್ರಕಟವಾದಾಗ ಕಥೆಗಾರರಿಗೆ ಹದಿನೆಂಟರ ಹರೆಯ. ಹಲವು ಹತ್ತು ಗೀಳುಗಳ ಗಿರಿರಾಜ್ ನೂರಾರು ಕಥೆ-ಕವನಗಳನ್ನೂ, ಹಲವಾರು ಕಾದಂಬರಿ, ನಾಟಕಗಳನ್ನು, ವ್ಯಕ್ತಿಚಿತ್ರಣಗಳನ್ನು (ಜೀವನ ಚರಿತ್ರೆ) ರಚಿಸಿರುತ್ತಾರೆ. ಇವರ ಬಹುಪಾಲು ಕತೆಗಳು ನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ.

ಪ್ರಸ್ತುತ ಇವರು ಅಧ್ಯಯನ ಮಾಡಿ ಪ್ರಕಟಿಸಿರುವ "ಹಿರಿಹಳ್ಳಿಯ ಹತ್ತು ಸಮಸ್ತರು!" ಎಂಬ ಪುಸ್ತಕ ಗ್ರಾಮಾಧ್ಯಯನವನ್ನು ಒಳಗೊಂಡಿದ್ದರೂ ಲೇಖಕರ ಅನುಭವದ ವಾಸ್ತವ ಸಂಗತಿಗಳು ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ಈ ಕೃತಿ ರಚನೆಯಾಗಿ ಆರು ವರ್ಷದ ನಂತರ ಅಂದರೆ 08-08-1987ರಲ್ಲಿ ಶ್ರೀ ಚೆನ್ನಲಿಂಗೇಶ್ವರ ಪ್ರಕಾಶನ, ಜೋಡಿಕಟ್ಟೆ ಮೂಲಕ ಪ್ರಕಟವಾಗಿ ಓದುಗರ ಕೈ ಸೇರಿತು. ಹಿರಿಹಳ್ಳಿಯ ಹತ್ತು ಸಮಸ್ತರು ಒಂದು ಕುತೂಹಲದ ಪುಸ್ತಕ. ಈ

**Please cite this article as:** ಲೋಕಾಂಬಿಕಾ. (2024). ಹೊನ್ನಶೆಟ್ಟಿಹಳ್ಳಿ ಗಿರಿರಾಜ್ ಅವರ 'ಹಿರಿಹಳ್ಳಿಯ ಹತ್ತು ಸಮಸ್ತರು! : ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್*, 2(6), 46–56.

ಕುತೂಹಲವೇ ಈ ಕೃತಿ ಸೃಷ್ಟಿಯ ಮುಖ್ಯ ಜೀವಾಳವಾಗಿದೆ. ಅಲ್ಲದೇ ಶೀರ್ಷಿಕೆಯ ಕೊನೆಯಲ್ಲಿ ಹಾಕಿರುವ ಆಶ್ಚರ್ಯಸೂಚಕ ಚಿಹ್ನೆ ಓದುಗರಿಗೂ ಕುತೂಹಲವನ್ನು ಮೂಢಿಸಿ ಓದುವಿಕೆಗೆ ಆಸಕ್ತಿ ಮೂಡಿಸುತ್ತದೆ.

ರಾಷ್ಟ್ರೀಯ ಹೆದ್ದಾರಿ 48ರಲ್ಲಿ ಚನ್ನರಾಯಪಟ್ಟಣ ಮತ್ತು ಹಾಸನ ರಸ್ತೆಯಲ್ಲಿ ಉದಯಪುರ ಮತ್ತು ಶಾಂತಿಗ್ರಾಮದ ನಡುವೆ ಇರುವ 'ಜೋಡಿಕಟ್ಟೆ ಹಿರಿಹಳ್ಳಿ' ಒಂದು ಕುಗ್ರಾಮ. ಈ ಹಳ್ಳಿಗೆ ಇತರ ಹಳ್ಳಿಗಳ ಇತಿಹಾಸಕ್ಕಿಂತ ಇದರದೇ ಆದ ವೈಶಿಷ್ಟ್ಯ ಉಂಟು. ಏಕೆಂದರೆ ಕೇಂದ್ರ–ರಾಜ್ಯ ಮಂತ್ರಿಗಳು, ಮುಖ್ಯಮಂತ್ರಿಗಳು, ರೈತನಾಯಕರುಗಳು, ವರಿಷ್ಠಾಧಿಕಾರಿಗಳ ಸಂಪರ್ಕವನ್ನು ಈ ಹಳ್ಳಿ ಪಡೆದುಕೊಂಡು ಇತರ ಹಳ್ಳಿಗಳಿಗಿಂತ ಭಿನ್ನವಾಗಿದೆ. ಇಲ್ಲಿನ ಘಟನೆಗಳು ಮುಂದೆ ತಾನು ಪಡೆದುಕೊಳ್ಳುವ ತಿರುವುಗಳಿಂದ ಸಾಕಷ್ಟು ಕುತೂಹಲವನ್ನು ಮೂಡಿಸುತ್ತಾ ಕೆಲವೊಂದು ಐತಿಹಾಸಿಕ ಸಂಗತಿಗಳನ್ನು ದಾಖಲಿಸುತ್ತಾ ಸಾಗುತ್ತದೆ.

ಹಿರಿಹಳ್ಳಿ ಲೇಖಕರನ್ನು ತನ್ನತ್ತ ಸೆಳೆದುಕೊಂಡುದೇ ಆ ಊರಿನಲ್ಲಿ ಒಂದು ವಿಚಿತ್ರ ಘಟನೆ. ತಮ್ಮ ಸ್ಮೃತಿ ಪಟಲದಲ್ಲಿ ಅಚ್ಚಳಿಯದೆ ಇದ್ದ ಈ ಹಿರಿಹಳ್ಳಿಯಲ್ಲಿ ನಡೆದ ಒಂದು ವಿಚಿತ್ರ ಘಟನೆಯ ಮೂಲಕವೇ ಲೇಖನ ಪ್ರವೇಶವಾಗುತ್ತದೆ. ಈ ಲೇಖನ ಮುಖ್ಯವಾಗಿ ರೈತಾಪಿ ಜನರ ಮನಸ್ಥಿತಿ, ರೈತರ ಸಮಾವೇಶ, ಉತ್ತಮ ನಾಯಕತ್ವ, ಶಿಕ್ಷಣದ ಮಹತ್ವ ಮತ್ತು ರಾಜಕೀಯ ಚಿತ್ರಣ ಹೀಗೆ ಇನ್ನು ಹಲವಾರು ವಿಚಾರಗಳನ್ನೊಳಗೊಂಡಿದೆ.

ಪುಸ್ತಕದಲ್ಲಿ ಹತ್ತು ಸಮಸ್ತರಿದ್ದರೂ ಅವರ ಬದುಕಿಗೆಲ್ಲಾ ಪ್ರೇರಣೆಯಾಗಿರುವವರು ಮತ್ತು ಅವರ ಅಸ್ತಿತ್ವವನ್ನು ಉಳಿಸಿರುವವರು ಒಬ್ಬರೇ, ಅವರೇ ಕಥೆಯ ಕೇಂದ್ರ ವ್ಯಕ್ತಿ 'ಶ್ರೀ ಸಿ ಚನ್ನೇಗೌಡರು'. ಇವರು ಎಷ್ಟು ಸಂಸ್ಥೆಗಳನ್ನು ತೆರೆದಿದ್ದಾರೆ, ಎಷ್ಟು ಸಂಸ್ಥೆಗಳಿಗೆ ಅಧ್ಯಕ್ಷರು, ಸದಸ್ಯರು ಆಗಿದ್ದಾರೆ ಎನ್ನುವುದಕ್ಕಿಂತ ಮುಖ್ಯವಾಗಿ ಇವರು ಹಳ್ಳಿಯ ಸಮಸ್ತ ಅಭಿವೃದ್ಧಿಗಾಗಿ ಎಂಥ ದಿಟ್ಟ, ಅಸಾಧ್ಯ ಹೆಜ್ಜೆಗಳನ್ನು ಇಡುತ್ತಾರೆ ಅಲ್ಲದೇ ಇವರು ಯಾವುದೇ ಪ್ರಚಾರಕ್ಕಾಗಲಿ, ಪ್ರಶಸ್ತಿಗಾಗಲಿ ಹಂಬಲಿಸದೇ ತನ್ನ ಭಾವನೆಗಳಿಗೆ ಮತ್ತು ತತ್ವಗಳಿಗೆ ಜೀವ ಕೊಡಲು ಪ್ರಯತ್ನಿಸುತ್ತಾರೆ ಎಂಬುದು ಮುಖ್ಯವಾದ ಸಂಗತಿ. ಚನ್ನೇಗೌಡರು ವಿದ್ಯಾವಂತರು ಮತ್ತು ಪಿ ಡಬ್ಲ್ಯೂ ಇಲಾಖೆಯಲ್ಲಿ ಇಂಜಿನಿಯರ್ ಆಗಿದ್ದವರು. ಎರಡು ಹೊತ್ತು ಊಟಕ್ಕೆ ತೊಂದರೆಯಾಗಿ ಕೆಲಸ ಬಿಟ್ಟು ರೈತಾಪಿಯಾಗುತ್ತಾನೆ. ಈ ಲೇಖನ ಅದರ ಹಿನ್ನಲೆ, ರೈತಾಪಿಯಾದ ಆನಂತರದ ಸಿ ಚನ್ನೇಗೌಡರ ಬದುಕು ಮತ್ತು ಹೋರಾಟವನ್ನು ಈ ಲೇಖನ ಚಿತ್ರಿಸುತ್ತಾ ಹೋಗಿರುವುದನ್ನು ಕಾಣಬಹುದು. ಇಡೀ ಕಥೆ ನಿರೂಪಕನ ವಿವರಣೆ ಮತ್ತು ಕೇಂದ್ರಪಾತ್ರದೊಂದಿಗಿನ ಆತನ ಸಂವಾದದ ರೂಪದಲ್ಲಿ ಪ್ರಕಟಗೊಳ್ಳುತ್ತದೆ. ಈ ಲೇಖನ ಸಾಮಾನ್ಯ ಲೇಖನಗಳಿಗಿಂತ ಭಿನ್ನವಾಗಿದ್ದು ಅವರ ಇದೂವರೆಗಿನ ಲೇಖನಗಳಿಗಿಂತ ಭಿನ್ನವಾಗಿ ಕಾಣಿಸುತ್ತದೆ. ಗೊಂದಲ, ಹತಾಶೆ, ದುಷ್ಟತನಗಳ ಮಧ್ಯೆ ತಾನು ಮಿತ್ರ ಪಕ್ಷವಾಗಬೇಕು ಎಂಬ ಚನ್ನೇಗೌಡರ ಬಯಕೆ ಬೆಲೆಯುಳ್ಳದ್ದು. ಹೀಗಾಗಿ ಹಲವು ದ್ವಂದ್ವ ಮತ್ತು ಹತಾಶೆಗಳ ಮಧ್ಯೆ ಮತ್ತೆ ಆಸೆಯನ್ನು ಚಿಗುರಿಸುವ ಹೊಸತನವನ್ನು ಬಿಂಬಿಸುತ್ತಾ ನಡೆದಿದ್ದಾರೆ.

ಮೂರ್ನಾಲ್ಕು ವರ್ಷಗಳಿಂದ ಹಾಸನ ಮಾರ್ಗವಾಗಿ ಲೇಖಕರು ಹೋಗುವಾಗ ಕಾಣುವ ಈ ಹಳ್ಳಿಯ ಮುಂಭಾಗದಲ್ಲಿರುವ ಅರ್ಧ ಕಟ್ಟಿದ ಸುಂದರ ದೇವಸ್ಥಾನ ಮತ್ತು ಅದರ ಮುಂದೆ ಯಥಾಸ್ಥಿತಿಯಲ್ಲಿ ನಿಂತಿದ್ದ ಒಚಿದು ಒಂದು ಫಲಕದಲ್ಲಿ ಹೀಗೆ ಬರೆದಿತ್ತು.

**ಫಲಕ**: "ಬಡತನದ ಮೇಲೆ ಯುದ್ಧ"

**ಶತೃ ಪಕ್ಷ**: "ಸೋಮಾರಿತನ ಮತ್ತು ಅಜ್ಞಾನ, ಅಸೂಯೆ, ದುರಾಸೆ"

**ಮಿತ್ರ ಪಕ್ಷ:** "ವ್ಯಕ್ತಿತ್ವವುಳ್ಳ ಆಸೆ"

ಇದನ್ನು ನೋಡಿದ ಲೇಖಕರಿಗೆ ಆಶ್ಚರ್ಯ ಮತ್ತು ಚಿಂತನೆಗೊಳಪಡಿಸಿತ್ತು. ಈ ಫಲಕದ ಮೇಲಿನ ಹೇಳಿಕೆ ನಮಗೂ ಅವರಷ್ಟೇ ಆಶ್ಚರ್ಯವನ್ನುಂಟು ಮಾಡುತ್ತದೆ ಎಂಬುವುದನ್ನು ಗಮನಿಸಬಹುದು. ಈ ಲೇಖನ ಒಂದು ಹಳ್ಳಿ ಜೀವನ ಮತ್ತು ರೈತರ ಬದುಕು ನಿಂತ ಸರೋವರದ ಜೀವನವಾಗಿದ್ದು ಅದು ಹೊಸ ಚಿಂತನ ಮತ್ತು ಹೋರಾಟಕ್ಕೆ ತೆರೆದುಕೊಳ್ಳುವ ವಿಶಿಷ್ಟ ಬಗೆಯನ್ನು ಮತ್ತು ಎಡಬಿಡದೆ ಕಾಡಿರುವ ಮತ್ತು ಇಂದಿಗೂ ಕಾಡುತ್ತಿರುವ 'ಬಡತನ' ಎಂಬ ಪೆಡಂಭೂತವನ್ನು ಹಿನ್ನಲೆಯಾಗಿ ಇಟ್ಟುಕೊಂಡು ಬರೆದ ಬೌದ್ಧಿಕ ಕ್ಷೇತ್ರದ ಲೇಖನ ಎಂಬ ಸುಳುಹುಗಳು ದೊರೆಯುತ್ತದೆ ಅಲ್ಲದೇ ರೈತಾಪಿ ಜನರ ಬದುಕಿನ ಬಗೆಗಿನ ಜನರ ನಿಲುವುಗಳನ್ನು ತೆರೆದಿಡುತ್ತಾ ಸಾಗುತ್ತದೆ.

ಹೇಮವಾಣಿ ವಾರಪತ್ರಿಕೆಯಲ್ಲಿ ಸಂಪಾದಕರಾಗಿದ್ದ ಲೇಖಕರಿಗೆ ಥೇರ್ಮನ್ ಗಳಿಂದಲೇ ಈ ದೇಶ ಹಾಳಾಗಿದೆ ಎಂಬ ದೃಢ ನಿಲುವಿನಲ್ಲಿದ್ದರು ಆದಕಾರಣ ಸಹಜವಾಗಿಯೇ ಹಿರಿಹಳ್ಳಿಯ ಊರ ಥೇರ್ಮನ್ ಅವರ ಬಗ್ಗೆಯೂ ಉದಾಸೀನ ಮತ್ತು ನಿರಾಶಾಭಾವ ತಳೆದಿದ್ದ ಸೂಕ್ಷತೆಗಳು ಲೇಖನದ ಪ್ರಾರಂಭದಲ್ಲಿಯೇ ತಿಳಿಯುತ್ತದೆ. ಆದರೂ ವ್ಯಕ್ತಿತ್ವದಲ್ಲಿ ಇತರರಿಗಿಂತ ಭಿನ್ನವಾಗಿದ್ದ ಹಿರಿಹಳ್ಳಿಯ ಥೇರ್ಮನ್ ಎಂಬುದನ್ನರಿತು ಅವರನ್ನು ಭೇಟಿಯಾಗಬೇಕೆಂಬ ಅವರ ಹಂಬಲ, ಕುತೂಹಲ ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಹೋಗುತ್ತದೆ. ಈ ರೀತಿಯ ಮನೋಭಾವ ಓದುಗರಾದ ನಮಗೂ ಉಂಟಾಗುತ್ತ ಲೇಖನ ಆಸಕ್ತಿಯನ್ನು ಮತ್ತು ಕುತೂಹಲವನ್ನು ಹೆಚ್ಚಿಸುತ್ತಾ ಹೋಗುತ್ತದೆ. ಇದರ ಮಧ್ಯೆ ರೈತರ ಬಗ್ಗೆ ಪ್ರಾಮಾಣಿಕ ಕಾಳಜಿ ಹೊಂದಿದ್ದ ಮತ್ತು ಪತ್ರಿಕಾ ಸ್ವಾತಂತ್ರ್ಯದ ಬಗ್ಗೆ ಬಹಳ ಗೌರವಾದರವನ್ನು ಹೊಂದಿದ್ದ ಮತ್ತು ತಮ್ಮ ಕಾರ್ಯಗತಿಯ ಬಗೆಯೇ ಪತ್ರಿಕೆಗಳಲ್ಲಿ ಕಟು ವಿಮರ್ಶೆ ನಡೆದಿದಾಗಲೂ ಹಸನ್ಮುಖದಿಂದ ಎಲ್ಲವನ್ನು ಸ್ವೀಕರಿಸುತ್ತಿದ್ದ ನವಿಲೆ ತಿಮ್ಲಾಪುರದ ಶ್ರೀ ಬಸವರಾಜು ಎಂದರೆ ಲೇಖಕರಿಗೆ ಎಲ್ಲಿಲ್ಲದ ಅಭಿಮಾನವನ್ನು ಹೊಂದಿದ್ದ ವಿಚಾರವನ್ನು ವ್ಯಕ್ತಪಡಿಸಿದ್ದಾರೆ.

ಬಡಬೋರೆಗೌಡನ ಹೆಸರಿನಲ್ಲಿ ಬೇಳೆ ಬೇಯಿಸಿಕೊಳ್ಳಲು ಹವಣಿಸುವುದೇ ಈ ರೈತ ಸಮಾವೇಶ ಎಂದು ಸಮಾವೇಶದ ಬಗ್ಗೆ ಉದಾಸೀನಭಾವದಿಂದಿದ್ದ ಲೇಖಕರಾದ ಗಿರಿರಾಜ್ ಅವರು ಒಮ್ಮೆ ಅನಾಸಕ್ತಿಯಿಂದಲೇ ಸಮಾವೇಶದಲ್ಲಿ ಪತ್ರಕರ್ತರಾಗಿ ಪಾಲ್ಗೊಂಡಾಗ ಈ ಲೇಖನದ ಕೇಂದ್ರ ವ್ಯಕ್ತಿ 'ಶ್ರೀ ಚನ್ನೇಗೌಡ'ರ ಮುಖಾಮುಖಿ ಆಗುತ್ತದೆ. ಚನ್ನೇಗೌಡರ ನಿರರ್ಗಳ ಭಾಷಣ ಇವರನ್ನು ಆಶ್ಚರ್ಯಕ್ಕೆ ಒಳಪಡಿಸಿದಲ್ಲದೇ, ಒಂದು ಪ್ರಶ್ನೆಯೂ ಕೂಡ ಅವರನ್ನು ಗಾಢವಾಗಿ ಕಾಡತೊಡಗಿತು. ಪರಿಣಾಮವಾಗಿ ಅವರೊಂದಿಗೆ ಕುಳಿತು ಚರ್ಚಿಸುವ ಬಯಕೆ ಉಂಟಾಗುತ್ತದೆ. ಆದರೆ ಪತ್ರಿಕಾಲಯದ ಕೆಲಸ, ಸ್ವಂತ ಬೇಸಾಯ, ಕಥೆ, ಕಾದಂಬರಿಗಳ ಮಧ್ಯೆ ಇವರನ್ನು ಭೇಟಿಯಾಗಲು ಸಾಧ್ಯವಾಗಲೆ ಇಲ್ಲ. ಮತ್ತೊಮ್ಮೆ ಸಿಕ್ಕೆ ಸಿಗುತ್ತಾರೆ ಎಂಬ ಭರವಸೆಯಲ್ಲಿಯೇ ನಾಲ್ಕೈದು ತಿಂಗಳು ಕಳೆದುಹೋಗುತ್ತದೆ.

ಒಮ್ಮೆ ಚನ್ನರಾಯಪಟ್ಟಣದಲ್ಲಿ ಜರುಗಿದ ರೈತ ಸಮಾವೇಶದಲ್ಲಿನ ಚನ್ನೇಗೌಡರ ಭಾವಾವೇಶದ ಭಾಷಣದಲ್ಲಿ ರೈತಾಪಿ ಜನ ಸುಖವಾಗಿರುವವರು ಎಂದು ತಿಳಿದಿದ್ದ ಚನ್ನೇಗೌಡರ ನಿಲುವು, ಅನುಭವದಿಂದ ರೈತಾಪಿ ಜನ ಸುಖವಾಗಿಲ್ಲ ಎಂಬ ಸತ್ಯ ತಿಳಿದು, ರೈತ ಯಾಕೆ ಬಡವ ಆಗಿದ್ದಾನೆ? ಆತ ಬಡವ ಆಗಲ್ಲಿಲ್ಲ, ಅವನನ್ನು ಬಡವರನ್ನಾಗಿ ಮಾಡಿದರು. ಯಾರು? ಯಾಕೆ? ಎಂಬ ನೇರ ಪ್ರಶ್ನೆಯನ್ನು ಪ್ರತಿಯೊಬ್ಬರು ಸ್ವತಃ ಕೇಳಿಕೊಳ್ಳಬೇಕು ಎಂದು ಕೂಗಿ ಹೇಳಿದರು. ಇಂದಿಗು ಈ ಪ್ರಶ್ನೆಗಳು ಉತ್ತರ ಗೊತ್ತಿದ್ದರೂ ಉತ್ತರವಿಲ್ಲದೆ ಹಾಗೆಯೇ ಉಳಿದಿರುವುದು ವಿಷಾದನೀಯ. ರೈತರ ಪರಿಸ್ಥಿತಿಗೆ ಕಾರಣಕರ್ತರಾದವರನ್ನು ಕಟುವಾದ ಮಾತಿನಿಂದಲೇ

ಟೀಕಿಸುತ್ತಾ ರೈತರಲ್ಲೂ ಒಡಕು ಮೂಡಿಸುವ ಯತ್ನ ಮಾಡುತ್ತಿರುವುದರ ಬಗ್ಗೆ ಛೀಮಾರಿ ಹಾಕುತ್ತಾ ವಿಷಯವನ್ನು ಖರಾರು ವಾಖ್ಯಾಗಿ ಮತ್ತು ಜನರನ್ನು ಮೂಕವಿಸ್ಮಿತರನ್ನಾಗಿ ಮಾಡುವಷ್ಟು ಪ್ರಭಾವಶಾಲಿಯಾಗಿತ್ತು. ಇವರ ಮಾತುಗಳಲ್ಲಿ ಸುಳ್ಳಾಗಲಿ, ಮೋಸವಾಗಲಿ ಇರದೇ ವಾಸ್ತವ ಸಂಗತಿಗಳನ್ನು ಜನರ ಮುಂದೆ ತೆರೆದಿಡುವ ಪ್ರಯತ್ನ ಮಾಡುತ್ತಿದ್ದರು. ರೈತ ಸಂಘಕ್ಕೆ ಘನತೆ ಗೌರವ ಬರಬೇಕಾದರೆ ನಮ್ಮ ತತ್ವನಿಷ್ಟೆಯನ್ನು ತೋರಿಸಬೇಕು. ಅಲ್ಲದೇ ರೈತರು ಸಂಘಟಿತರಾಗಬೇಕೆಂಬ ವಿಚಾರವನ್ನು ಒತ್ತಿ ಹೇಳುತ್ತಿದ್ದರು. ನಾವೊಂದು ಕಿಚ್ಚಿನ ಸ್ವರೂಪವನ್ನು ನೀಡಿ ರಾಜಕೀಯ ಜ್ವಾಜ್ವಲ್ಯಮಾನ ತಾರೆಯಾಗಿ ಬೆಳಗಿರುವುದನ್ನು ಇತಿಹಾಸದ ಗತಕಾಲವಾಗಿಸದೇ, ಸಮಕಾಲೀನ ಪ್ರಾಜ್ಞತೆ ಮತ್ತು ಪ್ರಖರತೆಯನ್ನು ಗಂಡುಗಲಿಗಳಾದ ನಾವು ಹೊರ ಹೊಮ್ಮಿಸಬೇಕಾಗಿದೆ ಎಂದು ಗುಡುಗಿ ಹೇಳುತ್ತಿದ್ದರು. ಇವರ ಭಾಷಣವನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾ ಪತ್ರಕರ್ತನಿಗಿರಬೇಕಾದ ವಿಮರ್ಶಕ ಚಕ್ಷು ಲೇಖಕರಲ್ಲಿ ಇಲ್ಲದಂತಾಗಿ ಕುತೂಹಲದಿಂದ ಭಾವಪರವಶರಾಗಿ ಕೇಳುತ್ತಿದ್ದ ಸನ್ನಿವೇಶವೂ ಉಂಟು.

ಚನ್ನೇಗೌಡರ ಭಾವಾವೇಶಪೂರ್ಣ ಭಾಷಣ ಕೇಳಿ ಪ್ರಭಾವಿತರಾದ ಮೇಲೆ ಏಕೋ ಲೇಖಕರ ಮನಸ್ಸು ಸಂಪೂರ್ಣ ರೈತ ಸಂಘಟನೆಯತ್ತ ಹೊರಳಿತು. ಪರಿಣಾಮವಾಗಿ ಸಂಪಾದಕ ವೃತ್ತಿಯನ್ನು ಬಿಟ್ಟು ಚನ್ನೇಗೌಡರೊಡಗೂಡಿ ರೈತರ ಸಂಘ ಕಟ್ಟುವಲ್ಲಿ ಸಕ್ರಿಯವಾಗಿ ಭಾಗಿಯಾಗಿ, ಹಳ್ಳಿ ಹಳ್ಳಿಗಳನ್ನು ತಿರುಗತೊಡಗಿದಾಗ ಇದೂವರೆಗೆ ರೈತರ ಬಗ್ಗೆ ತಾವು ಇಟ್ಟುಕೊಂಡಿದ್ದ ಕಲ್ಪನೆಗಳೆಲ್ಲಾ ತಲೆಕೆಳಗಾಯಿತು. ಚನ್ನೇಗೌಡರ ವ್ಯಕ್ತಿತ್ವವೇ ಅಂತಹುದಿತ್ತು, ಶತೃಗಳು ಕೂಡ ಚನ್ನೇಗೌಡರೊಂದಿಗೆ ಐದು ನಿಮಿಷ ಕುಳಿತು ಮಾತನಾಡಿದರೆ ಸಾಕು ಅವರೂ ಕೂಡ ಚನ್ನೇಗೌಡರ ದಾರಿಯಲ್ಲಿ ಸಾಗುವಂತಹ ಘನ ವ್ಯಕ್ತಿತ್ವವನ್ನು ಹೊಂದುತ್ತಿದ್ದರು. ಚನ್ನೇಗೌಡರಿಗೆ ಜನರ ಮನಸ್ಸಿನಲ್ಲಿ ರೈತರ ಬಗೆಗಿನ ಅಭಿಪ್ರಾಯಗಳು ಬೇಸರವನ್ನುಂಟು ಮಾಡುತ್ತಿದ್ದರೆ ಇನ್ನೊಂದು ಕಡೆ ರೈತರಿಗಾಗಿ ಮತ್ತು ರೈತರ ಶ್ರೇಯೋಭಿವೃದ್ದಿಗಾಗಿ ಕಟ್ಟಿದ ರೈತ ಸಂಘದ ಬಗ್ಗೆ ರೈತರ ರೀತಿ ಮತ್ತು ಧೋರಣೆಗಳನ್ನು ಕಂಡು ಲೇಖಕರಿಗೆ ಬೇಸರವನ್ನುಂಟು ಮಾಡುತ್ತಿದುದ್ದನ್ನು ಕಾಣಬಹುದು.

1977ರ ಲೋಕಸಭೆ ಚುನಾವಣೆ ಮತ್ತು 1978ರ ವಿಧಾನಸಭೆ ಚುನಾವಣೆ ಸಂದರ್ಭದಲ್ಲಿ ಲೇಖಕರು ಕಾರ್ಯಕರ್ತರಾಗಿ ತಾವು ಓಟು ಕೇಳಲು ಹೋದಾಗ ಜನರ ವಿಚಿತ್ರ ವರ್ತನೆ, ಬೇಡಿಕೆಗಳನ್ನು ಕೇಳಿಸಿಕೊಂಡು ನೊಂದು "ಅಯ್ಯೋ ಭಾರತಮಾತೆ? ಗಾಂಧಿತಾತ? ನಿನ್ನ ದೇಶ ಜನ ಎಂದು ನಿಟ್ಟುಸಿರನ್ನು ಬಿಟ್ಟದ್ದನ್ನು ಲೇಖಕರು ರೈತ ಸಂಘಟನೆಯ ಸಂದರ್ಭದಲ್ಲಿ ಜನ ಕೇಳುತ್ತಿದ್ದ ಪ್ರಶ್ನೆಗಳನ್ನು ಕೇಳಿದಾಗ ವಿಚಿತ್ರವಾಗಿ ಮತ್ತು ವಿನೋದವಾಗಿ ಕಂಡವು. ಕುತೂಹಲದಿಂದ ಜನ ಇನ್ನೂ ಅದೇ ಮನಸ್ಥಿತಿಯಲ್ಲಿವುದನ್ನು ಕಂಡು ಆಶ್ಚರ್ಯವಾಗಿ ಹಳ್ಳಿಗರ ನೈತಿಕ ಮಟ್ಟ ಯಾವ ರಸಾತಳ ತಲುಪಿದೆ ಅನ್ನುವುದರ ಅರಿವಾಯಿತು. ಇಂಥಾ ಜನರಿಗೆ ತ್ಯಾಗ, ಬಲಿದಾನ, ತತ್ವನಿಷ್ಟೆಯನ್ನು ಬೋಧಿಸುವುದು ನಾಚಿಕೆಗೇಡಲ್ಲವೇ? ಎಂಬ ತಾತ್ಸಾರದ ನುಡಿಗೆ ಚನ್ನೇಗೌಡರು ಸ್ವಾತಂತ್ರ್ಯ ತಂದ ಗಾಂಧಿ, ಎರಡನೇ ಸ್ವಾತಂತ್ರ್ಯ ತಂದುಕೊಟ್ಟ ಜಯಪ್ರಕಾಶ್, ಲೋಹಿಯ ಮತ್ತು ಬರ್ಟಂಡ್ ರೆಸೆಲ್ ರ ನಾಯಕತ್ವವನ್ನು ಉದಾಹರಣೆಯನ್ನು ಕೊಟ್ಟು ನಾವು ಪ್ರಯತ್ನ ಪಡೋಣ, ಅಂತೂ ನಮ್ಮ ಛಲ ಒಂದು ದಿನ ಫಲ ನೀಡುತ್ತೇ ಎಂದು ಅದಕ್ಕೆ ಪ್ರಯತ್ನ ಮತ್ತು ನಂಬಿಕೆ ಇರಬೇಕೆಂದು ಭರವಸೆಯ ಮಾತು ಅವರ ದೃಢ ನಿಲುವನ್ನು ತೋರಿಸುತ್ತದೆ. ಈ ಹೇಳಿಕೆಯಲ್ಲಿ ಲೇಖಕರ ಮತ್ತು ಚನ್ನೇಗೌಡರ ಮನಸ್ಥಿತಿಗಳು ಸ್ಪಷ್ಟವಾಗಿ ಅರಿವಾಗುತ್ತದೆ.

ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಪ್ರಜಾಪ್ರಭುತ್ವದ ಎಲ್ಲಾ ಮೌಲ್ಯಗಳನ್ನು ಆದಷ್ಟು ನಾಶ ಮಾಡಿ ಸಂವಿಧಾನದ ತತ್ವಗಳನ್ನು

ಗಾಳಿಗೆ ತೂರಿ ಜನರ ಅರಿವಿಗೆ ಬಾರದಂತೆ ಅವರನ್ನು ಮೈಮರೆಸಿ ಭ್ರಮಾಲೋಕ ಸೃಷ್ಟಿಸಿ ಅದರಲ್ಲಿ ಜನರು ಮೈಮರೆತು ಸತ್ಯವನ್ನೇ ಅರಿಯಲು ಸಾಧ್ಯವಾಗದೇ ಅವರ ಕೂಗುಮಾರಿಗೆ ಬಲಿಯಾಗುತ್ತಿರುವ ವಾಸ್ತವ ಸಂಗತಿಗಳನ್ನು ಅಂದು ಮತ್ತು ಇಂದಿಗೂ ಪ್ರಸ್ತುತವಾಗಿರುವುದನ್ನು ಕಾಣಬಹುದು. ಜನರ ಅನಿಷ್ಟ ಬೇಡಿಕೆಗಳು ರಾಜಕೀಯ ಚುನಾವಣೆಯಲ್ಲಿ ಅಷ್ಟೇ ಅಲ್ಲದೇ ರೈತ ಸಂಘಟನೆಗೂ ಕಾಲಿರಿಸಿರುವುದು ಶೋಚನೀಯ ಸಂಗತಿ. ಇದು ನಮ್ಮ ಸುತ್ತಲಿನ ಸಮಾಜದಲ್ಲಿ ನಡೆಯುವ ಸಹಜ ವಿಷಯವೇ ಆದರೂ ಜನರಲ್ಲಿ ಪ್ರಜಾ ಪ್ರಭುತ್ವದ ವ್ಯವಸ್ಥೆ, ರಾಜಕೀಯ ಕ್ಷೇತ್ರ, ರೈತ ಸಂಘಟನೆ ಮತ್ತು ಚುನಾವಣೆಯ ಬಗೆಗಿನ ಪರಿಕಲ್ಪನೆಯನ್ನು ಮತ್ತು ದೃಷ್ಟಿಕೋನವನ್ನು ಅರ್ಥೈಸಿ ಸುಧಾರಿಸಬೇಕಾಗಿರುವುದು ಅತ್ಯಂತ ಜರೂರಾಗಿದೆ.

ಈ ಲೇಖನವನ್ನು ಓದಿದ ಮೇಲೆ ಲೇಖಕರ ಒಟ್ಟು ಬರಹಗಳಲ್ಲಿ ನಾನು ಗಮನಿಸಿದ ಮುಖ್ಯವಾದ ಅಂಶವೆಂದರೆ ವಾಸ್ತವಿಕ ಬದುಕಿನ ರೈತಾಪಿ ಜನರು ಮತ್ತು ರೈತ ಸಂಘ ಸಂಸ್ಥೆಗಳನ್ನು ಕುರಿತು ಹೆಚ್ಚಾಗಿ ಹೇಳಿರುವಂತಹುದು. ಅಂದು ಗ್ರಾಮೋದ್ಧಾರ, ಸಂಘಸಂಸ್ಥೆಗಳು ಮತ್ತು ರೈತ ಸಂಘಟನೆಗಳು ಇದರ ಬಗ್ಗೆ ಸಮಾಜ ಮತ್ತು ಸರ್ಕಾರ ಏಕೆ ಚಿಂತಿಸಲಿಲ್ಲ ಎಂಬ ಪ್ರಶ್ನೆ ಮೂಡುತ್ತದೆ. ಇದು ಅವರ ಸೃಜನಶೀಲ ಬರವಣಿಗೆಯ ವೈಶಿಷ್ಟ್ಯವೂ ಹೌದು.

ಚನ್ನೇಗೌಡರ ಚಿಂತನೆಗಳು ವಿಶೇಷವಾಗಿದ್ದು ರೈತಾಪಿ ಜನರ ಪರವಾಗಿದ್ದವು. ಹಿಂದಿನಿಂದಲೂ ಬಂದ ಪರಂಪರೆಯನ್ನು ಓತಪ್ರೇತವಾಗಿ ಹೀಗಳೆಯುವ ಪ್ರಗತಿಶೀಲ ಮನೋಭಾವವುಳ್ಳ ವ್ಯಕ್ತಿಯಾಗಿದ್ದರು. ಲೇಖನದ ಪ್ರಾರಂಭದಿಂದಲೂ ಕೇಂದ್ರವ್ಯಕ್ತಿಯಾದ ಚನ್ನೇಗೌಡರ ವೈಯಕ್ತಿಕ ಮತ್ತು ಅವರ ಕೆಲಸದ ಬಗ್ಗೆ ಕುತೂಹಲವಿದ್ದ ಲೇಖಕರಿಗೆ ಚನ್ನೇಗೌಡರು ಮತ್ತು ಅವರ ಹೆಂಡತಿ ಪುಟ್ಟಮ್ಮ ಅವರು 1974ರಲ್ಲಿ ಇಬ್ಬರೇ ಚಳುವಳಿ ಮಾಡಿ ಇಪ್ಪತ್ತು ವರ್ಷಕ್ಕೆ ವಾಲೆಂಟರಿ ರಿಟೈರ್ಡ್ ಮೇಂಟ್ ಅನ್ನು ಕ್ಯಾಬಿನೆಟ್ ನಲ್ಲಿ ಜಾರಿಗೊಳಿಸುವಲ್ಲಿ ಯಶಸ್ವಿಯಾದ ಘಟನೆಯನ್ನು ವಿವರಿಸುತ್ತಾ ಚಳುವಳಿ ಮಾಡಲಿಕ್ಕೆ ತುಂಬಾ ಜನ ಬೇಕಾಗಿಲ್ಲ, ಯೋಗ್ಯ ಕಾರಣ ಮತ್ತು ಸರಿಯಾದ ಎರಡೇ ಎರಡು ಜನ ಸಿಕ್ಕಿದರೆ ಸಾಕು ಏನನ್ನಾದರೂ ಮಾಡಬಹುದು. ಈ ಘಟನೆಯನ್ನು ಕುರಿತ ಪತ್ರಿಕಾ ವರದಿಯನ್ನು ಉದ್ಧರಿಸಿ ಪಿಯುಸಿ ಓದುವಾಗ ತರಗತಿಯ ಉಪನ್ಯಾಸಕರು ಹೇಳಿದ ಮಾತು ನೆನಪಾಗಿ ಬೆಕ್ಕಸ ಬೆರಗಾದರು. ಚನ್ನೇಗೌಡರ ಬಗ್ಗೆ ಇದ್ದ ಕಲ್ಪನೆಗಳೆಲ್ಲವೂ ಹುಸಿಯಾಗುತ್ತಾ ಹೋಗುವ ಸಂದರ್ಭವಂತೂ ತುಂಬಾ ಅದ್ಭುತವಾಗಿ ಬರಹ ರೂಪದಲ್ಲಿ ಮೂಡಿ ಬಂದಿದೆ. ಒಂದೇ ರಾತ್ರಿಯಲ್ಲಿ ಕಟ್ಟಿದ ಸುಮಾರು ಇಪ್ಪತ್ತೈದು ವರ್ಷಗಳಿಂದ ವಾಸವಿರುವ ಸಾಧಾರಣ ಮಂಗಳೂರು ಹೆಂಚಿನ ಶೆಡ್ಡನ್ನು ನೋಡಿ ಇದು "ನನ್ನ ಪರ್ಣ ಕುಟಿಗೆ" ಎಂದಾಗ ಅವರ ಸರಳ ಜೀವನ, ಸಿದ್ಧಾಂತಗಳನ್ನು ಕಂಡು ಅವರ ಬಗೆಗಿನ ಕುತೂಹಲ ಮತ್ತಷ್ಟು ಹೆಚ್ಚಾಗಿ ಅವರ ಬಗ್ಗೆ ತಿಳಿಯುವ ಉತ್ಸಾಹವನ್ನು ಹೆಚ್ಚಿಸುತ್ತದೆ.

ಹೀಗೆ ಇಬ್ಬರ ನಡುವೆ ಹಳ್ಳಿಗಳ ಬಗ್ಗೆ ಮಾತುಕತೆ ಮುಂದುವರೆಯುತ್ತಾ ಹೋಗುತ್ತದಾದರೂ ಹಳ್ಳಿಗಳು ಯಾಕೆ ಬಡವಾಗಿವೆ? ಇದಕ್ಕೆ ಕಾರಣವೇನು? ರೈತರು ಎಂದರೆ ಯಾರು? ಎಂಬುದು ಪ್ರಸ್ತುತ ಸಾಮಾಜಿಕ ಚರ್ಚೆಯಲ್ಲಿರುವ ಸಂಗತಿಯ ಕುರಿತು ಚರ್ಚಿಸ ತೊಡಗುತ್ತಾರೆ. ಈ ಪ್ರಶ್ನೆಗೆ ಉತ್ತರವನ್ನು ಹುಡುಕುತ್ತಾ ಹೋದ ಹಾಗೆ ಹಲವು ಆಯಾಮಗಳ ಮೇಲೆ ಬೆಳಕು ಚೆಲುತ್ತದೆ. ಅದರಲ್ಲಿ ಹಳ್ಳಿ ಜನರ ಅಜ್ಞಾನವೂ ಇದಕ್ಕೆ ಕಾರಣ. ಅಜ್ಞಾನದಿಂದಾಗಿ ಸೊಮಾರಿತನ, ಅಸೂಯೆ ಮತ್ತು ದುರಾಸೆ. ಇದನ್ನೇ ಲೇಖಕರು ಊರ ಮುಂಭಾಗದಲ್ಲಿ ಇದ್ದ ಫಲಕದ ಮೇಲಿನ ಶತೃಪಕ್ಷಗಳು ನೆನಪಾಗುತ್ತವೆ. ಅನಕ್ಷರತೆ ಬಡತನಕ್ಕೆ ಕಾರಣ ಎಂಬುದರಲ್ಲಿ ಅನುಮಾನವಿಲ್ಲ ಆದರೂ ಈ ವ್ಯಾಖ್ಯಾನದ ಸತ್ಯತೆಯ ತೀವ್ರತೆ ಎಷ್ಟು ಎಂದು ಈ ಲೇಖನದಲ್ಲಿ ಕಾಣಬಹುದಾಗಿದೆ. ಜನರಲ್ಲಿನ

ಅಜ್ಞಾನದ ಕೊರತೆಯನ್ನು ಹೊಡೆದೋಡಿಸಲು ಇರುವ ಮಾರ್ಗ ಶಿಕ್ಷಣ. ಆ ಶಿಕ್ಷಣ ಮೌಲ್ಯ ಶಿಕ್ಷಣವಾಗಿರಬೇಕು ಮತ್ತು ನೈತಿಕತೆಯಿಂದ ಕೂಡಿರಬೇಕು ಇಂತಹ ಶಿಕ್ಷಣ ವ್ಯಕ್ತಿಯ ಮನೋವಿಕಾಸದಲ್ಲಿ ನೆರವಾಗುವಂತಿರಬೇಕು. ಜನರು ಶಿಕ್ಷಣವನ್ನು ಪಡೆದು ವಿಚಾರಕ್ರಾಂತಿ ಎಂಬ ಸೈನ್ಯದ ಸಹಾಯದಿಂದ ಬಡವರ ಮೇಲಲ್ಲ, ಬಡತನದ ಮೇಲಲ್ಲ, ಬಡತನದ ವಿರುದ್ಧ ಹೋರಾಡುವಂತಿರಬೇಕು ಎಂಬ ಉದ್ದೇಶದಿಂದ ಊರ ಮುಂದೆ ಆ ಊರಿನ ಚೇರ್ಮನ್ ಆದ ಚನ್ನೇಗೌಡರು ಫಲಕವನ್ನು ನಿಲ್ಲಿಸಿದ ಲೇಖಕರ ಬಹುದಿನದ ಕುತೂಹಲದ ಪ್ರಶ್ನೆಗೆ ಉತ್ತರ ದೊರೆತಂತಾಯಿತು. ಆದರೂ ಚನ್ನೇಗೌಡರ ವಿಚಾರಗಳಂತೂ ತತ್ವವೋ, ದ್ವಂದ್ವವೋ ಯಾವುದೆಂದು ಸರಿಯಾಗಿ ನಿಷ್ಕರ್ಷೆಯಾಗಲಿಲ್ಲ ಎಂಬುದಂತೂ ಸತ್ಯ. ಮಾತು ಸಹಜವಾಗಿ ರಾಜಕೀಯದತ್ತ ಮತ್ತು ರೈತ ಸಂಘದತ್ತ ತಿರುಗುತ್ತದೆ. ಬಂಜೆ ಬಲ್ಲಳೆ ಬೇನೆಯ ನೋವ ಎಂಬಂತೆ ಒಬ್ಬ ಪಕ್ಕಾ ರೈತನೊಬ್ಬ ಆಂದೋಳನದ ಮುಂದಾಳುತನವನ್ನು ವಹಿಸಿದರೆ ಮಾತ್ರ ಯಶಸ್ವಿಯಾಗುತ್ತದೆ. ಅದ ಬಿಟ್ಟು ಒಬ್ಬ ಸಹೃದಯನೂ, ಕಾರ್ಯ ತತ್ಪರನೂ ಆದ ಬೇರೆ ಯಾರೇ ಯಾವ ವ್ಯಕ್ತಿಯು ಆಂದೋಳನವನ್ನು ವಹಿಸಿಕೊಂಡರೆ ಆತ ನೂರಕ್ಕೆ ನೂರು ಪರಕಾಯ ಪ್ರವೇಶ ಮಾಡಲು ಸಾಧ್ಯವಾಗದೇ ಆಂದೋಳನವನ್ನು ಯಶಸ್ವಿಗೊಳಿಸಲು ಅಸಮರ್ಥರಾಗುತ್ತಾರೆ. ಆದ್ದರಿಂದ ಆಂದೋಳನದ ಮುಖಂಡತ್ವವನ್ನು ನೊಂದವರ ಮಧ್ಯದಿಂದ ಬಂದರೆ ಈ ಕ್ರಾಂತಿಯ ವಿಚಾರವೇ ಬೇರೆಯಾಗುತ್ತದೆ ಆದರೆ ನೂರಕ್ಕೆ ನೂರು ನೋವನ್ನು ಅರಿಯದವರಿಂದ, ರಾಜಕಾರಣಿಗಳ ದಿವಾಳಿತನ ಮತ್ತು ಬೊಗಳೆ ವಿಚಾರಗಳಿಂದ ಖಂಡಿತವಾಗಿ ರೈತರ ಉದ್ಧಾರ ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ನೊಂದವರ ನೋವ ನೋಯದವರೆತ್ತ ಬಲ್ಲರೋ? ಎಂಬ ಅಕ್ಕ ಮಹಾದೇವಿಯ ವಚನದ ಸಾಲನ್ನು ನೆನಪಿಗೆ ತರುತ್ತದೆ. ನಮ್ಮಲ್ಲಿ ಕ್ರಾಂತಿಗಳು ಸೋಲುತ್ತಿರಲು, ನ್ಯಾಯಬದ್ಧ ಆಂದೋಳನಗಳು ಮುಳುಗುತ್ತಿರಲು, ಆ ಸಮಸ್ಯೆಗೆ ಸಂಬಂಧಿಸದವರು ನೇತೃತ್ವವಹಿಸುತ್ತಿರುವುದೇ– ಎಂಬುದು ನನ್ನ ದೃಢನಿಲುವು ಎಂದು ತಮ್ಮ ಅಸಮಾಧಾನವನ್ನು ಹೊರಹಾಕುತ್ತಾರೆ.

ಮುಂದುವರೆಯುತ್ತಾ ನಿಜವಾದ ರೈತ ಎಂದರೆ ಯಾರು? ಎಂಬ ವ್ಯಾಖ್ಯಾನವನ್ನು ನೋಡುವುದಾದರೆ ಸಂಪೂರ್ಣವಾಗಿ ರೈತಾಪಿ ವೃತ್ತಿಯನ್ನು ಅವಲಂಭಿಸಿದವನು ಮತ್ತು ಉತ್ತು ಭಿತ್ತಿ ಕಟಾವು ಮಾಡಿ ಕಷ್ಟ ಸುಖ ಅರಿತವನು. ಆದರೆ ಉತ್ತು ಭಿತ್ತಿ ಬುರಡೆಯನ್ನು ಬರಡಾಗಿಸಿಕೊಳ್ಳುತ್ತಿರುವ ಜನ ಜಡ ಚೇತನಗಳಾಗಿದ್ದಾರೆ ಅವರನ್ನು ಎಬ್ಬಿಸಬೇಕಾಗಿದೆ. ಆದರೆ ಹೇಗೆ? ಯಾಕೆಂದರೆ ಇವರು ಸಂಘಟಿತರಾಗುವುದೇ ಇಲ್ಲ, ಇವರನ್ನು ಇವರ ಪಾಡಿಗೆ ಬಿಟ್ಟರೇ ಇನ್ನೂ ನೂರು ಶತಮಾನವಾದರೂ ಇದು ನಮ್ಮ ಹಣೆಬರಹವೆಂದು ಮುಂದುವರೆಯದೇ ಹಾಗೆಯೇ ಕೂರುತ್ತಾರೆ. ಮೂಲಭೂತವಾಗಿ ನೀವು ರೈತರು ನಿಜವಾದ ರೈತರು ಅನ್ನುವುದನ್ನು ಮೊದಲು ಅವರ ತಲೆಯಲ್ಲಿ ಬಿಂಬಿಸಬೇಕು. ಎಲ್ಲೆಲ್ಲಿ ಸಾಧ್ಯವೋ ಹೇಗೆ ಸಾಧ್ಯವೋ, ಯಾರು ಯಾರಿಗೆ ಸಾಧ್ಯವೋ, ಹೇಗೆ ಹೇಗೆ ಸಾಧ್ಯವೋ ಹಾಗೆ ಸಂಘಟನೆಯನ್ನು ಪ್ರಾರಂಭಿಸುವ ಒಬ್ಬ ಸಮರ್ಥನಾಯಕ ಬೇಕು. ಅದಕ್ಕಾಗಿ ಇವರನ್ನು ವಿದ್ಯಾವಂತರನ್ನಾಗಿಸಿ ಅಜ್ಞಾನವನ್ನು, ಅದರ ಗೆಣೆಕಾರ ಸೋಮಾರಿತನವನ್ನು ಹೊಡೆದು ಅಟ್ಟಬೇಕು. ಆಗ ಒಬ್ಬ ಸಮರ್ಥನಾಯಕ ಹುಟ್ಟುತ್ತಾನೆ. ಆಗ ಅವನು ತನ್ನ ಜನರನ್ನು ಮುನ್ನಡೆಸುತ್ತಾನೆ ಆಗ ಏನಾದರೂ ಸಾಧಿಸಬಹುದು ಎಂಬ ಆತ್ಮವಿಶ್ವಾಸವಿರುತ್ತದೆ. ಈ ಎಲ್ಲಾ ಗುಣಗಳು ಚನ್ನೇಗೌಡರಿಗೆ ಬಳುವಳಿಯಾಗಿ ಬಂದಿತ್ತು. ಆದ್ದರಿಂದಲೇ ಈತ ಇಪ್ಪತ್ತು ಇಪ್ಪತ್ತೈದು ವರ್ಷಗಳ ಕೆಳಗೆ ಇವರು ಒಂದು ರೈತ ಸಂಘವನ್ನು ಸೃಷ್ಟಿಸಿದ್ದರು. ಆದರೆ ಕಾರ್ಯಯೋಜನೆಯ

ವಿಚಾರಗಳು ಜನರ ತಲೆಗೆ ಅಜ್ಞಾನದ ಕಾರಣ ಹೋಗಲೇ ಇಲ್ಲ. ಅದರೂ ಈಗ ಅದು ಮತ್ತೊಮ್ಮೆ ಪ್ರಾರಂಭವಾಗಬೇಕಾಗಿದೆ ಎಂಬ ಚನ್ನೇಗೌಡರ ದೂರದೃಷ್ಟಿ ಮತ್ತು ಮಹತ್ವಾಕಾಂಕ್ಷೆ ಮೆಚ್ಚುವಂತಹುದು ಹಾಗೂ ಇಂದಿಗೂ ಪ್ರಸುತವಾದುದು.

ಲೇಖಕರು ಮತ್ತು ಚನ್ನೇಗೌಡರ ನಡುವಿನ ಸುದೀರ್ಘ ಸಂವಾದದಲ್ಲಿ ನಿಜವಾದ ರಾಷ್ಟ್ರ ನಾಯಕನ ಅರ್ಹತೆಗಳೇನು? ಎಂಬ ಲೇಖಕರ ಕುತೂಹಲ ಪ್ರಶ್ನೆಗೆ ಚನ್ನೇಗೌಡರು ಕೇಂದ್ರದ ವ್ಯಕ್ತಿಯಾಗಿ ಗುಡುಗಿದ ಮತ್ತು ಸಮಗ್ರ ರಾಷ್ಟವನ್ನು ಮುನ್ನಡೆಸಿದ ಜಯಪ್ರಕಾಶ ಅವರನ್ನು ಮತ್ತು ಆತ ಹುಟ್ಟುಹಾಕಿದ ಚಳುವಳಿಯನ್ನು ಹೇಳುತ್ತಾ ನಿಜವಾದ ರಾಷ್ಟ್ರನಾಯಕನ ಹೇಳಿಕೆ ಹೇಗಿರಬೇಕು, ಬಹು ಜನರ ವಿಚಾರ ಮಂಥನವನ್ನು ಹೇಗೆ ಕೇಂದ್ರೀಕರಿಸಿಕೊಳ್ಳಬೇಕು, ಅವನ ತೀರ್ಮಾನದ ಅಂತಿಮ ಸ್ವರೂಪ ಹೇಗಿರಬೇಕು ಹಾಗೂ ಅವನ ಮಾತು ಹೇಗಿರಬೇಕು ಎಂದು ಗಾಂಧಿ ಅವರ ವಿಚಾರವನ್ನು ಮತ್ತು ನಾಯಕತ್ವ ಗುಣವನ್ನು ಆಧರಿಸಿ ಹೇಳುವುದನ್ನು ಕಾಣಬಹುದು.

ಸಂಘಟನೆ ವಿಚಾರ ಕುರಿತು ಹೇಳುವುದಾದರೆ ಸಂಘಟನೆ ಮಾಡಲಿ ಏಕೆಂದರೆ ಏನು ಕೆಲಸವೇ ಆಗದಿರುವಲ್ಲಿ ಸ್ವಲ್ಪ ಕೆಲಸವಾಗಿದ್ದರೂ ಅದು ಉತ್ತಮವಲ್ಲವೇ? ಸಂಘಟನೆ ರೈತರನ್ನು ಒಗ್ಗೂಡಿಸುವಂತಹುದು ಆದ್ದರಿಂದ ರೈತರ ಕೆಲಸ ಯಾರು ಮಾಡಿದರೇನು? ಎಲ್ಲವೂ ಸರಿ ಆದರೆ ಈ ಸಂಘಟನೆ ಯಶಸ್ವಿಯಾಗುವುದೇ? ನಿಜವಾದ ರಾಷ್ಟ್ರ ನಾಯಕ ಬಂದಾನೆ? ಎಂಬ ಪ್ರಶ್ನೆಗಳು ಲೇಖಕರಲ್ಲಿ ಹುಟ್ಟುವುದ್ದನ್ನು ಗುರುತಿಸಬಹುದು. ಇಲ್ಲಿ ನಿರೂಪಕನ ಸ್ಥಾನ ಪಡೆದಿರುವ ಲೇಖಕರು ನಮ್ಮಲ್ಲಿ ಮೂಡಬಹುದಾದ ಪ್ರಶ್ನೆಗಳನ್ನು ಅವರೇ ಕಂಡುಕೊಂಡು ಅವುಗಳಿಗೆ ಉತ್ತರವನ್ನು ಇಲ್ಲಿನ ಕೇಂದ್ರವ್ಯಕ್ತಿಯ ಮೂಲಕ ಕೊಡುತ್ತಿರುವುದು ವಿಶೇಷವಾಗಿದೆ.

ನಮ್ಮ ಕೇಂದ್ರ ರಾಜ್ಯ ನಾಯಕರ ಬಗ್ಗೆ ಚನ್ನೇಗೌಡರ ನಿಲುವು ಮತ್ತು ಈ ದೇಶದ ದೌರ್ಬಲ್ಯದ ಬಗ್ಗೆ ಅಸಮಾಧಾನವನ್ನು ಹೊರಹಾಕಿ ಈ ದೇಶ ಬುದ್ಧಿವಂತರ ಸೊತ್ತು ಆದ್ದರಿಂದ ಈ ದೇಶಕ್ಕೆ ಮಾವೋ, ಲೆನಿನ್ ರಂತಹ ಜನಬೇಕು. ಯಾಕೆಂದರೆ ಕ್ರಾಂತಿ ಮಾಡಿದವರು ಅವರೇ. ಸಂತರ ರಾಜ್ಯಸೂತ್ರ ಹಿಡಿದವರೂ ಅವರೇ ಎಂಬ ರಾಜಕೀಯ ವಿಚಾರ ತನ್ನ ಸಂಕೀರ್ಣತೆಯ ಮೂಲಕ ಕುತೂಹಲ ಮತ್ತು ಜಿಜ್ಞಾಸೆಯಲ್ಲಿ ತೊಡಗುವಂತೆ ಮಾಡುತ್ತದೆ. ಅಂದು ಶಾಸ್ತ್ರೀಜೀ ಅವರ "ಜೈ ಜವಾನ್ ಜೈ ಕಿಸಾನ್" ಮತ್ತು ಇಂದಿರಾ ಗಾಂಧಿ ಅವರ "ಗರೀಬಿ ಹಠಾವೋ" ಎಂಬ ಶ್ಲಾಘನೀಯ ಘೋಷಣೆಗಳು ಬಡವರು ರಾಜಕೀಯ ಮೌಲ್ಯ ಮತ್ತು ರಾಜಕೀಯ ತೂಕವನ್ನು ಪಡೆಯುತ್ತಾರೆ. ಇದರೊಂದಿಗೆ ನಿಜವಾಗಿಯೂ ರೈತರ ಅಂತರಂಗದ ಅಭಿಮಾನಿಯಾಗಿದ್ದ, ರೈತರ ಸ್ಥಿತಿ ಸುಧಾರಿಸಬೇಕು ಎಂಬ ಪ್ರಾಮಾಣಿಕ ಕಳಕಳಿ ಇದ್ದ, ರೈತರಿಗೆ ಹೆಚ್ಚು ಅನುಕೂಲ ಮಾಡಿದ, ರೈತರ ಮತ್ತು ಹಿಂದುಳಿದವರ ಬಗ್ಗೆ ಅಂತಃಕರಣ ಮಿಡಿದ ದೇವರಾಜ ಅರಸು ಅವರನ್ನು ನಿಜವಾದ ಗಂಡು ಎಂದು ತಮ್ಮ ಅಭಿಪ್ರಾಯವನ್ನು ಮುಕ್ತವಾಗಿ ಚನ್ನೇಗೌಡರು ಹೇಳಿಕೊಂಡಿರುವುದನ್ನು ಕಾಣಬಹುದು. ಹಾಗೆಯೇ ಈ ಕಪ್ಪೆಯಂತಹ ಜನರನ್ನು ತಕ್ಕಡಿಯಲ್ಲಿಟ್ಟು ತೂಗುವಾಗ ಬ್ಯಲೆನ್ಸ್ ನಿಲ್ಲಿಸಲು ಕಾಲು ಕಟ್ಟುವುದು ಅನಿವಾರ್ಯ ಅಲ್ಲವೇ? ಎಂಬ ಮಾತು ರಾಜ್ಯ ನಾಯಕರ ಬಗೆ ಹೇಳುವಾಗ ಸಂದರ್ಭೋಚಿತವಾಗಿ ಬಂದಿರುವುದನ್ನು ಗಮನಿಸಬಹುದು.

1978ರಲ್ಲಿ ಸಿಂಹದ ಗುರುತಿನೊಂದಿಗೆ ಕ್ರಾಂತಿಕಾರಿ ಪಕ್ಷದ ಅಭ್ಯರ್ಥಿಯಾಗಿ ಸ್ವರಾಜ್ಯ ಪಕ್ಷದ ಬೆಂಬಲ ಪಡೆದು ಅಭ್ಯರ್ಥಿಯಾಗಿ ಚುನಾವಣೆ ನಿಂತಿದ್ದ ಚನ್ನೇಗೌಡರು ನನಗೆ ಓಟು ಕೊಡಿ ಎಂದೂ ಯಾರನ್ನೂ ಕೇಳದೆ ನಿಮ್ಮ ಮತ ದೇಶದ ಹಿತಕ್ಕಾಗಿ, ಆತ್ಮೀಯ ಚಿಂತನೆ, ನಿಸ್ವಾರ್ಥ ರಾಜಕೀಯ, ನಿಷ್ಪಕ್ಷಪಾತ ಆಡಳಿತ ಮತ್ತು ನಿಷ್ಠೆಯಿಂದ ಕೂಡಿದ

ದುಡಿಮೆ, ಜನತೆಯಲ್ಲಿ ಪ್ರೀತಿ, ವಿಶ್ವಾಸ ಈ ಗುಣಗಳನ್ನು ಹೊಂದಿರುವ ಯೋಗ್ಯ ವ್ಯಕ್ತಿಗಳು ಯಾವುದೇ ಪಕ್ಷದಲ್ಲಿದ್ದರೂ ಅವರಿಗೆ ತಮ್ಮ ಅಮೂಲ್ಯವಾದ ಮತ ನೀಡುವುದರ ಮೂಲಕ ತಮ್ಮ ಮತದ ಬೆಲೆ ಮತ್ತು ಮಹತ್ವವನ್ನು ಕಾಪಾಡಿಕೊಳ್ಳಬೇಕು. ತಮ್ಮ ಮತ ಇಡೀ ದೇಶದ ಪ್ರಗತಿ ಮತ್ತು ರಕ್ಷಣೆಯ ಶಕ್ತಿ, ಅಲ್ಲದೇ ಜನತೆಯ ಕ್ಷೇಮಕ್ಕೆ ಮೂಲ ಆದ್ದರಿಂದ ತಮ್ಮ ಮತದ ಬೆಲೆಯ ಮಹತ್ವವನ್ನು ರಾಜಕೀಯ ವ್ಯಕ್ತಿಗಳ ಅಧಿಕಾರ ದಾಹದಿಂದ ಕೂಡಿದ ಕುತಂತ್ರಕ್ಕೆ ಬಲಿಕೊಡದೇ ಯೋಚಿಸಿ, ಎಚ್ಚರಿಕೆಯಿಂದ ಮತ ನೀಡಬೇಕೆಂಬ ಆತ್ಮೀಯ ಕೋರಿಕೆಯ ಭಾಷಣ ಮತ್ತು ಪ್ರಣಾಳಿಕೆಯನ್ನು ಹೊರಡಿಸಿದ್ದರು. ರಾಜಕೀಯದವರು ಮತದಾರರನ್ನು ಮಲಿನ ಮಾಡುವರಲ್ಲಾ ಅದನ್ನು ಶುದ್ಧೀಕರಿಸಿ ಸಾಚಾತನ ಮತ್ತು ನೈತಿಕತೆಯ ಭದ್ರ ತಳಪಾಯವನ್ನು ಕೊಡಿಸಬೇಕು ಎಂಬ ಚನ್ನೇಗೌಡರು ಕೇವಲ ತಾವು ನಂಬಿದ್ದ ತತ್ವಕ್ಕಾಗಿ ತಮ್ಮ ಪ್ರಣಾಳಿಕೆಯನ್ವಯ ಯೋಗ್ಯ, ದಕ್ಷ ಮತ್ತು ಪ್ರಾಮಾಣಿಕರಿಗೆ ನನ್ನ ಓಟು ಎಂದು ತಮ್ಮ ಮತವನ್ನು ತನಗಲ್ಲದೇ ಯೋಗ್ಯರಿಗೆ ಹಾಕಿದ ಘಟನೆಯಂತೂ ಎಂದೂ ಕಂಡಿರದ ಕೇಳಿರದ, ಇತಿಹಾಸದಲ್ಲಿ ಮತ್ತೆಂದೂ ಜರಗದ ಘಟನೆಯಾಗಿತ್ತು. ಇದು ಈ ಲೇಖನದಲ್ಲಿ ಉಳಿದೆಲ್ಲವುಗಳಿಗಿಂತ ಅವಿಸ್ಮರಣೀಯ ಘಟನೆಯಾಗಿ ಕಾಣುತ್ತದೆ ಮತ್ತು ಅವರಿಗೆ ದುಡ್ಡು, ಅಧಿಕಾರದ ಆಸೆ ಆಕಾಂಕ್ಷೆಗೆ ಒಳಗಾಗದೇ ತನ್ನ ತತ್ವಕ್ಕಾಗಿ ಬದುಕಿದ ಅಪ್ರತಿಮ, ಅದಮ್ಯ ವ್ಯಕ್ತಿತ್ವವುಳ್ಳ, ಪ್ರಾಮಾಣಿಕ ಮತ್ತು ಆದರ್ಶವ್ಯಕ್ತಿಯಾಗಿದ್ದರು ಎಂಬುದನ್ನು ಕೂಗಿ ಹೇಳುತ್ತದೆ.

ಅನೇಕಾನೇಕ ಸಂದರ್ಭಗಳಲ್ಲಿ ಚನ್ನೇಗೌಡರನ್ನು ಕಂಡು ಅವರ ಸಂಘಟನಾ ಕಾರ್ಯದಲ್ಲಿ ಭಾಗವಹಿಸುತ್ತಿದ್ದ ಲೇಖಕರಿಗೆ ಹಳ್ಳಿಗರ ಹೃದಯದ ಅಂತರಾಳವನ್ನು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ತಿಳಿಯುತ್ತಾ "ಎದ್ದೆದ್ದಿ ನೋಡು ನಮ್ಮ ರೈತ, ಸಿಡಿದ್ದೆದ್ದು ನೋಡು ನಮ್ಮ ರೈತ" ಎಂದು ಗುಡುಗುತ್ತಾ ಕರ್ನಾಟಕವನ್ನೇ ಚನ್ನೇಗೌಡರೊಂದಿಗೆ ಸುತ್ತುತ್ತಾ ಅವರ ಅಂತರಾಳದ ಸ್ವರೂಪವನ್ನು, ರೈತರ ಬಗ್ಗೆ, ಊರಿನವರ ಬಗ್ಗೆ ಇರುವ ಪ್ರೀತಿ ಕಾಳಜಿಯನ್ನು ತಿಳಿಯುತ್ತಾ ಹೋದಂತೆ ಇವರ ಹುಟ್ಟು ವ್ಯಾಸಂಗ, ಇವರು ಬೆಳೆದ ಪರಿಸರ, ಇವರ ಕುಟುಂಬ, ಊರವರ ಬಗ್ಗೆ ಕಂಡು ಬಂದ, ಕೇಳಿ ತಿಳಿದ, ಅನುಭವದಿಂದ ಗ್ರಹಿಸಿದ ಸತ್ಯ ಸಂಗತಿಗಳ ಘಟನೆಯನ್ನು ಕುರಿತು ಒಂದು ಕೈಪಿಡಿಯನ್ನು ರಚಿಸಲು ಮುಂದಾಗುತ್ತಾರೆ. ಅದೇ ಪ್ರಸ್ತುತ ಲೇಖನ "ಹಿರಿಹಳ್ಳಿಯ ಹತ್ತು ಸಮಸ್ತರು!"

ಹಿರಿಹಳ್ಳಿಯ ಸ್ಥಳಪುರಾಣ, ಹಿರಿಹಳ್ಳಿಯ ಎರಡು ಪ್ರಮುಖ ಬುಡಗಳು, ಹಿರಿಹಳ್ಳಿಯ ಮೂಲಪುರುಷರು ಹಾಗೂ ಜೋಡಿಗಟ್ಟೆಯ ಕಿರು ಪರಿಚಯ ನೀಡುತ್ತಾ ಉದಯಪುರದಿಂದ ಎರಡೂವರೆ ಕಿ. ಮೀ ಅಂತರದಲ್ಲಿ ಜೋಡಿಯಾದ ಎರಡೆರಡು ಜೊತೆ ಕಟ್ಟೆಗಳಿದ್ದವು. ಈ ಕಟ್ಟೆಗಳು ಎಂತಹ ಬೇಸಿಗೆಯಲ್ಲೂ ಸಹ ಭಾರೀ ಕೆರೆಗಳು ಒಣಗಿದರೂ ಇವು ಒಣಗುತ್ತಿರಲಿಲ್ಲ. ಹೀಗಿರುವಾಗ ಚನ್ನೇಗೌಡರಿಗೆ ಇಲ್ಲಿ ಒಂದು ಸುಂದರ ಊರಾಗುವ ಕನಸು ಬೀಳಲು ಚನ್ನಕೇಶವ ಒಕ್ಕಲಾದ ಇವರು ಹರಿಹರ ಸಂಯೋಗವನ್ನು ಮಾಡಿ ಚನ್ನಲಿಂಗೇಶ್ವರ ದೇವಾಲಯವನ್ನು ನಿರ್ಮಿಸುವ ಕನಸು ಕಂಡರು. ಒಂದೇ ರಾತ್ರಿಯಲ್ಲಿ ಚನ್ನೇಗೌಡರು ಇಲ್ಲೊಂದು ಮನೆಯನ್ನು ಕಟ್ಟಿದರು. ಈ ಊರಿನ ಶಿಲ್ಪಿ ಚನ್ನೇಗೌಡರ ಕನಸಿನ ಭೂಮಿಕೆ ರೂಪುಗೊಳ್ಳಲು ನಂಜೇಗೌಡರು ಒತ್ತಾಸೆಯಾಗಿದ್ದರು. ಮೂಲ ಊರಿನ ಹೆಸರಿಗೆ ಉದಯಿಸಿದ ಊರು ಬರುವುದು ಸಹಜ ಆದರೆ ಇಲ್ಲಿ ಹಿರಿಹಳ್ಳಿಯ ಜೋಡಿಗಟ್ಟೆ ಎಂದೂ ಯಾರೂ ಇದನ್ನ ಹೇಳದೇ ಜೋಡಿಗಟ್ಟೆ ಹಿರಿಹಳ್ಳಿ ಎಂದು ಕರೆಯುವ ಮಟ್ಟಕ್ಕೆ ಹೋಗಿದೆ ಎಂದಾಗ ಇದರ ನಿರ್ಮಾತೃವಿನ ಶ್ರಮ ಎಷ್ಟು ಎಂಬುದರ ಅರಿವಾಗುತ್ತದೆ.

ಈ ಹಿರಿಹಳ್ಳಿಯಲ್ಲಿ ನೆಲೆಗೊಂಡಿರುವ ಸಂಘಸಂಸ್ಥೆಗಳು, ಇವುಗಳ ನಿರ್ಮಾತೃಗಳು ಈ ಊರಿನ ಮೂರು ತಲೆಮಾರುಗಳಲ್ಲಿ ಪ್ರಮುಖರು, ಅವರುಗಳ ಧ್ಯೇಯ, ಧೋರಣೆ, ಆಸೆ, ಆಕಾಂಕ್ಷೆ ಮತ್ತು ಅವರ ಕೊಡುಗೆಗಳನ್ನು ಲೇಖನದಲ್ಲಿ ಹಂತಹಂತವಾಗಿ ವಿವರಿಸುತ್ತಾ ಹೋಗಿರುವುದನ್ನು ಗಮನಿಸಬಹುದು. ಅದರಲ್ಲಿ ಮೊದಲಿಗೆ ಊರಿಗೆ ಪಾಠಶಾಲೆ ತಂದು ವಿದ್ಯಾಪಕ್ಷಪಾತಿಯಾದ ಇವರು ವೃತ್ತಿಯಲ್ಲಿ ಉಪಾಧ್ಯಾಯರಾಗಿದ್ದು ನಂತರ ಅದನ್ನು ತೊರೆದು ವ್ಯಾಪಾರದಲ್ಲಿ ತೊಡಗಿದರು ನಂತರ ಊರಿನ ಗೌಡಿಕೆ ಇವರ ಪಾಲಿಕೆ ಬಂದಾಗ ಮುವತ್ತು ವರ್ಷಗಳ ಕಾಲ ಪ್ರಾಮಾಣಿಕ ಮತ್ತು ದಕ್ಷತೆಯಿಂದ ಊರನ್ನು ಸರಿಯಾಗಿ ತೂಗಿಸಿಕೊಂಡು ಹೋದವರು ಉಪಾದ್ರಿ ಚನ್ನೇಗೌಡರು, ಶಿಸ್ತುಗಾರ ಪುಟ್ಟಸ್ವಾಮಿ ಎಂದೇ ಬಿರುದಾಂಕಿತರಾದ ಮತ್ತು ಬೇಟೆಯಲ್ಲಿ ಕಿರಾತ– ಪ್ರವೀಣ ಎಂದು ಬಿರುದಾಂಕಿತರಾದ ಕೆಂಗೇಗೌಡ್ರು, ವ್ಯಂಗ್ಯ ಎಂಬ ಪದಕ್ಕೆ ಪ್ರತೀಕವಾಗಿದ್ದ ಶಿವನಂಜೇಗೌಡರು, ಅವಿದ್ಯಾವಂತರಾಗಿದ್ದರೂ ಊರ ಅಭಿಮಾನಿಯಾಗಿದ್ದ ಜಮೀನುದಾರ ಪಟೇಲ್ ಚನ್ನೇಗೌಡರು, ವ್ಯವಸಾಯದಲ್ಲಿ ಗೇದುಣ್ಣುವುದರಲ್ಲೇ ಸುಖ ಕಂಡುಕೊಂಡಿದ್ದ ದೊಡ್ಡ ಬೆಳ್ಳಿಗೌಡರು, ಸ್ವಭಾವದಲ್ಲಿ ಕಿಡಿಕಿಡಿ ಮನುಷ್ಯನಾದರೂ ಗಂಡು ಎಂದರೆ ಇವರೇ ಎಂದು ಹೆಸರು ಸಂಪಾದಿಸಿದ್ದ ಸುಬ್ಬಯ್ಯಾರ ದೊಡ್ಡಣ್ಣ, 105 ವರ್ಷಗಳ ಕಾಲ ನೆಮ್ಮದಿಯ ತುಂಬು ಜೀವನವನ್ನು ನಡೆಸಿದ ಕೆಳ್ಳೂಮನೆ ಚನ್ನೇಗೌಡ, ಊರು ಮಾದರಿ ಗ್ರಾಮವಾಗಬೇಕೆಂಬ ಮಹಾದಾಸೆಯಿಂದ ದುಡಿಯುತ್ತಿದ್ದ ದ್ಯಾಣಪ್ಪನ ಸಣ್ಣೇಗೌಡ, ಉತ್ತಮ ಸಂಗೋಪಕರಾದ ಕುಳ್ಳೇಗೌಡರು, ಭಂಗಿ ಕೃಷ್ಣಗೌಡರೆಂದೇ ಖ್ಯಾತರಾದ ಮತ್ತು ಅತ್ಯುತ್ತಮ ಬೇಸಾಯಗಾರರಾದ ಕೃಷ್ಣೇಗೌಡರು, ಊರೆಲ್ಲಾ ಸುಖವಾಗಿರಲಿ ಅದಕ್ಕೆ ಪೂರಕವಾಗಿ ವ್ಯವಸ್ಥೆಯಾಗಲಿ ಎಂಬ ಅಂತರಂಗದ ಬಯಕೆ ಹೊಂದಿದ್ದ ಧೀಮಂತ ಕೆಂಗಯ್ಯ (ಉ) ಮಾಟಯ್ಯ, ಚನ್ನೇಗೌಡರು ಬೆಳೆಸಬೇಕೆಂದಿರುವ ವನ ಬೆಳವಣಿಗೆಯಲ್ಲಿ ಗಿಡಗಳನ್ನು ಬೆಳೆಸಿ ತನ್ನ ಕಾಯ ಸವೆಸಬೇಕೆಂದಿರುವ ಉಪಾದ್ರಿ ಚನ್ನೇಗೌಡರ ಊಳಿಗ ಲಕ್ಷೀಶೆಟ್ಟಿ, ಪಟೇಲರ ಮಗಳು, ಉಪಾದ್ರಿ ಚನ್ನೇಗೌಡರ ಹೆಂಡತಿ, ನಾಲ್ಕು ಗಂಡು ಮಕ್ಕಳ ತಾಯಿ, ಇವರ ಹಿರಿಯ ಮಗ ಈ ಲೇಖನದ ಕೇಂದ್ರವ್ಯಕ್ತಿ ಸಿ.ಚನ್ನೇಗೌಡ ಇವರನ್ನು ಕಂಡರೆ ಎಲ್ಲಿಲ್ಲದ ಮಮಕಾರ ಹೊಂದಿದ್ದ ದೊಡ್ಡಮ್ಮ ಹೃದಯ ಶ್ರೀಮಂತಿಕೆಯಲ್ಲೂ ಈಕೆ ದೊಡ್ಡವಳೇ, ಉಪಾದ್ರಿ ಚನ್ನೇಗೌಡರ ಸೊಸೆ ಸಿ. ಚನ್ನೇಗೌಡರ ಪತ್ನಿ ಮತ್ತು ತನ್ನ ಗಂಡನನ್ನು ಮಹಾನ್ ಪುರುಷನನ್ನಾಗಿ ರೂಪಿಸಿದ ರೂವಾರಿ, ಅಪ್ರತಿಮ, ಧೀಮಂತೆ ಪುಟ್ಟಮ್ಮ, ವಿದ್ಯೆಯ ಮಹತ್ವವರಿಯದ ಕಾಲದಲ್ಲಿ ಶಿಕ್ಷಣದ ಮಹತ್ವವನ್ನರಿತು ತಾಪತ್ರಯಗಳ ನಡುವೆಯೂ ಪದವಿಯನ್ನು ಮುಗಿಸಿ ವೃತ್ತಿಯಲ್ಲಿ ಸಹೋಪಾಧ್ಯಾಯರಾದ ಕೆ. ನಂಜೇಗೌಡ(ಮೇಷ್ಟ್ರು)ರು ವಯಸ್ಕರಿಗೆ ರಾತ್ರಿ ಶಾಲೆಯನ್ನು ನಡೆಸಿದರು. ಜೀವನದಲ್ಲಿ ಸಂತೃಪ್ತಿಯನ್ನೊಂದಿದ್ದ ಇವರ ಸೇವೆಯನ್ನು ಗಮನಿಸಿದ ಸರ್ಕಾರ 05–09–86 ರಂದು ರಾಜ್ಯಮಟ್ಟದ ಉತ್ತಮ ಶಿಕ್ಷಕನೆಂದು ಗೌರವಿಸಿ ಸನ್ಮಾನಿಸಿತು. ಹೀಗೆ ಹಿರಿಹಳ್ಳಿ ಗ್ರಾಮದ ಪ್ರಮುಖ ವ್ಯಕ್ತಿಗಳ ವ್ಯಕ್ತಿತ್ವ ಮತ್ತು ಚಿಂತನೆ, ಕೊಡುಗೆಗಳನ್ನು ಲೇಖನದುದ್ದಕ್ಕೂ ಪರಿಚಯಿಸುತ್ತಾ ಹೋಗುತ್ತದೆ. ಅಲ್ಲದೇ ಊರ ಪ್ರಮುಖರ ಕುರಿತು ಜನರ ಅಭಿಪ್ರಾಯಗಳನ್ನು ಸಂಗ್ರಹಿಸಿ ಅದನ್ನು ಈ ಲೇಖನದಲ್ಲಿ ಪ್ರಸ್ತುತಪಡಿಸಿದ್ದಾರೆ.

ಈ ಲೇಖನದಲ್ಲಿ ಭಾವಿ ನಾಯಕ ಮಣಿಗಳ ವ್ಯಕ್ತಿಗಳನ್ನು ಪರಿಚಯಿಸುತ್ತಾ ಭಾವೀ ರಾಷ್ಟ್ರ ನಿರ್ಮಾಣಕ್ಕಾಗಿ, ಹಳ್ಳಿ, ರೈತರ ಅಭಿವೃದ್ಧಿಗಾಗಿ ಮತ್ತು ಮಹಿಳೆಯರ, ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಉತ್ತಮ ಧ್ಯೇಯೋದ್ದೇಶಗಳನ್ನೊಳಗೊಂಡ ಹಲವಾರು ಸಹಕಾರ ಸಂಘ ಸಂಸ್ಥೆಗಳನ್ನು ಕಟ್ಟಿ ರೈತರನ್ನು ಪ್ರೇರೇಪಿಸಿ ಪ್ರೋತ್ಸಾಹಿಸಿದ್ದನ್ನು ಕಾಣಬಹುದು.

ನಗರದಲ್ಲಿ ಸರ್ಕಾರಿ ನೌಕರಿ ಹಿಡಿದಿದ್ದ ಸಿ. ಚನ್ನೇಗೌಡರು ವಿದ್ಯಾವಂತರೆಲ್ಲಾ ಹಳ್ಳಿ ಬಿಟ್ರೇ ಹಳ್ಳಿ ಕಥೆ ಹ್ಯಾಂಗ್ರೋ? ಎಂಬ ತಂದೆಯ ಮಾತು ಅವರ ಆಲೋಚನೆಯ ದಿಕ್ಕನ್ನೇ ಬದಲಿಸಿತು. ಪರಿಣಾಮವಾಗಿ ಹಳ್ಳಿ ಜನರ ಉದ್ಧಾರಕ್ಕಾಗಿ ಸಾಕಷ್ಟು ನವನವೀನ ಕಾರ್ಯಯೋಜನೆಯನ್ನು ತನ್ನ ಪ್ರಾಮಾಣಿಕತೆ ಮತ್ತು ನಿಷ್ಠೆಯಿಂದ ಕೈಗೊಂಡರು. ಲೋಕಮಾನ್ಯ ತಿಲಕ್ ಅವರು ಅಂದು ಹೇಳಿದ "ಸ್ವರಾಜ್ಯ ನಮ್ಮ ಜನ್ಮ ಸಿದ್ಧ ಹಕ್ಕು" ಎಂಬ ಹೇಳಿಕೆಯನ್ನು ಇಂದು "ಸುರಾಜ್ಯ ನಮ್ಮ ಆಜನ್ಮ ಸಿದ್ಧ ಹಕ್ಕು" ಎಂದು "ಸ್ವರಾಜ್ಯ"ವನ್ನು "ಸುರಾಜ್ಯ"ವನ್ನಾಗಿ ಪರಿವರ್ತಿಸಬೇಕಾಗಿದೆ ಎಂದು ತಮ್ಮ ಹೊಸ ಪಕ್ಷಕ್ಕೆ "ಸುರಾಜ್ಯ ಪಕ್ಷ" ಎಂದು ಹೆಸರಿಟ್ಟರು. ಚನ್ನೇಗೌಡರ ಅನೇಕ ಕೆಲಸಗಳ ಉಸ್ತುವಾರಿಯನ್ನು ವಹಿಸಿಕೊಳ್ಳುತ್ತಿದ್ದ ಶ್ರೀಕಂಠಪ್ಪ (ಉ) ಗಿಡ್ಡೇಗೌಡ ಚನ್ನೇಗೌಡರ ಖಾಸಾ ಶಿಷ್ಯ. ಯಾವೊಂದು ಪ್ರಲೋಭನೆಯನ್ನು ಒಡ್ಡದೆ (ಹೆಂಡ, ಹಣ ಆಧಾರದ ಆಮಿಷ) ಮತವನ್ನು ಯೋಗ್ಯರಿಗೆ ಮಾತ್ರ ಕೊಡಿ ಎಂದು ಹೇಳಿ ನಿರ್ಬಂಧ ಹೇರದೆ ಗೆದ್ದು ಬಂದ ಮಹಾನ್ ಚೇತನ ಶ್ರೀ ಸಿ. ಚನ್ನೇಗೌಡರು. ಇದನ್ನು ಇಂದಿನ ಎಲ್ಲಾ ಪಕ್ಷಗಳು ಗಮನಿಸಬೇಕಾದ ವಿಚಾರವಿದು.

ಈ ಲೇಖನದಲ್ಲಿ ಮಧ್ಯಾಹ್ನ ಪ್ರೌಢಶಾಲಾ ಮಕ್ಕಳಿಗೆ ಪುಕ್ಕಟೆ ಊಟದ ವ್ಯವಸ್ಥೆ, ಜಾತಿ ಮತ ಬೇಧವಿಲ್ಲದೇ ಸಹಪಂಕ್ತಿ ಬೋಜನ, ಮರ ಬೆಳೆಸಿದರೆ ಧನ ಸಹಾಯ, ವಯಸ್ಕರಿಗೆ ರಾತ್ರಿ ಶಾಲೆ ಇದುದ್ದನ್ನು ಕಾಣಬಹುದು. ಮಾತಿಗೊಂದು ಗಾದೆ ಹೇಳುವ ನೈಪುಣ್ಯ ಜನರಿಗೆ ಕರಗತವಾಗಿದ್ದರಿಂದ ಸಾಕಷ್ಟು ಗಾದೆಗಳನ್ನು ಬಳಸಿಕೊಂಡಿರುವುದನ್ನು ಕಾಣಬಹುದು ಜೊತೆಗೆ "ಯೌವ್ವನದ ರೋಗಕ್ಕೆ ಮದುವೆ ತಾ ಮದ್ದಲ್ವೆ" ಎಂಬ ಕುವೆಂಪು ಹೇಳಿಕೆಯು ಸಂದರ್ಭಕ್ಕನುಸಾರವಾಗಿ ಬಳಸಿಕೊಂಡಿದ್ದಾರೆ. ಇಲ್ಲಿ ಜನರು ವ್ಯವಸಾಯ ಮತ್ತು ವ್ಯವಹಾರ ಎರಡರಲ್ಲೂ ನಿಸ್ಸೀಮರು. ಹಾಸನಕ್ಕೆ ಬಸ್ಸಿನಲ್ಲಿ ಹೋಗುವಾಗ ಜೋಡಿಕಟ್ಟೆ ಪ್ರಸಂಗ, ಒಬ್ಬ ಯೋಗ್ಯ ಎಮ್ಮೆ ಹಿಂದಿರುಗಿಸಿದ ಪ್ರಸಂಗ ಇನ್ನೂ ಅನೇಕ ಆಸಕ್ತಿ ಮತ್ತು ಆಶ್ಚರ್ಯದಾಯಕ ಹಾಸ್ಯ ಪ್ರಸಂಗಗಳು ಲೇಖನಕ್ಕೆ ಪೂರಕವಾಗಿ ಬರುತ್ತವೆ. ಅನಕ್ಷರತೆಯನ್ನು ತೊಲಗಿಸಿ ಔದ್ಯೋಗಿಕ ಶಿಕ್ಷಣದ ಅಗತ್ಯ, ಮದ್ಯಪಾನ ನಿರ್ಮೂಲನ, ನೈತಿಕ ಗುಣಮಟ್ಟದ ವ್ಯಕ್ತಿತ್ವವುಳ್ಳ ನಾಯಕರುಗಳ ತಯಾರಿ ಹೀಗೆ ಇನ್ನೂ ಅನೇಕ ಅಂಶಗಳನ್ನೊಳಗೊಂಡ ಅಧ್ಯಯನವಾಗಿದೆ. ಇವರ ಬರವಣಿಗೆಯನ್ನು ಸದಾ ಪ್ರೋತ್ಸಾಹಿಸುವ ಡಾ. ಹಿ. ಶಿ. ರಾಮಚಂದ್ರೇಗೌಡ ಅವರು ತಮ್ಮ ಪ್ರೀತಿಯ ಮಾತು ಎಂಬ ಅಂದವಾದ ಮುನ್ನುಡಿಯಲ್ಲಿ ಗಿರಿರಾಜ್ ಅವರು ಮಾನವ ಪ್ರೇಮಿ, ಹೊಸ ಸಂಸ್ಕೃತಿ ಮತ್ತು ಹೊಸ ಜೀವನದ ಬಗ್ಗೆ ಆಸೆಯುಳ್ಳ ಹೃದಯವಂತ ಸಾಹಿತಿ ಮಾತ್ರ ಇಂಥ ಹೊಸ ಇತಿಹಾಸವನ್ನು ಸೃಷ್ಟಿಸಬಲ್ಲರು ಎಂದು ಅವರ ಪ್ರಯತ್ನಕ್ಕೆ ಶುಭಕೋರಿ ಆಶೀರ್ವದಿಸಿದ್ದಾರೆ.

ಇಡೀ ಕಥೆ ಲೇಖಕರ ವಿವರಣೆ ಮತ್ತು ಕೇಂದ್ರಪಾತ್ರದೊಂದಿಗಿನ ಆತನ ಸಂವಾದದ ರೂಪದಲ್ಲಿ ಪ್ರಕಟಗೊಳ್ಳುತ್ತದೆ. ಇಲ್ಲಿ ಪಾತ್ರಗಳು ಮತ್ತು ಸನ್ನಿವೇಶಗಳು ಹಲವು ನವನವೀನತೆಗಳೊಂದಿಗೆ ಭೂತ ಮತ್ತು ವರ್ತಮಾನಗಳ ನಡುವೆ ಜೀಕುತ್ತಾ ಸಾಗುತ್ತದೆ. ಒಬ್ಬ ರೈತನ ಮಗನಾದ ಗಿರಿರಾಜ್ ಅವರಿಗೆ ಇಲ್ಲಿಯ ಸಮಸ್ತರ ನಡುವಳಿಕೆಗಳ ಬಗ್ಗೆ ಕುತೂಹಲ ಉಳ್ಳವರಾಗಿದ್ದರು. ಕೆಲವೊಂದು ವಿಚಾರಗಳಲ್ಲಿ ಬ್ರಹ್ಮಾಂಡವನ್ನೇ ಸೀಳಿ ನೋಡಿ ಸೂರ್ಯ, ಚಂದ್ರ, ನಕ್ಷತ್ರ, ಗ್ರಹಗಳನ್ನು ಅಲ್ಲಾಡಿಸುವ ನಾವು ಕೆಲವು ವಿಚಾರಗಳನ್ನು ಅವುಗಳ ಪ್ರಾಚೀನ ರೂಪಕ್ಕೆ ಮುಕ್ಕಾದಂತೆ ನೋಡಿಕೊಂಡಿದ್ದೇವೆ ಎನಿಸಿ ಖೇದವೆನಿಸುತ್ತದೆ. ಹೀಗೆ ಕಥೆ ನನ್ನಂತೆ ಹಲವು ಓದುಗರ ಮನಸ್ಸನ್ನು ಕಲಕುವಲ್ಲಿ ಮತ್ತು ಆಲೋಚನೆಗೆ ಹಚ್ಚುವಲ್ಲಿ ಯಶಸ್ವಿಯಾಗಿದೆ. ಮಿತ್ರ ಸಂಹಿತೋಪಾದಿಯಲ್ಲಿ ನಿರೂಪಿಸುವ ಇವರ ಶೈಲಿ ಅವರದೇ ಆದ ವೈಚಾರಿಕ ಅಂಕಣಗಳ ಬರಹಗಳಿಗಿಂತಲೂ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ.

ಈ ಕಥೆ ಮನುಷ್ಯನ ಮನಸ್ಸಿನ ಸೂಕ್ಷ್ಮಗಳ ಜೊತೆ ಬೆಳೆಯುವ, ಆದರ್ಶ ರೂಪದ ಮಾನವನ ನಡೆಯನ್ನು, ಮಿತ್ರ ಸಂಹಿತೆಯ ಮಾದರಿಯಲ್ಲಿ ಜನರನ್ನು ತಿದ್ದುವ ಪ್ರಯತ್ನವನ್ನು ಕುರಿತು ಹೇಳುವ ಕಥೆಯಾಗಿದೆ. ಒಟ್ಟಾರೆ ಈ ಕಥೆ ಕೇವಲ ಒಂದು ಅಧ್ಯಯನವಾಗಿರದೇ ರೈತಾಪಿ ವರ್ಗ ಮತ್ತು ರಾಜಕೀಯ ಮೀಮಾಂಸೆಯನ್ನು ಕುರಿತು ಚರ್ಚಿಸುವ ಒಂದು ತತ್ವಶಾಸ್ತ್ರವಾಗಿಯೂ ಗೋಚರಿಸುತ್ತದೆ.

**ಆಕರ ಗ್ರಂಥ**


- ಹೊನ್ನ ಶೆಟ್ಟಿಹಳ್ಳಿ ಗಿರಿರಾಜ್. (1987). *ಪಿರಿಹಳ್ಳಿಯ ಹತ್ತು ಸಮಸ್ತರು.* ಚೆನ್ನಲಿಂಗೇಶ್ವರ ಪ್ರಕಾಶನ.


**ಪರಾಮರ್ಶನ ಗ್ರಂಥಗಳು**


- ಹನಮಂತ ರಾವ ಬಿ ದೊಡ್ಡಮನಿ. (2020). ಜಾನಪದ ಜೀವನ ಮೌಲ್ಯ. ಶಾಂತಕುಮಾರ ಪ್ರಕಾಶನ.
- ಮೃತ್ಯುಂಜಯ ಹೊರಕೇರಿ. (1998). *ರೈತರ ಜಾನಪದ.* ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ.
- ನಾಗಮೋಹನ ದಾಸ್ ಹೆಚ್. (2020). *ಎನ್ ರೈತರ ಭದ್ರತೆ ದೇಶದ ಭದ್ರತೆ.* ಜನ ಪ್ರಕಾಶನ.
- ಪುರುಷೋತ್ತಮ ಬಿಳಿಮಲೆ. (2021). *ಅಮರ ಸುಳ್ಯದ ರೈತ ಹೋರಾಟ.* ಅಹರ್ನಿಸಿ ಪ್ರಕಾಶನ.
- ಶ್ರೀಯಾನ್. ಕೆ. ಆರ್. (2019). ಕರ್ನಾಟಕದ ರೈತ ಚಳುವಳಿಗಳು. ಕ್ರಿಯಾಮಾಧ್ಯಮ ಪ್ರೈ.ಲಿ.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.57 - 64
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ವಚನ ಸಾಹಿತ್ಯದಲ್ಲಿ ಸ್ತ್ರೀಪರ ಚಿಂತನೆಗಳು

**ಡಾ.ಕೆ.ಜಿ. ಚವಾಣ**

ಪ್ರಾಚಾರ್ಯರು ಹಾಗೂ ಕನ್ನಡ ಸಹ ಪ್ರಾಧ್ಯಾಪಕರು, ಎಸ್.ಜೆ.ಎಂ. ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜು, ತರೀಕೆರೆ, ಚಿಕ್ಕಮಗಳೂರು ಜಿಲ್ಲೆ

***Abstract:***

*ಹನ್ನೆರಡನೆಯ ಶತಮಾನದ ಸಂಧಿಕಾಲದಲ್ಲಿ ಪ್ರಾರಂಭವಾದ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಪ್ರಗತಿ ಮತ್ತು ಪರಿವರ್ತನೆಗಳು ವಚನಕಾರರ ಬದುಕಿನಲ್ಲಿಯೂ ಆಧುನಿಕತೆಯ ಹೊಸ ಗಾಳಿ–ಬೆಳಕಿನ ಪ್ರವೇಶವನ್ನು ಸಾಧ್ಯವಾಗಿಸಿದವು. ಶರಣ ಸಂಸ್ಕೃತಿಯ ಮೌಲ್ಯಾದರ್ಶಗಳನ್ನು ವಚನಕಾರ್ತಿಯರು ಸ್ವ–ಅಭಿವ್ಯಕ್ತಿಯ ಸ್ವರೂಪವನ್ನು ತಮ್ಮ ಬದುಕಿನ ಮೂಲಕ ನೀಡಿ ನಾಡಿಗೆ ಬೆಳಕಾದರು. ಧರ್ಮ, ವಚನಸಾಹಿತ್ಯ, ಅನುಭಾವ ಚಿಂತನೆ, ಆಧ್ಯಾತ್ಮದ ಹಂಬಲದಿಂದ ವಚನ ರಚನೆಯಲ್ಲಿ ತೊಡಗಿದರು. ಸ್ವಯಂಸಿದ್ಧ ವ್ಯಕ್ತಿತ್ವದ ಆಚಾರ ಸಂಪನ್ನರು ಕೌಟುಂಬಿಕ ಹೊಣೆಗಾರಿಕೆಯನ್ನು ನಿಭಾಯಿಸುತ್ತ ಅಲ್ಪ ತೃಪ್ತಿಗೆ ಅಂಟಿಕೊಳ್ಳದೆ ತಮ್ಮ ತಮ್ಮ ಅಂತರಾತ್ಮದ ಹಸಿವೆಯನ್ನು ಅರಿತು ರೂಢಿಸಿಕೊಂಡರು. ವ್ಯಕ್ತಿತ್ವ, ಅಸ್ತಿತ್ವ ಮತ್ತು ಅಸ್ಮಿತೆಯನ್ನು ಸಾಮಾಜಿಕ ಧಾರ್ಮಿಕ ನೆಲೆಯಲ್ಲಿ ಪುರಸ್ಕರಿಸಿದ ಶರಣ ಸಂಸ್ಕೃತಿಯು ವಚನಕಾರ್ತಿಯರನ್ನು ವಿಚಾರ ಪತ್ನಿಯಾಗಿ ಗೌರವಿಸಿದುದು ಜಾಗತಿಕ ಚರಿತ್ರೆಯಲ್ಲಿಯೇ ಅನನ್ಯವಾದುದು.*

***Keywords:*** *ವಚನ ಸಾಹಿತ್ಯ, ಶಿವಶರಣರು, ಸ್ತ್ರೀಪರ ಚಿಂತನೆ, ಅಕ್ಕಾಮಹಾದೇವಿ.*

**ಪೀಠಿಕೆ**

ಅಬಲೆ ಆಶ್ರಯಿತೆ ಕನಿಷ್ಠೆಯೆನ್ನುವ ಶತಮಾನಗಳ ಸಾಂಪ್ರದಾಯಿಕ ಸ್ತ್ರೀ ಪ್ರತೀಕವನ್ನು ಒಡೆದು ಸ್ತ್ರೀತ್ವವನ್ನು ಆತ್ಮಚೈತನ್ಯವಾಗಿ "ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ" ಎನ್ನುವ ಅತ್ಯುನ್ನತ ನೆಲೆಯಲ್ಲಿ ವ್ಯಾಖ್ಯಾನಿಸಿದ ಶರಣೆಯರ ಜೀವಪರ ಕಾಣ್ಕೆಯ ಫಲವಾಗಿ ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ ಹಡಪದಲಿಂಗಮ್ಮ ಲಕ್ಕಮ್ಮ, ಸತ್ಯಕ್ಕ, ಮುಕ್ತಾಯಕ್ಕ, ಅಕ್ಕನಾಗಮ್ಮ, ಮೋಳಿಗೆಯ ಮಹಾದೇವಿಯಮ್ಮನಂಥ ಸ್ತ್ರೀ ಚೈತನ್ಯಗಳು ಪ್ರಕಟಗೊಂಡವು. ಸಾಮರಸ್ಯ ದಾಂಪತ್ಯದ ಸಿದ್ಧ ಸೂತ್ರದಲ್ಲಿಯೂ ತಮ್ಮ ಅನನ್ಯತೆಯನ್ನು ಕಂಡುಕೊಂಡು ಸ್ತ್ರೀತ್ವಕ್ಕೆ ಹೊಸ ವ್ಯಾಖ್ಯಾನವಾಗಿ ಬೆಳೆದರು. 12ನೇ ಶತಮಾನದಲ್ಲಿ ಮೊದಲ ಬಾರಿಗೆ ಶಿಷ್ಟಸಾಹಿತ್ಯ ವಾಹಿನಿಯಲ್ಲಿ ಕಾಣಿಸಿಕೊಂಡ ಶರಣೆಯರ ಸಾಹಿತ್ಯಾಭಿವ್ಯಕ್ತಿಯ ಮುಂದಿನ ಶತಮಾನಗಳಲ್ಲಿ ಬಹುಮಟ್ಟಿಗೆ ಗುಪ್ತಗಾಮಿನಿಯಾಗಿದೆ. ಕಳೆದ ಶತಮಾನ ಮಹಿಳಾ ಸೃಜನಶೀಲತೆಗೆ ಶಕ್ತಿ ಸಂಚಯವಾದ ಕಾಲ. ವಚನಕಾರ್ತಿಯರ ವೈಚಾರಿಕತೆಯನ್ನು ಪ್ರಭಾವಿಸಿರುವ ವಿಭಿನ್ನ ಆಲೋಚನಾಕ್ರಮಗಳು ಕನ್ನಡ ಮಹಿಳೆಯರ ಆಲೋಚನೆ ಮತ್ತು ಅಭಿವ್ಯಕ್ತಿಯನ್ನು ಪ್ರಭಾವಿಸಿವೆ.

ಪ್ರಪಂಚ ಪಾರಮಾರ್ಥವೆರಡನ್ನೂ ಪ್ರವೇಶಿಸಿದ ವಚನಕಾರ್ತಿಯರ ಪರಂಪರೆ ಮನ–ಮತಿಗೆ

***Please cite this article as:*** ಚವಾಣ ಕೆ.ಜಿ. (2024). ವಚನ ಸಾಹಿತ್ಯದಲ್ಲಿ ಸ್ತ್ರೀಪರ ಚಿಂತನೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 2(6), 57–64.

ಬೆಳಕನ್ನಿತ್ತು ಒಳ–ಹೊರಗೊಂದಾಗಿ ಆಡಿದ ಮಾತು ವಚನ ಎನ್ನುವ ಶರಣರಿಗೆ ವಚನ ಆತ್ಮ–ಪರಮಾತ್ಮ ಅನುಸಂಧಾನದ ಕುರುಹು ಆಗಿದೆ. ಪ್ರಪಂಚವೇ ಕೊಳದೊಳಗಿಳಿದುಪಾರಮಾರ್ಥದ ಶ್ರೀಗಿರಿಯನೇರಲು ಹವಣಿಸುವ ಆಧ್ಯಾತ್ಮಿಕ ಪಯಣದ ಸಂಕಟಗಳನ್ನು ದಿಗ್ದರ್ಶಕ ಗುರುಶಕ್ತಿಯ ಅನುಗ್ರಹವನ್ನು ಹಾರೈಸುವ ವಚನಗಳಲ್ಲಿ ಭಕ್ತಹೃದಯದ ಆರ್ತತೆ ಅಭಿವ್ಯಕ್ತಿಯಾಗಿದೆ. ಭಾವ ಭಾಷೆಯ ಹದಗಾರಿಕೆಯಲ್ಲಿ ಸತ್ವಪೂರ್ಣವಾಗಿರುವ ಹಲವಾರು ವಚನಗಳು ಸ್ವಾನುಭವದ ಮಿಡಿತಗಳನ್ನು ಶರಣ ಸಂಸ್ಕೃತಿಯ ಒಲವು ಮತ್ತು ಜೀವನಾನುಭವದ ಉತ್ಕಟ ಕ್ಷಣಗಳನ್ನು ಸಾರ್ಥಕವಾಗಿ ಪಡಿಮೂಡಿಸಿದೆ. ವಚನಗಳು ಲಯ, ವಿನ್ಯಾಸ, ಭಾಷೆ ಮತ್ತು ರಾಚನಿಕ ಲಕ್ಷಣಗಳನ್ನು ಒಳಗೊಂಡಿವೆ. ಧರ್ಮ, ಸಂಸ್ಕೃತಿ ಚಿಂತನೆ ಸಮಾಜದ ವಿಮರ್ಶೆ ಆತ್ಮ ಸಾಕ್ಷಿಯ ನುಡಿಯಾಗಿದ್ದು ಕ್ರಿಯಾಯೋಗವಾಗಿದೆ. ನಡೆನುಡಿ ಸಾಮರಸ್ಯದ ಸಂಕೇತವಾಗಿದ್ದು ಬುದ್ಧಿ ಭಾವ ಪ್ರಜ್ಞೆಯನ್ನು ಕತ್ತಲೆಯಾಗಿಸಿದ ತಮಂಧದ ಕೊಳೆಯನ್ನು ಕಳೆದು ಒಳಗಣ್ಣನ್ನು ಹೊಳೆಯಿಸಿ ಪಾರಮಾರ್ಥದ ಬೆಳಗನಿತ್ತ ಅನನ್ಯ ಕೃತಜ್ಞತೆ ಮತ್ತು ಭಕ್ತಿಯಿಂದ ಸ್ಮರಿಸುವ ಹಲವಾರು ವಚನಗಳು ಗುರುಭಕ್ತಿಯನ್ನುಪರಿಚಯಿಸುತ್ತವೆ. ಗುರುಸ್ಮರಣೆಯಷ್ಟೇ ಪ್ರಿಯವಾದುದು ಗುರುಸ್ತುತಿ ತಮ್ಮ ಆಧ್ಯಾತ್ಮಿಕ ಆಸಕ್ತಿಯನ್ನು ಪೋಷಿಸಿ ಮಾರ್ಗದರ್ಶನ ನೀಡಿದ ಶರಣರು ಶಿವಯೋಗಸಿದ್ದಿ, ಶಿಷ್ಯವಾತ್ಸಲ್ಯ ಮತ್ತು ಸಾಮಾಜಿಕ ಕಳಕಳಿಯನ್ನು ಹಲವಾರು ವಚನಗಳಲ್ಲಿ ಸ್ಮರಿಸಿದ್ದಾರೆ "ಹರಿದಾಡುವ ಮನವ ನಿಲ್ಲಿಸಿ ಘನವಾಗಿರಿಸಲು" ಗುರುವಿನ ಅನುಗ್ರಹ ಕೋರಿದ್ದಾರೆ. ಪ್ರಾಪಂಚಿಕ ಸುಳಿಗಳಲ್ಲಿ ಸಂಚಲನಗೊಂಡಿರುವ ಮನಸ್ಸನ್ನು ಲಿಂಗಭಕ್ತಿಯ ಏಕಾಗ್ರತೆಯಲ್ಲಿ ಸ್ಥಿರವಾಗಿರಿಸುವಂತೆ ಮೊರೆಯಿಟ್ಟಿದ್ದಾರೆ "ಶಿವನ ನಂಬುಗೆ ಇಲ್ಲದೆ ಮನ ನಿಲ್ಲದಯ್ಯ ಮನ ನಿಲ್ಲದೆ ನಿನ್ನೊಲುಮೆ ಎಂತಯ್ಯಾ ನಿಜ ನಂಬುಗೆ ಇಲ್ಲದೆ ಮನ ನಿಲ್ಲದಯ್ಯ ಎನ್ನುವ ಶರಣರಿಗೆ ಗುರು ಕರುಣೆಯಲ್ಲಿ ಅಪಾರ ನಂಬಿಕೆಯಿದೆ ಆ ನಂಬಿಕೆ ಅವರ ಸಾಧಕ ಜೀವನದ ಸುಳಿಗಳಿಂದ ಅವರನ್ನು ಪಾರುಮಾಡಿದೆ.

ಗುರುಕರುಣೆಗೆ ಜಾತಿ–ಮತ–ಪಂಥ, ಬಡವ–ಬಲ್ಲಿದ, ಸ್ತ್ರೀ–ಪುರುಷರೆಂಬ ತಾರತಮ್ಯಗಳಿಲ್ಲ ಭಕ್ತಿ, ಪ್ರೀತಿ ಸಮರ್ಪಣೆ ವಿನಯ ಗುಣಗಳು ಗುರುಕಾರುಣ್ಯ, ಸಂಪಾದನೆಯ ಮಹಾ ಮಾರ್ಗಗಳೆನ್ನುವುದು ಶರಣರ ನಂಬಿಕೆ ಹುಟ್ಟು–ಸಾವು, ಆಸೆ–ನಿರಾಸೆಗಳ ಪರಿಭ್ರಮಣದಿಂದ ಪಾರು ಮಾಡುವಂತೆ ನಿವೇದಿಸಿಕೊಳ್ಳುವ ವಚನಗಳಲ್ಲಿ ಭವ–ಬಾಧೆಯ ಆವರ್ತನಗತಿಯನ್ನು 'ತೂಗುವ ತೊಟ್ಟಿಲು ಜೀಕುವ ಜೋಕಾಲಿ'ಗೆ ಹೋಲಿಸಿರುವುದು ವಿನೂತನವಾಗಿದೆ. ತೂಗುವ ಕೈಯೊಂದು ಸಕಲ ಜೀವಜಾಲವನ್ನು ನಿಯಂತ್ರಿಸುತ್ತದೆನ್ನುವ ಭಾವ ಗಮನಾರ್ಹ. ಅನುಭಾವದ ಅಂತರಂಗ ವಿದ್ಯೆಗಾಗಿ ಹಂಬಲಿಸುವ ಸಾಧಕ ಜೀವಿಯ ಆತಂಕ ಆತ್ಮ ನಿವೇದನೆಯನ್ನೊಳಗೊಂಡ ಭಾವಪೂರ್ಣ ವಚನಗಳು ಆಧ್ಯಾತ್ಮಿಕ ಹಂಬಲವನ್ನು ಪರಿಣಾಮಕಾರಿಯಾಗಿ ಬಿಂಬಿಸುತ್ತವೆ. ಪರಮಾತ್ಮನನ್ನು 'ನಲ್ಲ'ನಾಗಿ ಆರಾಧಿಸುವ ಮಧುರಭಕ್ತಿಯಲ್ಲಿ ಜೀವಾತ್ಮ ನಲ್ಲೆ ಮಲ್ಲಿಕಾರ್ಜುನನನ್ನು ಗಂಡನಾಗಿ ಆರಾಧಿಸಿದ ಅಕ್ಕಮಹಾದೇವಿ 'ಶರಣ ಸತಿ ಲಿಂಗಪತಿ' ಭಕ್ತಿ ಮಾರ್ಗದ ಸರ್ವಶ್ರೇಷ್ಠ ಮಾದರಿ ಗಂಡನ ಬರುವಿಕೆಗಾಗಿ ಮೈಯೆಲ್ಲ ಕಣ್ಣಾಗಿ ಕಾತರಿಸಿ ಹಂಬಲಿಸಿ ಹಾರೈಸಿ ಪರಿ ಪರಿಯಾಗಿ ಪ್ರೀತಿ ನೀವೇದನೆ ಮಾಡಿಕೊಳ್ಳುವ ಅಕ್ಕನ ವಚನಗಳಲ್ಲಿ ದಾಂಪತ್ಯ ಪ್ರೇಮದ ಶೃಂಗಾರ, ವಿರಹ, ಸರಸ, ವಿರಸಗಳ ಆಕರ್ಷಕ ಪ್ರಪಂಚವಿದೆ, ಭಕ್ತಿಹೃದಯದ ಈ ವಿಶಿಷ್ಟ ಮನಸ್ಥಿತಿಯನ್ನು ಚಿತ್ರಿಸುವ ಅಕ್ಕಮಹಾದೇವಿಯ ವಚನಗಳು "ಕಾಲನ ಕರೆಯ ಬರುವ ಮುನ್ನ" ಒಮ್ಮೆಯಾದರೂ ನಲ್ಲನನ್ನು ದರ್ಶಿಸುವ ಉತ್ಕಟ ಅಪೇಕ್ಷೆಯಿಂದ ಕಾತರಿಸುವ ಜೀವಾತ್ಮನು ನಲ್ಲೆಯ ಭಾವಸ್ಥಿತಿಯನ್ನು ಕಾವ್ಯಮಯ ಶೈಲಿಯಲ್ಲಿ ಹಿಡಿದಿಟ್ಟಿದೆ ಅಹಂಕಾರ ಮಮಕಾರದ

ಕಳೆ–ಕೊಳೆ ಕಿತ್ತೊಗೆದಾಗ ಮಾತ್ರ ಅರಿವಿನ ಅವತರಣವಾಗುವುದು. ಕುಸುಬಿ ಮತ್ತು ಕಡಲೆ ಸಸ್ಯಗಳು ಚಿಗುರನ್ನು ಕತ್ತರಿಸಿದಾಗ ಪಲ್ಲವಿಸಿ ಬೆಳೆವಂತೆ ಮಲ್ಲಿಗೆ ಗುಲಾಬಿಯ ಗಿಡಗಳು ಕತ್ತರಿಸಿದಾಗ ಮೈತುಂಬ ಚಿಗುರೊಡೆಯುವಂತೆ ಪಕ್ವವಾದ ಹಣ್ಣು ತೊಟ್ಟು ಕಳಚಿ ಉದುರುವಂತೆ ಹಮ್ಮು ಬಿಮ್ಮನ್ನು ಕತ್ತರಿಸಿಕೊಂಡ ಪರಿಶುದ್ಧ ಜೀವನ ಪಕ್ವಗೊಂಡು ಪರಮಾತ್ಮನಿಗೆ ಸಮರ್ಪಿತವಾಗುತ್ತದೆ. ಲಿಂಗಭಕ್ತಿ ಧರ್ಮಶ್ರದ್ದೆ ಅನುಭಾವ ಚಿಂತನೆ ವೈಚಾರಿಕ ಅಂತಃಸತ್ವ ಆಧುನಿಕತೆಯ ಇತಿಮಿತಿಗಳನ್ನು ಪುರುಷಕೇಂದ್ರಿತ ಚಿಂತನೆಗಳ ಅಪಾಯಗಳನ್ನು ಅರಿತಿದ್ದಾರೆ, ಹೆಣ್ಣನ್ನು ಕೇಡಿನ ಮೂಲವಾಗಿ ಅಪಮಾನಿಸುತ್ತ ಹೆಣ್ಣಿನ ದೇಹವನ್ನು ಮೈಲಿಗೆಯಾಗಿಸಿರುವ ಸಾಂಪ್ರದಾಯಕ ವಿಚಾರಗಳನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಳ್ಳುವ ಶರಣೆಯರು ಸೃಷ್ಟಿಯ ಉಗಮವೆನ್ನುವುದನ್ನು ನೆನಪಿಸುತ್ತ ಹೆಣ್ಣನ್ನು ನೋಡುವ ಕಣ್ಣನ್ನು ಶುದ್ಧಗೊಳಿಸುವಂತೆ ಎಚ್ಚರಿಸಿದ್ದಾರೆ. "ಶಕ್ತಿ ಇರದ ಶಿವನು ಶವನಾದ ಹೆಣ್ಣನ್ನು ಹೀಗಳೆದು ದೂರ ಸರಿಯದೆ ನಿಮ್ಮ ಕಣ್ಣಿನೊಳು ಮಾತೆಯ ಮಮತೆಯನು ತುಂಬಿ ಕೊಳ್ಳಿರಿ ಪರಂಪರೆಯ ಶ್ರೇಷ್ಠ ಅಂಶಗಳನ್ನು ವೈಜ್ಞಾನಿಕ ಆವಿಷ್ಕಾರಗಳನ್ನು ಮನುಕುಲದ ಪ್ರಗತಿಗೆ ಪೂರಕ ಎಂದಿದ್ದಾರೆ. ವಿಷಯ ಸುಖದ ಆಕರ್ಷಣೆಯಲ್ಲಿ ಆತ್ಮತತ್ವವನ್ನು ಅಂತರಂಗದ ಬೆಳಕನ್ನು ಕಳೆದುಕೊಳ್ಳುತ್ತಿರುವುದಕ್ಕೆ ವಿಷಾದಿಸಿದ್ದಾರೆ". ಮಾತು ಮನಸ್ಸು, ನಡೆ, ನುಡಿ, ಆಚಾರ, ವಿಚಾರ ಭಿನ್ನವಾದ ಇಬ್ಬಂದಿತನವನ್ನು ಕಂಡು ಕೊರಗಿದ್ದಾರೆ. ಸ್ವಾರ್ಥ–ವಂಚನೆ–ಕುಟಿಲತನದ ವಿಜೃಂಭಣೆ ಮತ್ತು ದ್ವಿಮುಖ ವ್ಯಕ್ತಿತ್ವದ ಸೋಗಲಾಡಿತನಕ್ಕಾಗಿ ಹಳಹಳಿಸುವ ಸಾಮಾಜಿಕ ಸಂಸ್ಕೃತಿಯ ಅಂಧಾನುಕರಣೆಯ ಅಪಾಯಗಳನ್ನು ಗುರುತಿಸಿದ ಶಿವಶರಣೆಯರು ಶ್ರಮ ಸಂಸ್ಕೃತಿಯನ್ನು ಭೋಗ ಸಂಸ್ಕೃತಿಯಾಗಿ ಪರಿವರ್ತನೆಗೊಳ್ಳುತ್ತಿರುವುದಕ್ಕೆ ವಿಷಾದಿಸುತ್ತಾರೆ. ಆಧುನಿಕತೆಯು ಯಾಂತ್ರೀಕರಣದ ಫಲವಾಗಿ ದೇಹ ದುಡಿಮೆಯು ಅಪಮೌಲ್ಯಗೊಳ್ಳುತ್ತಲಿದ್ದು ಕೃಷಿ ಕೈಕಸುಬುಗಳು ವೃತ್ತಿ ಕೌಶಲ್ಯಗಳು ಮೂಲೆ ಗುಂಪಾಗುತ್ತಿವೆ. ಕೈಕೆಸರಾಗದೆ ಬಾಯಿ ಮೊಸರಾಗಿಸಿಕೊಳ್ಳುವ ಪಾಶ್ಚಾತ್ಯ ನೀತಿಯ ಪ್ರಭಾವದಲ್ಲಿ ಬುದ್ಧಿ ಮತ್ತು ದುಡಿಮೆಯ ಸಾಂಗತ್ಯ ತಪ್ಪಿ ಹೋಗಿದೆ, ವಿದ್ಯೆಯಿರುವ ಪಟ್ಟಣಿಗರಲ್ಲಿ ದುಡಿಮೆಯ ಪ್ರವೃತ್ತಿ ಕರಗುತ್ತ ಶ್ರಮರಹಿತ ಸಂಪಾದನೆಯ ಅಪೇಕ್ಷೆ ಹೆಚ್ಚುತ್ತಿದೆ, ನಾಗರಿಕ ಸೌಲಭ್ಯಗಳಿಲ್ಲದ ಅಸಂಖ್ಯಾತ ಹಳ್ಳಿಗರು ವಿದ್ಯೆಯುಳ್ಳ ಪಟ್ಟಣಿಗರ ಶೋಷಣೆ ತಂತ್ರಗಳಿಗೆ ಬಲಿಪಶುಗಳಾಗಿದ್ದಾರೆ. ಹೀಗೆ ವಿದ್ಯೆ ಮತ್ತು ದುಡಿಮೆಯ ತಾಳ ಮೇಳವಿಲ್ಲದ ಬಿರುಕು ಸಂಸ್ಕೃತಿಯ ಭರದಲ್ಲಿ ನರಳುತ್ತಿರುವ ಭಾರತೀಯರಲ್ಲಿ ವೃತ್ತಿಗೌರವದ ಭಾವನೆ ಜಾಗೃತಗೊಳ್ಳಬೇಕು. ವಿದ್ಯೆ–ದುಡಿಮೆ–ಸಂಪತ್ತು ಸರಿಸಮವಾಗಿ ಹಂಚಿಕೆಯಾಗಬೇಕೆನ್ನುವ ಆಶಯವು ಆಧುನಿಕ ಜನರ ದ್ವಂದ್ವ ವಾಸ್ತವವನ್ನು ಎತ್ತಿ ತೋರಿಸಿದೆ. ಅರಿವು ಮತ್ತು ಆಚಾರಶುದ್ಧಿ ಸಾಮರಸ್ಯ ಸಮಷ್ಟಿಯ ಕಾಳಜಿಯನ್ನು ವಚನಗಳಲ್ಲಿ ಎತ್ತಿ ತೋರಿಸಿದ್ದಾರೆ. ಸ್ವಾರ್ಥ–ಪ್ರತಿಷ್ಠೆ–ಸ್ವಜನ ಪಕ್ಷಪಾತಗಳಲ್ಲಿ ಧರ್ಮದ ಉದಾತ್ತ ಮೌಲ್ಯಗಳು ಮಾಯವಾಗುತ್ತಿರುವುದಕ್ಕಾಗಿ ವಿಷಾದಿಸುತ್ತಾ ಅನ್ಯಧರ್ಮಗಳಲ್ಲಿರುವ ಅನುಕರಣೀಯ ಸಂಗತಿಗಳ ಹಿನ್ನೆಲೆಯಲ್ಲಿ ಸ್ವಧರ್ಮದ ಸ್ರಂಗತಿಯನ್ನು ವಸ್ತುನಿಷ್ಠವಾಗಿ ಪರಾಮರ್ಶಿಸುತ್ತಾ ಆತ್ಮವಿಮರ್ಶೆಗೆ ತೊಡಗಿ ಸಮಾಜದ ಸಮಕಾಲೀನ ಸಾಮಾಜಿಕ, ಧಾರ್ಮಿಕ ಪರಿಸರದ ಅನಾರೋಗ್ಯಕರ ವಿದ್ಯಮಾನಗಳನ್ನು ವಸ್ತುನಿಷ್ಠವಾಗಿ ವಿಮರ್ಶಿಸಿಕೊಳ್ಳುವ ವೈಚಾರಿಕ ಎಚ್ಚರವನ್ನು ಕಾಯ್ದುಕೊಂಡಿದ್ದಾರೆನ್ನುವುದು ಗಮನಾರ್ಹ ಸಂಗತಿ. ಮೌಢ್ಯವನ್ನು ಪೋಷಿಸುತ್ತ ಸ್ವಾರ್ಥ ಸಾಧನೆಯಲ್ಲಿ ಆಸಕ್ತರಾಗಿರುವ ಗುರು–ಹಿರಿಯರ ಆಷಾಢಭೂತಿತನವನ್ನು ತರಾಟೆಗೆ ತೆಗೆದುಕೊಂಡಿದ್ದಾರೆ, ಸ್ವಪ್ರತಿಷ್ಠೆಗಾಗಿ ಅಡ್ಡಪಲ್ಲಕ್ಕಿ ಉದ್ದಪಲ್ಲಕ್ಕಿಯಲ್ಲಿ ಕುಳಿತು ಮುಗ್ಧಭಕ್ತರ ಹೆಗಲೇರಿ ಮೆರೆಯುವ ಗುರು–ವಿರಕ್ತರಿಗೆ ಶರಣರು ಹೇಳುವ

ಕಿವಿಮಾತು ಅವರ ನಿರ್ಭಿತ ವ್ಯಕ್ತಿತ್ವ ಮತ್ತು ಹರಿತವಾದ ವಚನಗಳೇ ನಿದರ್ಶನಗಳಾಗಿವೆ.

ಜೀವನಾನುಭವದ ವಿಭಿನ್ನ ವಿನ್ಯಾಸಗಳನ್ನು ಆತ್ಮ ವಿಮರ್ಶೆಯ ವಿವೇಕವನ್ನು ಆಧ್ಯಾತ್ಮ ಸಾಧನೆಯ ಉತ್ಕಟ ಭಾವಾನುಭಾವಗಳನ್ನು ಸುಪರಿಚಿತ ವಸ್ತು ಸಂಗತಿಗಳ ಮೂಲಕ ವಚನಗಳನ್ನಾಗಿಸಿರುವ ಶರಣರು ಜೀವನಾನುಭವದ ಸಂಕೀರ್ಣ ವಿವರಗಳನ್ನು ಅನುಭಾವದ ನಿಗೂಢ ನೆಲೆಗಳನ್ನು ಭಾಷೆಯ ಮಿತ ಮಾಧ್ಯಮದಲ್ಲಿ ಮೂರ್ತಗೊಳಿಸುವ ವಚನಗಳ ಸಾಂಕೇತಿಕ ಪರಿಭಾಷೆ, ಭಾವ ಸಂಕೀರ್ಣತೆ, ಪ್ರತಿಮೆ ಪ್ರತೀಕ ಅನನ್ಯ ರಚನೆಗಳು, ಸುಲಭ ಸಂವಹನಕ್ಕೆ ಭಾಷೆ ಮತ್ತು ಅರ್ಥ ಸಂದಿಗ್ಧತೆಯಲ್ಲಿ ಅರಳಿಕೊಳ್ಳುವ ವಿಶೇಷಾರ್ಥದ ನೆಲೆಗಳು ಸಾಮಾನ್ಯ ಓದುಗರಿಗೆ ನಿಲುಕುವಂತಹುದಲ್ಲ. ಶರಣರು ಸಾಧಕರೂ ಆಗಿರುವುದರಿಂದ ಅನುಭಾವ ಸಾಧನೆಯ ಆತಂಕ ತೊಳಲಾಟ ಇಷ್ಟಲಿಂಗ ಭಕ್ತಿ, ಆಧ್ಯಾತ್ಮ ಸಾಧನೆಯ ತೃಪ್ತಿ ವಚನಗಳ ಅನುಭವಲೋಕವನ್ನು ಕಟ್ಟಿಕೊಟ್ಟಿವೆ. "ಹಮ್ಮು ಹರಿವನಕ ಹರ ದೊರೆಯನಯ್ಯ ಹಮ್ಮು ಹರಿವನಕ ಇಂಬುಗೊಡೆ ನೀನು" ಎನ್ನುವ ಆತ್ಮ ವಿಮರ್ಶೆ ಅಣುರೇಣು ತೃಣದೊಳಗಿರುವವನು ನನ್ನೊಳಗೆ ಇರದಿಹನೇ?" ಎನ್ನುವ ಆತ್ಮ ಜಿಜ್ಞಾಸೆ ಬೆರೆದು ಬೇರಿಲ್ಲದಂತಿವುದೆಂದಿಗಯ್ಯ?" ಎನ್ನುವ ಸಮರಸದ ತವಕ "ಸಂಸಾರಿ ಶರಣನೆನಿಸುವನಯ್ಯ" ಎನ್ನುವ ಇಹ–ಪರ ಸಮನ್ವಯ ಶ್ರದ್ಧೆ ವಚನ ಸಾಹಿತ್ಯದ ಅಧ್ಯಯನ ಅನುಸಂಧಾನದ ಪರಿಶ್ರಮವಿರುವ ಧರ್ಮ ಮತ್ತು ಅನುಭಾವದ ಸೂಕ್ಷ್ಮ ಸೆಳಕುಗಳು ಮಿಂಚುತ್ತವೆ. ಶಿವಶರಣರ ಶಿವಶಕ್ತಿ ಸಂಯೋಗದಲ್ಲಿ ಸೃಷ್ಠಿಯ ಉತ್ಪತ್ತಿ ಶಿವಶಕ್ತಿಯ ಸಮ್ಮಿಲನದಲ್ಲಿ ಪರಶಿವನ ಅಸ್ತಿತ್ವ ಎನ್ನುವ ತಾತ್ವಿಕ ವಿಚಾರಗಳು ಕಂಡುಬರುತ್ತವೆ. ಗುರುಕೊಟ್ಟ ಇಷ್ಟಲಿಂಗವು ಅರಿವಿನ ಕುರುಹು ಆತ್ಮಲಿಂಗವು ಭಾವಲಿಂಗದ ಕಳೆ ಎನ್ನುವ ತಾತ್ವಿಕ ಚರ್ಚೆ ಅಲ್ಲಲ್ಲಿ ಕಂಡುಬರುತ್ತದೆ. ಭಾರತದ ಸಾಂಸ್ಕೃತಿಕ ಹಿರಿಮೆಯಲ್ಲಿ ಆಧ್ಯಾತ್ಮಿಕ ಸತ್ವ ಮತ್ತು ನೈತಿಕ ಶಕ್ತಿಯಲ್ಲಿ ಅಪಾರ ವಿಶ್ವಾಸವುಳ್ಳ ವರ್ತಮಾನದ ಮೌಲ್ಯ ಪತನವನ್ನು ಕಂಡು ನೊಂದಿದ್ದಾರೆ. ಭಾರತದ ಆಧ್ಯಾತ್ಮಿಕ ಚೈತನ್ಯ ಕಳಾಹೀನವಾಗುತ್ತಿದೆ. ಆತ್ಮಶಕ್ತಿ ಮಂಕಾಗುತ್ತಿದೆ. ಎನ್ನುವ ಕೊರಗು ಶೋಷಿತ ಜನ ಸಮುದಾಯದ ಉದ್ಧಾರದ ಕಳಕಳಿ ನೈತಿಕ ಶುದ್ಧಿ ಮತ್ತು ಮಾನವತಾವಾದಿ ಆಲೋಚನಾ ವಿಧಾನ ಪ್ರಗತಿ–ಪರಂಪರೆಯಲ್ಲಿ ದೇಹ–ಭಾವದ ಪ್ರಾಕೃತಿಕತೆ ಮತ್ತು ಪ್ರಾಪಂಚಿಕತೆಯ ತೊಳಲಾಟದಲ್ಲಿ ಅಂತರಾತ್ಮನನ್ನು ಕಾಣಲಾಗದೆ ದೀನವಾಗಿ ಮೊರೆಯಿಡುವ ಜೀವಾತ್ಮದ ಸಂಕಟ ಹಲವಾರು ವಚನಗಳಲ್ಲಿ ನಿರೂಪಿತವಾಗಿದೆ. ಅಹಂ ನಿರಸನದಲ್ಲಿ ಅನುಭಾವ ಸಾಧ್ಯ. ಭಕ್ತಿಯೆನ್ನುವುದು ಕೊಂಡುಕೊಳ್ಳುವ ವ್ಯವಹಾರವಲ್ಲ ಗುರುಕೃಪೆಯಿಂದ ಸರ್ವಾರ್ಪಣ ಭಕ್ತಿ ಮತ್ತು ಅಚಲ ನಿಷ್ಠೆಯಿಂದ ದೇವನೊಲುಮೆ ಸಾಧ್ಯವೆನ್ನುವ ವಿಚಾರಗಳನ್ನು ಬಿಂಬಿಸುವ ವಚನಗಳು ಭಾಷೆ, ರೂಪ, ವಿನ್ಯಾಸ, ಅರ್ಥವೃತ್ತಿಯ ಸತ್ವದಲ್ಲಿ ಬಸವಾದಿ ಶಿವಶರಣೆಯರು ಪರಮಾತ್ಮನ ಸೃಷ್ಠಿಯಲ್ಲಿ ಸತ್ಯ ಶಿವ ಸೌಂದರ್ಯದ ತತ್ವವಿದೆ. ಭೂಮಿ ಭಾನು ಸಮುದ್ರ ಕಾಡು ಬೆಟ್ಟ ಗುಡ್ಡಗಳೆಲ್ಲವೂ ಭಗವಂತನ ಭವ್ಯತೆ ರೌದ್ರತೆಯ ವಿರಾಟ್ ಸ್ವರೂಪವನ್ನು ಸಂಕೇತಿಸುತ್ತವೆ. ಪಂಚಭೂತಗಳಲ್ಲಿ ಪರಮಾತ್ಮ ತತ್ವವಿದೆ ಇದನ್ನು ಅನುಭವಿಸಿ ಆನಂದಿಸುವಲ್ಲಿಯೇ ಮಾನವ ಜನ್ಮದ ಸಾರ್ಥಕ್ಯವಿದೆ.

ಸ್ತ್ರೀ ಸ್ವಾತಂತ್ರ್ಯ ಸಮಾನತೆಯ ವಿಚಾರಗಳು ಜೀವವಿರೋಧಿಯಾಗದೆ ವ್ಯಕ್ತಿ ಮತ್ತು ಸಮಾಜದ ಅಂತಃಶಕ್ತಿಯನ್ನು ಸಂವರ್ಧಿಸುವ ಸೇತುವೆಗಳಾಗಬೇಕು "ತನ್ನ ತಾನರಿದು ತಾನೇ ತಾನಾದವ ಸರ್ವಸ್ವತಂತ್ರನಯ್ಯ ತನುವ ಹೊಲಿಗೆ ಬಿಚ್ಚಿ ಮನದ ಮೈಲಿಗೆ ಕಳೆದು ಕೊಳ್ಳುವುದೇ ನಿಜವಾದ ಸ್ವಾತಂತ್ರ್ಯ" ಎನ್ನುವ ವಿಚಾರಗಳು ಲೌಕಿಕ ಸ್ವಾತಂತ್ರ್ಯದ ಸೀಮೆಯನ್ನು 'ಆತ್ಮ' ಸ್ವಾತಂತ್ರ್ಯದ ಉನ್ನತ ನೆಲೆಗೆ ತಲುಪಿಸುತ್ತವೆ, ಪುರುಷ ಕೇಂದ್ರಿತ ಸಾಮಾಜಿಕ ವಿನ್ಯಾಸದಲ್ಲಿ ಒಳ–ಹೊರಗಿನ ಹೊಣೆಗಾರಿಕೆಗಳಲ್ಲಿ ಘಾಸಿಗೊಳ್ಳುತ್ತಿರುವ ಮಹಿಳೆಯರ ಶೋಷಣೆ ಕುರಿತು

ಅನೇಕ ವಚನಗಳಲ್ಲಿ ತೀವ್ರವಾಗಿ ಪ್ರತಿಕ್ರಿಯಿಸಿದ್ದಾರೆ, ಸ್ತ್ರೀಯರು ಕುಟುಂಬದಾಚೆಯ ಪ್ರಪಂಚದಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಿರುವುದರಿಂದ ಹೆಣ್ಣಿನ ಬದುಕಿನ ಆಯಾಮಗಳು ವಿಸ್ತರಿಸಿವೆ. ಅದಕ್ಕೆ ಅನುಗುಣವಾಗಿ ಕೌಟುಂಬಿಕ ಸಾಮಾಜಿಕ ರಚನೆಗಳು ಬದಲಾಗುತ್ತಿಲ್ಲ. ಹೊರಗೆ ದುಡಿಯುವ ಹೆಣ್ಣು ಕುಟುಂಬದಲ್ಲಿ ಸಾಂಪ್ರದಾಯಿಕ ಸತಿತ್ವ ಮತ್ತು ಮಾತೃತ್ವದ ಎಲ್ಲ ಹೊಣೆಗಳನ್ನೂ ನಿಭಾಯಿಸಲೇ ಬೇಕಾದ ಒತ್ತಡದಲ್ಲಿ ತೊಳಲಾಡುತ್ತಿದ್ದಾಳೆ. ಸಂಪ್ರದಾಯ ಪ್ರಿಯತೆಯಿಂದಾಗಿ ಹುಟ್ಟಿಕೊಳ್ಳುವ ಆರ್ಥಿಕ ಕೌಟುಂಬಿಕ ಸಮಸ್ಯೆಗಳನ್ನು ಮಾನವತಾವಾದಿ ಧೋರಣೆಗಳಿಂದ ಮಾತ್ರ ಕೊನೆಗಾಣಿಸಬಹುದೆನ್ನುವ ನಿರೀಕ್ಷೆಯಲ್ಲಿ ಅವರ ಸ್ತ್ರೀಪರ ಚಿಂತನೆಯ ನೆಲೆಯಿದೆ. ವಿಧವೆಯ ಬವಣೆಗಳನ್ನು ನೋವಿನಿಂದ ನಿರೀಕ್ಷಿಸಿದ್ದಾರೆ, ಹೆಣ್ಣನ್ನು ದೇವತೆಯೆಂದು ಸಾರುತ್ತಲೇ ಅವಳನ್ನು ಗುಲಾಮಳಾಗಿಸಿದ ವ್ಯವಸ್ಥೆಯ ಕೌರ್ಯವನ್ನು ನೆನಪಿಸುತ್ತ ಅವಳನ್ನು ಮಾನವಳನ್ನಾಗಿ ಕಂಡು ಮಾನವೀಯತೆ ತೋರಿದರೆ ಸಾಕು ಎಂದು ಕಿವಿಮಾತು ಹೇಳಿದ್ದಾರೆ. ವಾಣಿಜ್ಯ ಸಂಸ್ಕೃತಿಯಲ್ಲಿ ಮಾನವನ ಘನತೆ ಕಣ್ಮರೆಯಾಗಿ ದುಡ್ಡು ದೊಡ್ಡಪ್ಪನಾಗಿ ವಿಜೃಂಬಿಸಿದೆ. ಹಣ ಸಂಪಾದನೆಯ ಅಡ್ಡ ದಾರಿಗಳು ಮನುಷ್ಯರ ಆತ್ಮ ಸಾಕ್ಷಿಯನ್ನು ಹೊಸಕಿಹಾಕಿವೆ. ಬಸವಣ್ಣನಂತಹ ನಿಸ್ಪೃಹ ನ್ಯಾಯನಿಷ್ಠುರ ಪ್ರಾಮಾಣಿಕ ಮಂತ್ರಿಗಳಿದ್ದ ದೇಶದಲ್ಲಿ ಇಂದು ಭ್ರಷ್ಟಾಚಾರಕ್ಕೆ ಕಳಸದಂತಿರುವ ರಾಜಕಾರಣಿಗಳು ದೇಶವನ್ನೇ ದುಡ್ಡಿಗಾಗಿ ಮಾರುವುದನ್ನು ಖಾರವಾಗಿ ಟೀಕಿಸಿರುವಲ್ಲಿ ಅವರ ಸಾಮಾಜಿಕ ಕಾಳಜಿ ಇದೆ. ಜಾಗತೀಕರಣದ ಯಾಂತ್ರೀಕರಣದಲ್ಲಿ ಹೆಚ್ಚುತ್ತಿರುವ ನಿರುದ್ಯೋಗ ಬಡತನ ರೈತರ ಹತಾಸೆ ವ್ಯಾಪಾರಸ್ಥರ ವಂಚನೆ ದುಡಿವ ವರ್ಗದವರ ಗೋಳು ಸ್ವಾರ್ಥ ಸಂಸ್ಕೃತಿಯ ವಿನಾಶಗಳಿಗಾಗಿ ಕಳವಳಿಸಿದ್ದಾರೆ "ಹಣ ಹಣ ಹಣವೆನುತಿಹರಯ್ಯ ಹಣದ ಹೊಳೆ ಹರಿದರೂ ಸಾಲದಾಗಿದೆ. ನೋಡಾ ದುಶ್ಚಟಕೆ ಅನೀತಿಗೆ ಎಂದು ಹಳ್ಳಿಯಿಂದ ದಿಲ್ಲಿಯವರೆಗೆ ಹರಿಯುತ್ತಿರುವ ಭ್ರಷ್ಟತನವನ್ನು ತೀಕ್ಷ್ಣವಾಗಿ ಖಂಡಿಸಿದ್ದಾರೆ.

ಆಧುನಿಕತೆಯ ಕೊಡುಗೆಯಾಗಿರುವ ವೈಜ್ಞಾನಿಕ ಆವಿಷ್ಕಾರಗಳು ಸ್ತ್ರೀ ಸಂಸ್ಕೃತಿಯ ಸ್ವರೂಪವನ್ನು ವೇಗವಾಗಿ ಪ್ರಭಾವಿಸುತ್ತಿರುವುದನ್ನು ಗುರುತಿಸುವ ವಚನಕಾರರು ಸ್ತ್ರೀಧರ್ಮದ ಸ್ಥಾಪಿತ ಗ್ರಹಿಕೆಗಳನ್ನು ಬದಲಾಯಿಸುತ್ತಿರುವುದಕ್ಕಾಗಿ ಅಸಮಾಧಾನಗೊಂಡಿದ್ದಾರೆ. ಆದರ್ಶ ಗೃಹಿಣಿ ತ್ಯಾಗಮಯಿ ತಾಯಿ ಕುಟುಂಬಿನಿಯರ ಅನಿವಾರ್ಯತೆಯನ್ನು ಮನಗಂಡಿರುವ ಅವರು ಆಧುನಿಕತೆಯ ಜೀವವಿರೋಧಿ ಆಯಾಮಗಳ ಬಗೆಗೆ ನೀಡುವ ಎಚ್ಚರಿಕೆ ಮನನೀಯವಾಗಿದೆ. ವಚನಕಾರರ ಚಿಂತನಶೀಲ ಪ್ರವೃತ್ತಿ ಎದ್ದು ಕಾಣುತ್ತಿದ್ದು ಎಲ್ಲೆಲ್ಲಿಯೂ ಸಲ್ಲುವಂತಾಗಬೇಕೆನ್ನುವ ಶರಣರ ಜೀವನ ಶ್ರದ್ದೆ ಅಂತರಂಗದ ಶುದ್ಧಿ ಬಹಿರಂಗದ ಬದುಕು ಭವ್ಯವಾಗಬೇಕು. ಭಾವಶುದ್ಧಿ ಆಚಾರ, ವಿಚಾರ ಶುದ್ಧಿಯಿಂದ ಕೂಡಿದ ಬಾಳುವೆ ಪಾರಮಾರ್ಥ ಸಾಧನೆಯಷ್ಟೇ ಶ್ರೇಷ್ಠವಾದುದು. ಆತ್ಮತೃಪ್ತಿಯೇ ಇಹ–ಪರದ ಸರ್ವೋನ್ನತ ಸಂಪತ್ತೇನ್ನುವ ಜೀವನ ಪ್ರೀತಿಯಲ್ಲಿ ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಎನ್ನುವ ಶರಣರ ಜೀವನ ನಿಷ್ಠೆಯ ಅನುಸರಣವಿದೆ.

ವಚನಗಳನ್ನು ಸಾಹಿತ್ಯಿಕವಾಗಿ ಅಧ್ಯಯನ ಮಾಡುವಾಗ ಒಂದು ಮಾತನ್ನು ಅಗತ್ಯವಾಗಿ ನೆನಪಿಸಿಕೊಳ್ಳ ಬೇಕಾಗುತ್ತದೆ. ಅವುಗಳನ್ನು ಕೇವಲ ಧರ್ಮಶಾಸ್ತ್ರಗಳ ಕೃತಿಗಳೆಂದು ಕರೆಯುತ್ತಿದ್ದ ಕಾಲದಿಂದ ಹಿಡಿದು ಇಂದು ಜಗತ್ತಿನ ಶ್ರೇಷ್ಠ ಸಾಹಿತ್ಯ ಕೃತಿಗಳೆನ್ನುವವರೆಗೆ ಅವುಗಳ ಅಧ್ಯಯನ ಸಾಗಿ ಬಂದಿದೆ. ಈ ನಡುವೆ ವಚನಗಳನ್ನು ಸಾಹಿತ್ಯ ದೃಷ್ಟಿಯಿಂದಲ್ಲದೆ ಅನೇಕ ಮುಖಗಳಲ್ಲಿ ಅಂದರೆ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಚಾರಿತ್ರಿಕ, ಭಾಷಿಕ ಅಧ್ಯಯನದ ಆಕರಗಳೆಂದು ಅವಲೋಕಿಸುವ ಪ್ರಯತ್ನಗಳು ನಡೆಯುತ್ತಿದ್ದು ವ್ಯಕ್ತಿಯ ಅಂತರಂಗದ ಆಣವ, ಮಾಯಾ, ಕಾರ್ಮಿಕ, ಮಲಗಳಂತೆ

ಬಹಿರಂಗದ ವರ್ಣ, ವರ್ಗ, ಲಿಂಗಭೇದಗಳಂತಹ ಮಲತ್ರಯಗಳನ್ನು ನೀಗಿಕೊಳ್ಳುವುದಕ್ಕೆ ಅಂತರಂಗ ಬಹಿರಂಗದ ಶುದ್ಧಿಗೆ ವಿಶೇಷ ಮಹತ್ವವನ್ನು ನೀಡಿರುವುದು ಈ ಶುದ್ಧಿ ವ್ಯಷ್ಟಿ ಸಮಷ್ಟಿ ಎರಡರಲ್ಲೂ ಏಕಕಾಲಕ್ಕೆ ನಡೆಯಬೇಕೆಂಬುದು ಅವರ ವಿಚಾರವಾಗಿದೆ. ಸಾವಿರಾರು ವರ್ಷಗಳಿಂದ ಬೇರೂರಿದ ವರ್ಣವ್ಯವಸ್ಥೆಯನ್ನು ಧಿಕ್ಕರಿಸಿ ಜಾತ್ಯಾತೀತವಾದ ಸಮಾಜವನ್ನು ನಿರ್ಮಿಸಲು ಹಂಬಲಿಸಿದರು. ಧರ್ಮದ ಹೆಸರಿನಲ್ಲಿ ತುಂಬಿಕೊಂಡಿದ್ದ ವಾಮಾಚಾರಗಳನ್ನು ಖಂಡಿಸಿ ಶುದ್ಧ ಭಕ್ತಿಯನ್ನು ಎತ್ತಿ ಹಿಡಿದರು. ಇಲ್ಲಿನ ಬದುಕು ಪರಿಶುದ್ಧವಾಗಿ ಸುಂದರಗೊಳ್ಳುವ ಮೂಲಕ ಪಾರಲೌಕಿಕ ಉನ್ನತಿ ಸಾಧ್ಯ ಎಂಬುದನ್ನು ಪ್ರತಿಪಾದಿಸಿ ಧರ್ಮ ತತ್ವಗಳಿಗೆ ಹೊಸ ಅರ್ಥವನ್ನು ಕೊಟ್ಟರು. ಪ್ರತಿಯೊಬ್ಬ ಜೀವಿಯು ಅನ್ಯರ ಅನ್ನದ ಹಂಗಿನ್ನಲ್ಲಿ ಬದುಕದೆ ನಿಜವಾದ ಸತ್ಯಶುದ್ಧ ಕಾಯಕದಿಂದ ಬಾಳಬೇಕೆಂಬುದನ್ನು ಹೇಳಿ ವ್ಯಕ್ತಿ ಸ್ವಾತಂತ್ರ್ಯವನ್ನು ನಿಜವಾದ ಅರ್ಥದಲ್ಲಿ ತಂದುಕೊಡಲು ಮುಂದಾದರು. ಹೀಗೆ ಅಂದಿನ ಆಂದೋಲನ ವ್ಯಕ್ತಿಯ ಲೌಕಿಕ ಪಾರಲೌಕಿಕ ಸ್ತರಗಳಿಗೂ ವ್ಯಾಪಿಸಿರುವುದನ್ನು ವಚನಗಳಲ್ಲಿ ಕಾಣಬಹುದಾಗಿದೆ. ವಚನಗಳಲ್ಲಿ ಹುದುಗಿರುವ ಈ ದೃಷ್ಟಿಯ ಅಂಶಗಳನ್ನು ಸಾಹಿತ್ಯಿಕ ಸ್ವರೂಪದಲ್ಲಿ ಅಭಿವ್ಯಕ್ತಿಯನ್ನು ಪಡೆದಿರುವುದರಿಂದ ಅವು ಅದೇ ರೀತಿಯ ಪರಿಶೀಲನೆಗೆ ಒತ್ತಾಯಿಸುತ್ತವೆ.

'ಜಂಗಮ' ಎಂಬುದಕ್ಕೆ ಚಲನಶೀಲ ಚೈತನ್ಯಶೀಲ, ಪವಿತ್ರ, ಪರಿಶುದ್ಧ ಎಂಬರ್ಥಗಳಿದ್ದು ಜೀವ ಜಗತ್ತು ಪರಿಶುದ್ಧ ಸ್ಥಿತಿಯಲ್ಲಿರುವುದೇ ಜಂಗಮ ಅದು ಮಲತ್ರಯಗಳ ಸಂಪರ್ಕದಿಂದ ಸ್ಥಾವರವಾದಾಗ ಅದನ್ನು ಮಲರಹಿತವಾಗಿ ನಿಲ್ಲಿಸುವುದೇ ಜಂಗಮತ್ವದ ಗುರಿ ಎಂದು ತಿಳಿಯುತ್ತದೆ. ಇವುಗಳಲ್ಲದೆ ಬಸವಣ್ಣನವರು ಹುಟ್ಟಿನೊಡನೆ ಬರುವ ಹೊಲೆತನ ಜಾತಿ ಶ್ರೇಷ್ಠತೆಯ ಖಂಡನೆ ಬದುಕಿನಲ್ಲಿ ಯಾವುದು ಉನ್ನತವಾದದ್ದು ಮುಂತಾದವುಗಳ ಬಗ್ಗೆ ಅತ್ಯಂತ ಮೂಲಭೂತವಾದ ಪ್ರಶ್ನೆಗಳನ್ನು ಎತ್ತಿ ಸಮಗ್ರ ಬದುಕಿಗೆ ಚಲನಶೀಲತೆಯನ್ನು ತಂದುಕೊಡಲು ಪ್ರಯತ್ನಿಸಿದ್ದಾರೆ, ಉಳ್ಳವರು ಶಿವಾಲಯವ ಮಾಡುವರು ಎಂಬ ಮಾತಿನ್ನಲ್ಲಿ ಬಸವಣ್ಣನವರು ದೇವಾಲಯ ಸಂಸ್ಕೃತಿಯನ್ನು ತಿರಸ್ಕರಿಸಿ ಇಷ್ಟಲಿಂಗಧಾರಣೆಯಿಂದ ಪ್ರತಿ ವ್ಯಕ್ತಿ ದೇವಾಲಯವಾಗಬೇಕೆಂಬ ಕನಸು ಕಂಡಿರುವುದಕ್ಕೆ ಭಾವಾನುಭಕ್ತಿಯೇ ಕಾರಣ ಎನ್ನುವುದನ್ನು ಗಮನಿಸಬಹುದಾಗಿದೆ. ಜೇಡರ ದಾಸಿಮಯ್ಯನ ನಡುವೆ ಸುಳಿವಾತ್ಮ ಗಂಡೂ ಅಲ್ಲ ಹೆಣ್ಣು ಅಲ್ಲ ಎಂಬ ಲಿಂಗ ಭೇದರಹಿತ ಮುಕ್ತ ಚಿಂತನೆಯ ತಳಹದಿ ಯಾವುದೇ ಕಾಲದ ಬದುಕಿನ ಧೋರಣೆಗಳು ಅಂದಂದಿನ ಸಾಹಿತ್ಯದ ವಸ್ತುವಿನ ಆಯ್ಕೆಗೆ ಕಾರಣವಾಗುವಂತೆ ಅದರಿಂದ ಅಭಿವ್ಯಕ್ತಿಯನ್ನು ಪಡೆದ ಅದರ ರೂಪಕ್ಕೆ ಕಾರಣವಾಗುತ್ತವೆ. ವಚನಕಾರರ ಜೀವನಶೈಲಿ, ದೃಷ್ಟಿ ಧೋರಣೆಗಳೇ ಭಿನ್ನವಾದ್ದರಿಂದ ಅವರ ಬದುಕಿನ ತಿರುಳಿನಿಂದ ಅಭಿವ್ಯಕ್ತಿ ಪಡೆದ ರೂಪ ಬೇರೆಯಾಗುವುದು ಅನಿವಾರ್ಯವಾಯಿತು. ಮುಖ್ಯವಾಗಿ ವಚನಕಾರರ ಬದುಕಿನ ತಳಹದಿ "ಕಾಯಕ"ವಾದ್ದರಿಂದ ಅನ್ನದ ದೈನ್ಯತೆಗಾಗಿ "ಜೋಳದಪಾಳಿ" ನೆನೆದು ಯಾರ ಮುಂದೆಯೂ ತಲೆಬಾಗುವ ಅಥವಾ ಆಶ್ರಯಿಸುವ ಸಂದರ್ಭ ಬರಲಿಲ್ಲವಷ್ಟೇ ಅಲ್ಲ; ವ್ಯಕ್ತಿ ಸ್ವಾತಂತ್ರ್ಯವನ್ನು ಅದರ ಪೂರ್ವ ಅರ್ಥದಲ್ಲಿ ಅನುಭವಿಸಲು ಸಾಧ್ಯವಾಯಿತು. ವಚನಕಾರರು ಮುಖ್ಯವಾಗಿ ಸಮಾಜೋಧಾರ್ಮಿಕ ಚಳವಳಿಯಾದ್ದರಿಂದ ಅದಕ್ಕೆ ಅಗತ್ಯವಾದ ರೂಪವನ್ನು ಕಂಡುಕೊಳ್ಳುವುದು ಅವರಿಗೆ ಅವಶ್ಯವಾಯಿತು. ಅದು ತನ್ನ ತಿರುಳಿನಲ್ಲಿ ವರ್ಣ, ವರ್ಗ, ಲಿಂಗಭೇದಗಳನ್ನು ವಿರೋಧಿಸಿದ್ದರಿಂದ ಸಹಜವಾಗಿಯೇ ಅದಕ್ಕೆ ಜಂಗಮ ಗುಣವು ಪ್ರಾಪ್ತವಾಯಿತು. 'ವರ್ಣಭೇದ' ಶರಣರ ದೃಷ್ಠಿಯಲ್ಲಿ ಎರಡೇ ಕುಲಗಳು ಒಂದು ಭಕ್ತರದು ಇನ್ನೊಂದು ಭವಿಗಳದು ವರ್ಗಭೇದ ವರ್ಣವ್ಯತ್ಯಾಸದಂತೆ ವರ್ಗ

ವ್ಯತ್ಯಾಸಗಳಿಂದಲೂ ಆಗಬಹುದಾದ ಲೌಕಿಕ ಆಧ್ಯಾತ್ಮಿಕ ಅನಾಹುತದ ಬಗ್ಗೆ ಎಚ್ಚರಿಸಿದ್ದಾರೆ. 'ಲಿಂಗಭೇದ' ಬಹುಶಃ ವಚನಕಾರರ ಸ್ತ್ರೀ ಸಮಾನತೆಯ ತಳಹದಿಗೆ ವಚನಕಾರರ ಜೇಡರದಾಸಿಮಯ್ಯನ ನಡಿವೆ ಸುಳಿವಾತ್ಮ ಗಂಡೂ ಅಲ್ಲ ಹೆಣ್ಣು ಅಲ್ಲ ವಚನವೇ ಪ್ರೇರಣೆ ಎಂದು ಕಾಣಿಸುತ್ತದೆ. 'ಕಾಯಕನಿಷ್ಠೆ' ಅನ್ನದ ಋಣಕ್ಕಾಗಿ ಅನ್ಯರ ಹಂಗಿನಲ್ಲಿ ಬಾಳದ ಬದುಕನ್ನು ಸಮರ್ಥಿಸಿದ್ದಾರೆ, 'ದಾಸೋಹ ಪ್ರಸಾದ' ಲಿಂಗವಿದ್ದಲ್ಲಿ ಹೊಲೆ ಜಂಗಮವಿದ್ದಲ್ಲಿ ಕುಲ, ಪ್ರಸಾದವಿದ್ದಲ್ಲಿ ಎಂಜಲು ಇರಲು ಸಾಧ್ಯವಿದೆಯೇ ಎಂದು ಪ್ರಶ್ನಿಸುತ್ತಾನೆ. ಈ ಬಗೆಯ ಪ್ರಸಾದದೃಷ್ಟಿ ಇರುವುದರಿಂದಲೇ ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ ಕೂಡಲಸಂಗಮ ದೇವನಲ್ಲದೆ ಆರೂ ಇಲ್ಲಾ ಎಂದು ಹೆಂಡತಿಗೆ ಸ್ಪಷ್ಟಪಡಿಸುತ್ತಾನೆ.

***ಕರಿಯನಿತ್ತಡೆ ಒಲ್ಲೆ ಸಿರಿಯ ನಿತ್ತಡೆ ಒಲ್ಲೆ***
***ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ***
***ನಿಮ್ಮ ಶರಣರ ಸೂಳ್ನುಡಿಯನೊಂದರೆಗಳಿಗೆಯಿತ್ತಡೆ***
***ನಿಮ್ಮನಿತ್ತೆ ಕಾಣಾ ರಾಮನಾಥಾ***

ಜೇಡರ ದಾಸಿಮಯ್ಯ ಎಲ್ಲಾ ಶರಣರ ವಚನಗಳಿಗೆ ಮಹತ್ವವನ್ನು ತಂದುಕೊಟ್ಟರು 'ಶರಣರ ಸೂಳ್ನುಡಿ' ಮುಖ್ಯವಾಗಿ ಸಾಮಾಜಿಕ ಪ್ರಜ್ಞೆಯುಳ್ಳ ನೀತಿ ಬೋಧಕರು ಸಮಾಜ ವಿಮರ್ಶಕರು ತಮ್ಮ ಅನುಭಾವವನ್ನು ಜನತೆಯ ಜೊತೆ ಹಂಚಿಕೊಳ್ಳಲು ಬಯಸಿದವರು ಸಾಹಿತ್ಯಿಕ ದೃಷ್ಠಿಯಿಂದ ವಚನಕಾರರಿಗಿಂತ ವಚನಗಳು ಮುಖ್ಯವಾಗುತ್ತವೆ. ಆದರೆ ಸಾಮಾಜಿಕ ಕ್ರಾಂತಿಯ ದೃಷ್ಠಿಯಿಂದ ವಚನಕಾರರು ಮುಖ್ಯವಾಗುತ್ತಾರೆ, ವಚನಗಳು ಸಾಮಾಜಿಕ ಧಾರ್ಮಿಕ ಕ್ಷೇತ್ರದಲ್ಲಿ ಶರಣರು ಕ್ರಾಂತಿಯನ್ನುಂಟುಮಾಡಲು ಬಳಸಿದ ಮೌಲ್ಯಗಳಾಗಿವೆ. ಅತ್ಯುತ್ತಮ ಸಾಹಿತ್ಯದ ಮೆರಗನ್ನು ಅವು ಪಡೆದಿವೆ. ಸಾಮಾಜಿಕ ಧಾರ್ಮಿಕ ಆಂದೋಲನಕ್ಕಾಗಿ ಮತ್ತು ಆಂದೋಲನದ ಫಲವಾಗಿ ವಚನಗಳು ಮೂಡಿಬಂದವು. ಎಂದು ಪರಿಭಾವಿಸಿದಾಗ ಬಸವ, ಅಲ್ಲಮ ಮುಂತಾದವರ ಬರಹಗಳಲ್ಲಿ ಕೆಲವು ಮಾತ್ರ ಮುಖ್ಯವಾಗುವುದಿಲ್ಲ; ಎಲ್ಲವೂ ಮುಖ್ಯವಾಗುತ್ತವೆ.

***ಕೆರೆ ಹಳ್ಳ ಬಾವಿಗಳು ಮೈದೆಗೆದರೆ***
***ಗುಳ್ಳೆ ಗೊರಚೆ ಚಿಪ್ಪು ಕಾಣಬಹುದು***
***ವಾರಿಧಿ ಮೈದೆಗೆದರೆ ರತ್ನಂಗಳ ಕಾಣಬಹುದು***
***ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು.***

ಕೆರೆ, ಹಳ್ಳ, ಬಾವಿ, ಸಮುದ್ರ, ಶರಣರು, ಗುಳ್ಳೆಗೊರಚೆ, ಚಿಪ್ಪು–ರತ್ನ–ಲಿಂಗ; ಹೀಗೆ ಚಿತ್ರ ಬೆಳೆದು ಕೊಂಡು ಹೋಗುತ್ತದೆ. ಆದರೆ ಶರಣರು ಮನದೆರೆದು ಮಾತನಾಡಿದರೆ ಅಲ್ಲಿ 'ಲಿಂಗವೇ' ಕಾಣುತ್ತದೆ ಎಂಬ ಶಿಖರಕ್ಕೆ ಹಂತ ಹಂತವಾಗಿ ಓದುಗರನ್ನು ಕೊಂಡೊಯ್ಯುವ ರೀತಿ ಅತ್ಯಂತ ಅಪೂರ್ವವಾಗಿ ಸಮುದ್ರದ ರತ್ನಗಳೂ ತಮ್ಮ ಬೆಲೆಯನ್ನು ಕಳೆದುಕೊಳ್ಳುತ್ತವೆ. ವಾರಿಧಿ ಮೈದೆಗೆದರೆ ಎಂಬ ಪರಿಕಲ್ಪನೆಯು ಅಷ್ಟಕ್ಕೆ ಭವ್ಯವಾಗಿದೆ ಈ ಭವ್ಯತೆ ಇನ್ನೊಂದಕ್ಕೆ ಬಾಗಿ ಸಮರ್ಪಿತವಾಗುತ್ತದೆ. ಶರಣರ ಮುಂದೆ ವಾರಿಧಿಯೂ ಅಲ್ಪವಾಗಿ ಪರಿಣಮಿಸುತ್ತದೆ. ವಚನಗಳು ಕನ್ನಡಕ್ಕೆ ಅನುಭವದ ಹೊಸ ಕ್ಷೇತ್ರಗಳನ್ನು ಗೆದ್ದು ಅಭಿವ್ಯಕ್ತಿಗೆ ಜನದ ಭಾಷೆಯು ಎಷ್ಟು ಪರಿಣಾಮಕಾರಿ ಮಾಧ್ಯಮವೆಂಬುದನ್ನು ತೋರಿಸಿಕೊಟ್ಟವು. ಸಾಮಾಜಿಕವಾಗಿ ಅವು ವಹಿಸಿದ ಪಾತ್ರವನ್ನು ಉದ್ದಕ್ಕೂ ಗಮನಿಸುತ್ತ ಬಂದಿದ್ದೇವೆ. ಜನಗಳಲ್ಲಿ ನೀತಿ ಬೋಧನೆ ಮಾಡಲು ಧರ್ಮ ಪ್ರಸಾರವಾಗಲೂ ಅವು ಮಾಧ್ಯಮವಾದುವು ಅವುಗಳನ್ನು ಕರ್ನಾಟಕದ ಆಚೆಯ ದೇಶ ವಿದೇಶಗಳಲ್ಲೂ ಭಕ್ತಿವರ್ಗದವರು ಹಾಡಿ ಸಂತೋಷಿಸಿದರು. ಹನ್ನೆರಡನೆಯ ಶತಮಾನದ ಬಳಿಕ ವಚನಗಳು ಕನ್ನಡ ಕಾವ್ಯ ಸಾಗುತ್ತಿದ್ದ ಜಾಡನ್ನೇ ಬದಲಿಸಿವುದು ವಸ್ತುವಿನ ಆಯ್ಕೆ ಧೋರಣೆ ಭಾಷೆಗಳ ಮೇಲೆ ಅಪಾರ ಪ್ರಭಾವವನ್ನು ಬೀರಿದವು.

**ಆಕರ ಗ್ರಂಥಗಳು**


- ಚಿದಾನಂದಮೂರ್ತಿ, ಎಂ. (1975). *ವಚನ ಸಾಹಿತ್ಯ ಸಂಪುಟ–5.* ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ.
- ಶಾಂತಾ ಇಮ್ರಾಪೂರ. (2007). *ಸಾಹಿತ್ಯ ಸಂವೇದನೆ.* ಚಿತ್ತಾರ


**ಪರಾಮರ್ಶನ ಗ್ರಂಥಗಳು**


- ಬಸವರಾಜು ಎಲ್. (2005). *ಶ್ರೀ ಘನಲಿಂಗದೇವರ ವಚನಗಳು.* ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ.
- ಕಲ್ಮಠ ಎಸ್.ವ್ಹಿ. (1972). *ಬಸವಣ್ಣನವರ ವಚನಗಳು.* ಬಿ.ಜಿ.ಸಂಕೇಶ್ವರ ವಿಜಯಾ ಪ್ರಿಂಟಿಂಗ್ ಪ್ರೆಸ್.
- ನಾಗರಾಜು. ಟಿ. (1999). *ಸಾಮಾಜಿಕ ಚಳುವಳಿಗಳು.* ಚೇತನ್ ಬುಕ್ ಹೌಸ್.
- ಪ್ರಭುಸ್ವಾಮಿಮಠ ಸಿ.ಪಿ. (1996). *ಬಸವಣ್ಣನವರ ವಚನಗಳ ಸಾಹಿತ್ಯಿಕ ಅಧ್ಯಯನ.* ಅಕ್ಷರ ಪ್ರಕಾಶನ.
- ಸಿದ್ದಯ್ಯ ಪುರಾಣಿಕ. (1992). *ಶರಣ ಚರಿತಾಮೃತ.* ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.65 - 73
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಸ್ವಚ್ಛ ಭಾರತ ಅಭಿಯಾನ ಅನುಷ್ಠಾನದ ಅವಕಾಶಗಳು ಮತ್ತು ಸವಾಲುಗಳು : ಒಂದು ಅವಲೋಕನ (ವಿಶೇಷವಾಗಿ ಮದ್ದೂರು ತಾಲೂಕು ಗೊರವನಹಳ್ಳಿ ಗ್ರಾಮ ಪಂಚಾಯಿತಿಗೆ ಸಂಬಂಧಿಸಿದಂತೆ)

**ಬೇಬಿಕಲಾ**

ಸಂಶೋಧನಾ ವಿದ್ಯಾರ್ಥಿ, ರಾಜ್ಯಶಾಸ್ತ್ರ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

***Abstract:***

*'ಸಕ್ಕರೆ ಜಿಲ್ಲೆ' ಮಂಡ್ಯದ ಗ್ರಾಮೀಣ ಪ್ರದೇಶವು ಸ್ವಚ್ಛ ಭಾರತ ಅಭಿಯಾನ (ಗ್ರಾಮೀಣ) ಯೋಜನೆಯಡಿ ಬಯಲು ಬಹಿರ್ದೆಸೆ ಮುಕ್ತ (Open Defection Free-ODF) ಎಂದು 2ನೇ ಅಕ್ಟೋಬರ್ 2017ರಂದು ಘೋಷಣೆ ಆದ ಬಳಿಕ ಸಾರ್ವತ್ರಿಕ ನೈರ್ಮಲ್ಯ ಮತ್ತು ಶುಚಿತ್ವವನ್ನು ಗುರಿಯಾಗಿಸಿಕೊಂಡು ಘನ ತ್ಯಾಜ್ಯ ನಿರ್ವಹಣೆ ಮತ್ತು ಪ್ಲಾಸ್ಟಿಕ್ ಬಳಕೆ ಮುಕ್ತಗೊಳಿಸುವಲ್ಲಿ ಹಲವು ಉಪಕ್ರಮಗಳನ್ನು ಕೈಗೊಂಡು ಮಂಡ್ಯ ಜಿಲ್ಲಾ ಪಂಚಾಯತ್ ಕ್ರಾಂತಿಕಾರಕ ಹೆಜ್ಜೆ ಇರಿಸಿದೆ. ಗ್ರಾಮೀಣ ಜನರ ಆರೋಗ್ಯ ಮಟ್ಟವನ್ನು ಎತ್ತರಕ್ಕೆ ಒಯ್ಯುವ ದೃಷ್ಟಿಯಿಂದ ಸಮುದಾಯದ ಭಾಗವಹಿಸುವಿಕೆಗೆ ಹೆಚ್ಚಿನ ಒತ್ತು ನೀಡಿದೆ. ವೈಯಕ್ತಿಕ ಮತ್ತು ಸಮುದಾಯ ಶೌಚಾಲಯಗಳ ನಿರ್ಮಾಣ ಮತ್ತು ಬಳಕೆಯನ್ನು ಪ್ರೋತ್ಸಾಹಿಸಲಾಗುತ್ತಿದೆ. ಇದರ ಜೊತೆಗೆ ಕಸ ವಿಲೇವಾರಿಯನ್ನು ವ್ಯವಸ್ಥಿತವಾಗಿ ನಿರ್ವಹಿಸುವ ನಿಟ್ಟಿನಲ್ಲಿ ತ್ಯಾಜ್ಯ ನಿರ್ವಹಣೆಗೂ ಹೆಚ್ಚಿನ ಆದ್ಯತೆ ನೀಡಲಾಗಿದೆ. ಪ್ರಸ್ತುತ ಲೇಖನದಲ್ಲಿ ಮಂಡ್ಯ ಜಿಲ್ಲೆ ಮದ್ದೂರು ತಾಲೂಕಿನ ಗೊರವನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿ ಸ್ವಚ್ಛ ಭಾರತ ಅಭಿಯಾನ ಅನುಷ್ಠಾನದ ಅವಕಾಶಗಳು ಮತ್ತು ಸವಾಲುಗಳನ್ನು ಅಧ್ಯಯನ ಮಾಡಲಾಗಿದೆ.*

***Keywords:*** *ಸ್ವಚ್ಛ ಭಾರತ ಅಭಿಯಾನ, ಗ್ರಾಮ ಪಂಚಾಯಿತಿ, ಬಯಲು ಬಹಿರ್ದೆಸೆ ಮುಕ್ತ, ಘನತ್ಯಾಜ ನಿರ್ವಹಣೆ.*

**ಪೀಠಿಕೆ**

'ನಮ್ಮ ಹೆಜ್ಜೆ ಸ್ವಚ್ಛತೆಯಡೆಗೆ – ಪ್ಲಾಸ್ಟಿಕ್ ಮುಕ್ತ ಪರಿಸರದೆಡೆಗೆ' ಆಶಯದೊಂದಿಗೆ ಮಂಡ್ಯ ಜಿಲ್ಲೆಯಲ್ಲೀಗ ಏಕ ಬಳಕೆಯ ಪ್ಲಾಸ್ಟಿಕ್ ಮುಕ್ತ ಸ್ವಚ್ಛ ಪರಿಸರ ನಿರ್ಮಾಣಕ್ಕಾಗಿ ವಿಶೇಷ ಅಭಿಯಾನ ಆರಂಭಗೊಂಡಿದೆ. 'ಮನೆಯೇ ಮೊದಲ ಪಾಠಶಾಲೆ, ತಾಯಿ ತಾನೇ ಮೊದಲ ಗುರು' ಎನ್ನುವ ನಾಣ್ಣುಡಿಯಂತೆ ಸ್ವಚ್ಛತೆ ಕುರಿತು ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಮನೆಯಿಂದ ಆರಂಭಿಸಿ, ಮಕ್ಕಳ ಮೂಲಕ ಶಾಲೆ/ಕಾಲೇಜುಗಳಿಗೆ ತಲುಪಿಸಿ, ಗ್ರಾಮ ಪೂರ್ತಿ ಪಸರಿಸಿ, ಎಲ್ಲರಿಂದಲೂ ಪ್ರತಿಜ್ಞೆ ಮಾಡಿಸಿ 'ಪ್ಲಾಸ್ಟಿಕ್ ಮುಕ್ತ ಶಾಲೆ', 'ಪ್ಲಾಸ್ಟಿಕ್ ಮುಕ್ತ ಕಾಲೇಜು', 'ಪ್ಲಾಸ್ಟಿಕ್ ಮುಕ್ತ ಗ್ರಾಮ ಪಂಚಾಯಿತಿ' ಎಂದು ಘೋಷಿಸಲು ಮಂಡ್ಯ ಜಿಲ್ಲಾ ಪಂಚಾಯತ್ ವಿಶೇಷ ಕಾರ್ಯಕ್ರಮಗಳನ್ನು ಹಾಕಿಕೊಂಡು ಆಂದೋಲನದ ಸ್ವರೂಪ ನೀಡಿದೆ. ಪರಿಸರದ ಮಹಾಶತ್ರುವಾಗಿರುವ

***Please cite this article as:*** ಬೇಬಿಕಲಾ. (2024). ಸ್ವಚ್ಛ ಭಾರತ ಅಭಿಯಾನ ಅನುಷ್ಠಾನದ ಅವಕಾಶಗಳು ಮತ್ತು ಸವಾಲುಗಳು : ಒಂದು ಅವಲೋಕನ (ವಿಶೇಷವಾಗಿ ಮದ್ದೂರು ತಾಲೂಕು ಗೊರವನಹಳ್ಳಿ ಗ್ರಾಮ ಪಂಚಾಯಿತಿಗೆ ಸಂಬಂಧಿಸಿದಂತೆ). *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವೆಲಪ್‌ಮೆಂಟ್,* 2(6), 65–73.

ಪ್ಲಾಸ್ಟಿಕ್‌ನಿಂದ ಆಗುತ್ತಿರುವ ದುಷ್ಪರಿಣಾಮಗಳ ಕುರಿತು ಜನರಲ್ಲಿ ವ್ಯಾಪಕವಾಗಿ ಜಾಗೃತಿ ಮೂಡಿಸಲಾಗುತ್ತಿದೆ. ತನ್ಮೂಲಕ ಗ್ರಾಮಗಳಲ್ಲಿ ಸ್ವಚ್ಛ, ಸುಂದರ ಪರಿಸರ ಸೃಷ್ಟಿಸಿ ಜನರ ಆರೋಗ್ಯ ಮಟ್ಟವನ್ನು ಎತ್ತರಕ್ಕೆ ಒಯ್ಯುವ ಉದ್ದೇಶವನ್ನು ಹೊಂದಲಾಗಿದೆ.

ಈ ದಿಸೆಯಲ್ಲಿ ತ್ಯಾಜ್ಯ ಸಂಗ್ರಹಿಸಲು ಆಟೋ ಟಿಪ್ಪರ್‌ಗಳ ಖರೀದಿ, ಘನ ತ್ಯಾಜ್ಯ ಸಂಗ್ರಹಣೆ ಮತ್ತು ನಿರ್ವಹಣೆಗಾಗಿ ಸ್ವಚ್ಛ ಸಂಕೀರ್ಣಗಳ ನಿರ್ಮಾಣ, ಸ್ವಸಹಾಯ ಗುಂಪುಗಳ ಮೂಲಕ ತ್ಯಾಜ್ಯ ನಿರ್ವಹಣಾ ಘಟಕಗಳ ನಿರ್ವಹಣೆ, ಏಕ ಬಳಕೆಯ ಪ್ಲಾಸ್ಟಿಕ್ ಬಳಕೆಯನ್ನು ಕಡಿಮೆ ಮಾಡಲು ಮನೆಮನೆಗೆ ಬಟ್ಟೆ ಬ್ಯಾಗ್‌ಗಳ ವಿತರಣೆ ಹಾಗೂ ಹಸಿ ಮತ್ತು ಒಣ ಕಸ ಸಂಗ್ರಹಿಸಲು ಕಸ ಸಂಗ್ರಹಣಾ ಬುಟ್ಟಿಗಳ ವಿತರಣೆ; ಸಾರ್ವಜನಿಕ ಸ್ಥಳಗಳಲ್ಲಿ ಕಸ ಸಂಗ್ರಹಿಸಲು ಕಸ ಸಂಗ್ರಹಣಾ ತೊಟ್ಟಿಗಳ ಅಳವಡಿಕೆ ಸೇರಿದಂತೆ ಹಲವು ಉಪಕ್ರಮಗಳನ್ನು ಕೈಗೊಳ್ಳುವ ಮೂಲಕ ಸುಸ್ಥಿರ ಅಭಿವೃದ್ಧಿಯ ಗುರಿಗಳಲ್ಲಿ ಒಂದಾದ ಸ್ವಚ್ಛ ನೀರು ಮತ್ತು ನೈರ್ಮಲ್ಯದೆಡೆಗೆ ಸಾಗಲು ಮುಂದಾಗಿದೆ.

**ನೈರ್ಮಲ್ಯ ಸುಸ್ಥಿರತೆ**

ಮಂಡ್ಯ ಜಿಲ್ಲೆಯ ಎಲ್ಲಾ 233 ಗ್ರಾಮ ಪಂಚಾಯತ್‌ಗಳ ವ್ಯಾಪ್ತಿಯಲ್ಲಿ ಏಕಕಾಲದಲ್ಲಿ ಸ್ವಚ್ಛತಾ ಚಟುವಟಿಕೆಗಳನ್ನು ಹಮ್ಮಿಕೊಂಡು ನೈರ್ಮಲ್ಯ ಮತ್ತು ನಂತರದಲ್ಲಿ ಸುಸ್ಥಿರತೆ ಕಾಯ್ದುಕೊಳ್ಳಲು ಜಿಲ್ಲಾ ಪಂಚಾಯತ್‌ನ ಮೂಲಕ ಶ್ರಮಿಸಲಾಗುತ್ತಿದೆ. ಜಿಲ್ಲಾ ಪಂಚಾಯತ್‌ನ ಸಭೆಗಳಲ್ಲಿ ಆದ ನಿರ್ಣಯದಂತೆ ಗ್ರಾಮ ಪಂಚಾಯತ್‌ಗಳು ತಮ್ಮ 14ನೇ ಹಣಕಾಸು ಯೋಜನೆ ಮತ್ತು ಸ್ವಂತ ಸಂಪನ್ಮೂಲದಿಂದ ಸ್ವಚ್ಛತಾ ಪರಿಕರಗಳನ್ನು ಖರೀದಿಸಲು ಮತ್ತು ಸ್ವಚ್ಛತಾ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಅನುಕೂಲ ಮಾಡಿಕೊಟ್ಟಿತ್ತು. ಅದರಂತೆ ಗಿಡಗಂಟೆಗಳನ್ನು ಕತ್ತರಿಸಲು ವೀಡ್ ಕಟ್ಟರ್ ಮತ್ತು ಗಾರ್ಡನ್ ಟೂಲ್ಸ್ ಮಾದರಿಯ ಸಲಕರಣೆಗಳನ್ನು ಖರೀದಿಗೆ ಅವಕಾಶ, ಕೈಗವಸು ಖರೀದಿಗೆ ಅವಕಾಶ, ಒಣ ಕಸ ಸಂಗ್ರಹಿಸಲು ನಿರುಪಯುಕ್ತವಾಗಿರುವ ಸರ್ಕಾರಿ ಕಟ್ಟಡಗಳ ದುರಸ್ತಿಗೆ ಅವಕಾಶ. ಹೋಬಳಿಗೆ ಒಂದು ಫಾಗಿಂಗ್ ಯಂತ್ರ ಖರೀದಿಗೆ ಅವಕಾಶ ಮಾಡಿಕೊಡಲಾಗಿದೆ.

**ಪ್ಲಾಸ್ಟಿಕ್ ತ್ಯಾಜ್ಯ ಗುರಿ–ಚಟುವಟಿಕೆ**

ಏಕ ಬಳಕೆಯ ಪ್ಲಾಸ್ಟಿಕ್ ತ್ಯಾಜ್ಯ ಮುಕ್ತ ಶಾಲಾ/ಕಾಲೇಜು ಮತ್ತು ಗ್ರಾಮಗಳ ನಿರ್ಮಾಣಕ್ಕಾಗಿ ಮಂಡ್ಯ ಜಿಲ್ಲೆಯಾದ್ಯಂತ ಹತ್ತು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಅವುಗಳಲ್ಲಿ ಪ್ರಮುಖವಾದುದು ಮನೆ ಹಂತದಲ್ಲಿಯೇ ಕಸ ವಿಗಂಡಣೆ ಮತ್ತು ವಿಲೇವಾರಿಗೆ ಸೂಕ್ತ ವ್ಯವಸ್ಥೆ, ಹಾಗೂ ಪ್ಲಾಸ್ಟಿಕ್ ಚೀಲಗಳನ್ನು ನೀಡದಂತೆ ಅಂಗಡಿ ಮಾಲೀಕರಲ್ಲಿ ವಿನಂತಿ, ಪರಿಸರ ಸ್ನೇಹಿ ಅಥವಾ ಮರು ಬಳಕೆಯ ಬಟ್ಟೆಯ ಚೀಲಗಳನ್ನು ಬಳಸುವಂತೆ ಗ್ರಾಹಕರನ್ನು ಪ್ರೇರೇಪಿಸುವುದು ಹಾಗೂ ಪ್ಲಾಸ್ಟಿಕ್‌ನಿಂದ ಆಗುವ ದುಷ್ಪರಿಣಾಮಗಳ ಕುರಿತು ಕರಪತ್ರಗಳನ್ನು ಮುದ್ರಿಸಿ ಮನೆಮನೆಗೆ ಮತ್ತು ಅಂಗಡಿ ಮಳಿಗೆಗಳಿಗೆ ತಲುಪಿಸಿ ಜಾಗೃತಿ ಮೂಡಿಸುವುದು. 'ಸ್ವಚ್ಛತೆ ಮತ್ತು ಉತ್ತಮ ಆರೋಗ್ಯಕ್ಕಾಗಿ ಶ್ರಮದಾನ' ಶೀರ್ಷಿಕೆಯಡಿ ಎನ್.ಎಸ್.ಎಸ್. ಮತ್ತು ಕಾಲೇಜು ವಿದ್ಯಾರ್ಥಿಗಳ ತಂಡಗಳಿಂದ ಗ್ರಾಮಗಳಲ್ಲಿ ಶ್ರಮದಾನ ಶಿಬಿರ, ಗ್ರಾಮದ ರಸ್ತೆ ಬದಿಗಳಲ್ಲಿನ ತಿಪ್ಪೆಗುಂಡಿಗಳ ತೆರವು. ನೀರಿನ ಟ್ಯಾಂಕ್, ತೊಂಬೆ, ಗಟಾರಗಳ ಸ್ವಚ್ಛತೆ, ಆಟೋಗಳ ಮೂಲಕ ಪ್ಲಾಸ್ಟಿಕ್ ನಿಷೇಧ, ಸಾರ್ವಜನಿಕ ಮತ್ತು ಖಾಸಗಿ ಸ್ಥಳಗಳಲ್ಲಿ ಸ್ವಚ್ಛತೆ ಕಾಪಾಡುವ ಕುರಿತು ಪ್ರಚಾರ, ಶಾಲಾ ಮತ್ತು ಕಾಲೇಜು ವಿದ್ಯಾರ್ಥಿಗಳಿಂದ 'ಸ್ವಚ್ಛತೆ ಮತ್ತು ಪ್ಲಾಸ್ಟಿಕ್' ಕುರಿತು ಜಾಗೃತಿ ಜಾಥಾ, ಸ್ವಚ್ಛತೆ ಕುರಿತು ಸೃಜನಶೀಲ ಚಟುವಟಿಕೆಗಳ ಮೂಲಕ ಮಕ್ಕಳಲ್ಲಿ ಅರಿವು, ಸ್ವಚ್ಛತೆ ಮತ್ತು ಪ್ಲಾಸ್ಟಿಕ್ ಕುರಿತು ವಿದ್ಯಾರ್ಥಿಗಳಿಗಾಗಿ ಸ್ಥಳದಲ್ಲೇ ಚಿತ್ರ ಬಿಡಿಸುವಿಕೆ, ಪ್ರಬಂಧ ರಚನೆ, ಚರ್ಚಾ ಸ್ಪರ್ಧೆ, ನಾಟಕ ಸೇರಿದಂತೆ ವಿವಿಧ ಸ್ಪರ್ಧೆಗಳ ಆಯೋಜನೆ, ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ, ಜಿಲ್ಲಾ

ಪಂಚಾಯಿತಿ ಹಾಗೂ ಶಾಲೆಗಳಲ್ಲಿ ನಡೆಯುವ ಸಭೆ–ಸಮಾರಂಭಗಳಲ್ಲಿ ಪ್ಲಾಸ್ಟಿಕ್ ಬಾಟಲ್‌ಗಳನ್ನು ಬಳಸದೇ ಸ್ಟೀಲ್/ಗಾಜಿನ ಬಾಟಲ್‌ಗಳ ಬಳಕೆ, ಶಾಲಾ/ಕಾಲೇಜು ವಿದ್ಯಾರ್ಥಿಗಳು ನೀರು ಕೊಂಡ್ಯೋಯ್ಯಲು ಸ್ಟೀಲ್ ಬಾಟಲ್‌ಗಳನ್ನು ಬಳಸಲು ಪ್ರೇರೇಪಿಸುವುದು, ಸಾರ್ವಜನಿಕ ಸ್ಥಳಗಳಲ್ಲಿ ಸ್ವಚ್ಛತೆ ಮತ್ತು ಪ್ಲಾಸ್ಟಿಕ್ ಬಳಸಿದಿರುವ ಕುರಿತು ಜಾಗೃತಿ, ಗ್ರಾಮ ಪಂಚಾಯಿತಿಗಳಲ್ಲಿ ಕೆ.ಡಿ.ಪಿ. ಮಾದರಿಯಲ್ಲಿ ಸಭೆ ಆಯೋಜನೆ, ಐತಿಹಾಸಿಕ ಮಹತ್ವದ ಕಲ್ಯಾಣಿಗಳು ಮತ್ತು ಸುತ್ತಲಿನ ಪರಿಸರದ ಸ್ವಚ್ಛತೆ, ಗ್ರಾಮ ಪಂಚಾಯತ್ ವ್ಯಾಪ್ತಿಯ ವಿವಿಧ ಸಂಘಸಂಸ್ಥೆಗಳು, ಸ್ತ್ರೀಶಕ್ತಿ ಮತ್ತು ಸ್ವಸಹಾಯ ಗುಂಪುಗಳು ಮತ್ತು ಸಾರ್ವಜನಿಕರ ಸಭೆ ಕರೆದು ಮಾಹಿತಿ ನೀಡುವುದು ಹೀಗೆ ಅನೇಕ ಕಾರ್ಯಕ್ರಮಗಳನ್ನು ರೂಪಿಸಿದೆ.

**ಅಧ್ಯಯನದ ಉದ್ದೇಶಗಳು**

- ಗ್ರಾಮೀಣ ಸ್ವಚ್ಛತೆ ಬಗ್ಗೆ ತಿಳಿದುಕೊಳ್ಳುವುದು.
- ಬಯಲು ಬಹಿರ್ದೆಸೆ ಹೋಗಲಾಡಿಸಲು ತೆಗೆದುಕೊಂಡಿರುವ ಕ್ರಮಗಳನ್ನು ಅಧ್ಯಯನ ಮಾಡುವುದು.
- ಗ್ರಾಮೀಣ ಪ್ರದೇಶಗಳಲ್ಲಿನ ತ್ಯಾಜ್ಯ ನಿರ್ವಹಣೆ ಬಗ್ಗೆ ತಿಳಿದುಕೊಳ್ಳುವುದು.

**ಅಧ್ಯಯನ ವ್ಯಾಪ್ತಿ**

ಈ ಸಂಶೋಧನಾ ಅಧ್ಯಯನಕ್ಕೆ ಮಂಡ್ಯ ಜಿಲ್ಲೆ ಮದ್ದೂರು ತಾಲೂಕಿನ ಗೊರವನಹಳ್ಳಿ ಗ್ರಾಮ ಪಂಚಾಯಿತಿಯ ಗೊರವನಹಳ್ಳಿ, ಉಪ್ಪಿನಕೆರೆ ಮತ್ತು ಚನ್ನಸಂದ್ರ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಅಧ್ಯಯನದ ಮಹತ್ವ**

ಇದೀಗ ಸಾಕ್ಷರಗೊಳ್ಳುತ್ತಿರುವ ಗ್ರಾಮಗಳು ಸಾಮಾಜಿಕ ಹಾಗೂ ಆರ್ಥಿಕವಾಗಿಯೂ ಸಬಲೀಕರಣದತ್ತ ಸಾಗುತ್ತಿವೆ. ಆದರೆ, ಸ್ವಚ್ಛತೆ, ನೈರ್ಮಲ್ಯ, ಪರಿಸರ ಕಾಳಜಿ, ಬಯಲು ಬಹಿರ್ದೆಸೆ, ತ್ಯಾಜ್ಯ ನಿರ್ವಹಣೆ ಇವುಗಳ ಬಗ್ಗೆ ಅರಿವು ಕಡಿಮೆಯಿದ್ದು, ಅನೇಕ ಸಾಂಕ್ರಾಮಿಕ ರೋಗಗಳಿಗೆ ಗ್ರಾಮೀಣ ಪ್ರದೇಶಗಳು ಒಳಗಾಗುತ್ತಿರುವುದನ್ನು ಮನಗಂಡು ಈ ಅಧ್ಯಯನವು ಹೆಚ್ಚು ಮಹತ್ವ ಹೊಂದಿದೆ. ಬಯಲು ಬಹಿರ್ದೆಸೆ ಮುಕ್ತ, ಸುಸ್ಥಿರತೆಯನ್ನು ಕಾಪಾಡುವ ಸುರಕ್ಷಿತ ನೈರ್ಮಲ್ಯ ಮತ್ತು ಶುಚಿತ್ವ ಅಭ್ಯಾಸಗಳನ್ನು ರೂಢಿಸಲು ಗ್ರಾಮೀಣ ವಾಸಿಗಳ ನಡವಳಿಕೆಯಲ್ಲಿ ಆಗಿರುವ ಬದಲಾವಣೆಗಳನ್ನು ತಿಳಿದುಕೊಳ್ಳಲು ಸ್ವಚ್ಛ ಭಾರತ ಅಭಿಯಾನ ಕುರಿತ ಅಧ್ಯಯನ ಅವಶ್ಯಕವಾಗಿದೆ.

**ಮಾದರಿ ಆಯ್ಕೆ**

ಪ್ರಸ್ತುತ ಅಧ್ಯಯನಕ್ಕೆ ಗೊರವನಹಳ್ಳಿ ಗ್ರಾಮ ಪಂಚಾಯಿತಿಯ ಎಲ್ಲಾ 03 (ಮೂರು) ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ಗ್ರಾಮದಲ್ಲಿ ತಲಾ 10 ಜನರಂತೆ ಒಟ್ಟು 30 ಮಂದಿಯನ್ನು ಮಾದರಿಯಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

**ಕೋಷ್ಟಕ 1: ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಮಾದರಿ ಗಾತ್ರ**

| ಗ್ರಾಮದ ಹೆಸರು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ಗೊರವನಹಳ್ಳಿ | 05 | 05 | 10 |
| ಉಪ್ಪಿನಕೆರೆ | 05 | 05 | 10 |
| ಚನ್ನಸಂದ್ರ | 05 | 05 | 10 |
| ಒಟ್ಟು | 15 | 15 | 30 |

ಕೋಷ್ಟಕ 1 ರಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಮಾದರಿ ಗಾತ್ರವನ್ನು ತೋರಿಸಲಾಗಿದೆ. 30 ಜನರನ್ನು ಸರಳ ಯಾದೃಚ್ಛಿಕ ಮಾದರಿ ವಿಧಾನದಂತೆ ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ಗ್ರಾಮದಲ್ಲೂ 05 ಮಂದಿ ಪುರುಷರು ಮತ್ತು 05 ಮಂದಿ ಮಹಿಳೆಯರನ್ನು ಆಯ್ಕೆ ಮಾಡಿಕೊಳ್ಳುವ ಮೂಲಕ ಮಾದರಿಯಲ್ಲಿ ಸಮಾನ ಅವಕಾಶ ಕಲ್ಪಿಸಲಾಗಿದೆ.

**ಮಾಹಿತಿ ಸಂಗ್ರಹಣಾ ವಿಧಾನ**

ಸಂಶೋಧನಾ ಅಧ್ಯಯನಕ್ಕೆ ಅವಶ್ಯಕವಾಗಿರುವ ಮಾಹಿತಿಯನ್ನು ಎರಡು ಮೂಲಗಳಾದ ಪ್ರಾಥಮಿಕ ಮತ್ತು ಮಾಧ್ಯಮಿಕ ಮೂಲಗಳಿಂದ ಸಂಗ್ರಹಿಸಲಾಗಿದೆ. ಪ್ರಾಥಮಿಕ ಮಾಹಿತಿ ಮೂಲಗಳಾದ ಸಂದರ್ಶನ ಮತ್ತು ಅವಲೋಕನದ ವಿಧಾನಗಳನ್ನು ಅಳವಡಿಸಿಕೊಂಡು ಪರಿಣಾಮಕಾರಿ ಕ್ಷೇತ್ರಾಧ್ಯಯನ ಮೂಲಕ ಖುದ್ದು ಗ್ರಾಮಗಳಿಗೆ ಭೇಟಿ ನೀಡಿ ಸ್ವಚ್ಛ ಭಾರತ ಅಭಿಯಾನದ ಯಶಸ್ಸಿಗೆ ಇದ್ದ ಅವಕಾಶಗಳು ಹಾಗೂ ಸವಾಲುಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಪೂರಕವಾಗಿ ಮಾಧ್ಯಮಿಕ ಮೂಲಗಳಾದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಪ್ರಕಟಿಸಿರುವ ಕರ್ನಾಟಕ ವಿಕಾಸ ಮಾಸಿಕ ಪತ್ರಿಕೆ, ಹಾಗೇ ಇಲಾಖೆ ಹೊರತಂದಿರುವ ನೈರ್ಮಲ್ಯ ನೀತಿ ಕೈಪಿಡಿ, ಸ್ವಚ್ಛ ಭಾರತ ಮಿಷನ್‌ನ ಕೈಪಿಡಿ, ವಿವಿಧ ದಿನಪತ್ರಿಕೆಗಳು ಹಾಗೂ ಇತರೆ ಗ್ರಂಥಗಳಿಂದ ಮಾಹಿತಿಯನ್ನು ಸಂಗ್ರಹಿಸಿ ವೈಜ್ಞಾನಿಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಸ್ವಚ್ಛ ಭಾರತ ಅಭಿಯಾನವನ್ನು ಅನುಷ್ಠಾನಗೊಳಿಸುವಲ್ಲಿ ಮಂಡ್ಯ ಜಿಲ್ಲಾ ಪಂಚಾಯತ್ ಬಳಸಿಕೊಂಡಿರುವ ಅವಕಾಶಗಳು**

**ಬಯಲು ಬಹಿರ್ದೆಸೆ ಮುಕ್ತ –ಸುಸ್ಥಿರತೆ**

ಮಂಡ್ಯ ಜಿಲ್ಲೆಯ ಎಲ್ಲಾ ಗ್ರಾಮ ಪಂಚಾಯತಿಗಳ ವ್ಯಾಪ್ತಿಯ ಎಲ್ಲಾ ಕುಟುಂಬಗಳು ಶೌಚಾಲಯವನ್ನು ನಿರ್ಮಾಣ ಮಾಡಿಕೊಂಡು ನಿರಂತರವಾಗಿ ಬಳಸುವ ಮತ್ತು ಆ ಮೂಲಕ ಗ್ರಾಮದಲ್ಲಿ ಶುಚಿತ್ವ ಕಾಪಾಡುವ ನಿಟ್ಟಿನಲ್ಲಿ ಬಯಲು ಬಹಿರ್ದೆಸೆ ಮುಕ್ತ – ಸುಸ್ಥಿರತೆಯೆಡೆಗೆ ಮಂಡ್ಯ ಜಿಲ್ಲಾ ಪಂಚಾಯತ್ ಗಮನ ಕೇಂದ್ರೀಕರಿಸಿದೆ. ಈ ದಿಸೆಯಲ್ಲಿ ಶೌಚಾಲಯಗಳ ನಿರಂತರ ಬಳಕೆ ಹಾಗೂ ಸುಸ್ಥಿರ ನೈರ್ಮಲ್ಯ ಅಭ್ಯಾಸಗಳನ್ನು ರೂಢಿಸಲು ತಾಂತ್ರಿಕ ಮತ್ತು ಆರ್ಥಿಕ ಬೆಂಬಲವನ್ನೂ ಜನರಿಗೆ ನೀಡುತ್ತಿದೆ. ಈ ನಿಟ್ಟಿನಲ್ಲಿ ಹೊಸದಾಗಿ ಕಟ್ಟುವ ಮನೆಗಳಲ್ಲಿ ಕಡ್ಡಾಯವಾಗಿ ಶೌಚಾಲಯ ನಿರ್ಮಾಣ, ವೈಯಕ್ತಿಕ ಶೌಚಾಲಯ ನಿರ್ಮಾಣಕ್ಕೆ ಪ್ರೋತ್ಸಾಹ ಧನ, ಅವಳಿ ಗುಂಡಿ ಶೌಚಾಲಯಗಳ ನಿರ್ಮಾಣ, ಶೌಚಾಲಯದ ನಿರಂತರ ಬಳಕೆ, ಸಮುದಾಯ ಶೌಚಾಲಯಗಳನ್ನು ಉಪಯೋಗಿ/ಬಳಕೆಯೋಗ್ಯ ಶೌಚಾಲಯಗಳನ್ನಾಗಿಸುವುದು ಮತ್ತು ಅವುಗಳ ನಿರಂತರ ನಿರ್ವಹಣೆಗೆ ಸಹಕಾರ, ಶಾಲಾ–ಕಾಲೇಜು ಮತ್ತು ಅಂಗನವಾಡಿಗಳಲ್ಲಿ ಶೌಚಾಲಯಗಳ ನಿರ್ಮಾಣ ಹೀಗೆ ಹಲವಾರು ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿದೆ.

**ಘನ ತ್ಯಾಜ್ಯ ನಿರ್ವಹಣೆ**

ಹಳ್ಳಿಗಳಲ್ಲಿ ಶೌಚಾಲಯಗಳ ನಿರ್ಮಾಣದ ಬಳಿಕ ಘನ ತ್ಯಾಜ ನಿರ್ವಹಣೆಯು ಗ್ರಾಮ ಪಂಚಾಯಿತಿಗಳಿಗೆ ದೊಡ್ಡ ಸವಾಲು. ಈ ರೀತಿಯ ಸವಾಲುಗಳನ್ನೇ ಗುರಿಯಾಗಿಸಿಕೊಂಡು ಪರಿಹಾರ ಹುಡುಕುವ ದಿಸೆಯಲ್ಲಿ ಹಲವು ಗಂಭೀರ ಪ್ರಯತ್ನಗಳು ಸಾಗಿವೆ. ಮಗುವಿಗೆ ಮನೆಯೇ ಮೊದಲ ಪಾಠ ಶಾಲೆ ಎನ್ನುವಂತೆ ಮನೆ ಹಂತದಿಂದಲೇ ತ್ಯಾಜ್ಯವನ್ನು ಬೇರ್ಪಡಿಸಿ ವೈಜ್ಞಾನಿಕವಾಗಿ ನಿರ್ವಹಣೆ ಮಾಡುವ ನಿಟ್ಟಿನಲ್ಲಿ ಹಲವಾರು ವಿನೂತನ ಉಪಕ್ರಮಗಳನ್ನು ಮಂಡ್ಯ ಜಿಲ್ಲಾ ಪಂಚಾಯತ್ ಹಮ್ಮಿಕೊಂಡು ಗ್ರಾಮ ಪಂಚಾಯತ್‌ಗಳ ಮೂಲಕ ಅನುಷ್ಠಾನಗೊಳಿಸುತ್ತಿದೆ.

ಪ್ರತಿ ಗ್ರಾಮ ಪಂಚಾಯಿತಿಯು ತನ್ನ ವ್ಯಾಪ್ತಿಗೆ ಬರುವ ಗ್ರಾಮಗಳಲ್ಲಿ ತ್ಯಾಜ್ಯ ನಿರ್ವಹಣೆಯನ್ನು ವೈಜ್ಞಾನಿಕವಾಗಿ ಮಾಡಲು ಮನೆಮನೆಗೆ ಕಸ ಸಂಗ್ರಹ ಡಬ್ಬಿ ವಿತರಣೆ, ಮನೆಮನೆಗೆ ಬಟ್ಟೆ ಬ್ಯಾಗ್‌ಗಳ ವಿತರಣೆ, ಗ್ರಾಮದ ಆಯ್ದ ಸ್ಥಳಗಳಲ್ಲಿ ಕಸ ಸಂಗ್ರಹ ತೊಟ್ಟಿಗಳ ಅಳವಡಿಕೆ, ಆಟೋ ಟಿಪ್ಪರ್‌ಗಳ ಖರೀದಿ ಹಾಗೂ ತ್ಯಾಜ್ಯದ ಸಂಗ್ರಹಣೆ, ಬೇರ್ಪಡಿಸುವಿಕೆ ಹಾಗೂ ವಿಲೇವಾರಿಗಾಗಿ ಸ್ವಚ್ಛ ಸಂಕೀರ್ಣಗಳ ನಿರ್ಮಾಣ ಮುಂತಾದವುಗಳ ಜೊತೆಗೆ ಮಹಿಳಾ ಸ್ವಸಹಾಯಕ ಗುಂಪುಗಳೊಂದಿಗೆ ಒಡಂಬಡಿಕೆ ಕಸ ನಿರ್ವಹಣೆಗೆ ಒಡಂಬಡಿಕೆ ಮಾಡಿಕೊಳ್ಳಲಾಗಿದೆ.

**ಕೋಷ್ಟಕ: 2 ಮಂಡ್ಯ ಜಿಲ್ಲೆಯ ಗ್ರಾಮಪಂಚಾಯಿತಿಗಳಿಗೆ ಘನತ್ಯಾಜ ನಿರ್ವಹಣೆಗೆ ಕಲ್ಪಿಸಿರುವ ಸೌಲಭ್ಯಗಳ ವಿವರ**

| ಕ್ರ.ಸಂ. | ತಾಲೂಕು | ಗ್ರಾ.ಪಂ ಸಂಖ್ಯೆ | ನಿರ್ಮಿಸಲಾದ ಘನ ತ್ಯಾಜ್ಯ ಘಟಕಗಳ ಸಂಖ್ಯೆ | ನಿರ್ಮಾಣ ಹಂತದಲ್ಲಿರುವ ಘನ ತ್ಯಾಜ್ಯ ಘಟಕಗಳ ಸಂಖ್ಯೆ | ಆಟೋ ಟಿಪ್ಪರ್ ಹೊಂದಿರುವ ಗ್ರಾ.ಪಂ.ಗಳ ಸಂಖ್ಯೆ | ಕಸ ಸಂಗ್ರಹ ಡಬ್ಬಗಳನ್ನು ವಿತರಿಸಿರುವ ಗ್ರಾಪಂಗಳ ಸಂಖ್ಯೆ |
|---|---|---|---|---|---|---|
| 1 | ಮಂಡ್ಯ | 46 | 04 | 12 | 35 | 46 |
| 2 | ಮದ್ದೂರು | 42 | 07 | 12 | 28 | 42 |
| 3 | ಮಳವಳ್ಳಿ | 39 | 05 | 18 | 22 | 39 |
| 4 | ನಾಗಮಂಗಲ | 27 | 04 | 10 | 19 | 27 |
| 5 | ಕೆ.ಆರ್.ಪೇಟೆ | 34 | 04 | 07 | 25 | 34 |
| 6 | ಪಾಂಡವಪುರ | 24 | 07 | 06 | 18 | 24 |
| 7 | ಶ್ರೀರಂಗಪಟ್ಟಣ | 21 | 01 | 04 | 14 | 21 |
| | ಒಟ್ಟು | 233 | 32 | 69 | 161 | 233 |

**ಮಾಹಿತಿ, ಶಿಕ್ಷಣ ಮತ್ತು ಸಂವಹನ (ಐ,ಇ,ಸಿ)**

ಮಾಹಿತಿ, ಶಿಕ್ಷಣ ಮತ್ತು ಸಂವಹನ (ಐ.ಇ.ಸಿ) ಚಟುವಟಿಕೆಯು ಸಮುದಾಯದಲ್ಲಿ ನೈರ್ಮಲ್ಯದ ಕುರಿತು ಪರಿಣಾಮಕಾರಿ ಬದಲಾವಣೆಯನ್ನು ತರಬಲ್ಲದು. ಈ ಕಾರಣದಿಂದ ಸ್ವಚ್ಛ ಭಾರತ ಮಿಷನ್ ಯೋಜನೆ ಮತ್ತು ಅದರ ಘಟಕಾಂಶಗಳ ಕುರಿತು ಸಾರ್ವಜನಿಕರಲ್ಲಿ ಹೆಚ್ಚಿನ ಅರಿವು ಮೂಡಿಸಲು ಮಾಹಿತಿ, ಶಿಕ್ಷಣ ಮತ್ತು ಸಂವಹನ (ಐ.ಇ.ಸಿ) ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಗುತ್ತಿದೆ. ಇದಕ್ಕೆ ಜನರಿಂದಲೂ ಉತ್ತಮ ಸ್ಪಂದನೆ ದೊರೆತಿದೆ. ಕ್ಷೇತ್ರ ಮಟ್ಟದಲ್ಲೂ ಪರಿಣಾಮಕಾರಿ ಬದಲಾವಣೆಗಳು ಆಗಿವೆ.

ಮನೆಮನೆಗೆ ಕರಪತ್ರ ಹಂಚುವುದು, ಗೋಡೆ ಬರಹ ಮತ್ತು ಚಿತ್ರಗಳ ರಚನೆ, ಟಾಂ ಟಾಂ, ಆಟೋ ಪ್ರಚಾರ, ಬೀದಿ ನಾಟಕ, ಸಾರ್ವಜನಿಕ ಸ್ಥಳಗಳಲ್ಲಿ ಜಾಗೃತಿ ಪೋಸ್ಟರ್‌ಗಳ ಅಳವಡಿಕೆ, ಸಮೂಹ ಮತ್ತು ಸಾಮಾಜಿಕ ಮಾಧ್ಯಮಗಳ ಮೂಲಕ ಪ್ರಚಾರ, ಜನಪ್ರತಿನಿಧಿಗಳ ಮೂಲಕ ಜಾಗೃತಿ, ವಿದ್ಯಾರ್ಥಿಗಳ ಮೂಲಕ ಪೋಷಕರ ಮನವೊಲಿಕೆ, ಸ್ವ–ಸಹಾಯ ಸಂಘಗಳ ಮಹಿಳೆಯರಿಗೆ ಗುಂಪು ಸಭೆಗಳ ಮೂಲಕ ಮಾಹಿತಿ ನೀಡುವುದು ಸೇರಿದಂತೆ ಹತ್ತಾರು ಚಟುವಟಿಕೆಗಳ ಮೂಲಕ ಸಮುದಾಯದಲ್ಲಿ ಜಾಗೃತಿ ಮೂಡಿಸಲಾಗಿದೆ.

**ಮಾಹಿತಿ ವಿಶ್ಲೇಷಣೆ**

ಸ್ವಚ್ಛ ಭಾರತ ಅಭಿಯಾನದ ಅನುಷ್ಠಾನದಲ್ಲಿ ಸ್ಥಳೀಯ ಸರ್ಕಾರಗಳು ಯಶಸ್ವಿಯಾಗಿ ತೊಡಗಿಸಿಕೊಂಡಿದ್ದು ಇರುವ ಎಲ್ಲಾ ಅವಕಾಶಗಳನ್ನು ಬಳಸಿಕೊಂಡು ಗೊರವನಹಳ್ಳಿ ಗ್ರಾಮ ಪಂಚಾಯಿತಿಯ ಶೇ 100ರಷ್ಟು ಮನೆಗಳಿಗೆ ಶೌಚಾಲಯಗಳ ಸೌಲಭ್ಯವನ್ನು ಕಲ್ಪಿಸಿರುವುದು ಅಂಕಿಅಂಶಗಳಿಂದಲೂ ದೊರತ ಮಾಹಿತಿಯಾಗಿದೆ ಮತ್ತು ಕ್ಷೇತ್ರಕಾರ್ಯ ಸಂದರ್ಭದಲ್ಲು ಅವಲೋಕಿಸಲಾಗಿದೆ.

**ಕೋಷ್ಟಕ 3: ಶೌಚಾಲಯ ಹೊಂದಿರುವ ಕುಟುಂಬಗಳ ವಿವರ**

| ಕ್ರ.ಸ ೦. | ಗ್ರಾಮದ ಹೆಸರು | ಒಟ್ಟು ಕುಟುಂಬಗಳ ಸಂಖ್ಯೆ | ಶೌಚಾಲಯ ಹೊಂದಿರುವ ಕುಟುಂಬಗಳು |
|---|---|---|---|
| 1 | ಗೊರವನಹಳ್ಳಿ | 805 | 805 |
| 2 | ಉಪ್ಪಿನಕೆರೆ | 306 | 306 |
| 3 | ಚನ್ನಸಂದ್ರ | 328 | 328 |
| | ಒಟ್ಟು | 1,439 | 1,439 |

**ಮೂಲ: 2011ರ ಭಾರತದ ಜನಗಣತಿ ವರದಿ**

ಮೇಲಿನ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಗೊರವನಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ 1,439 ಕುಟುಂಬಗಳಿದ್ದು, ಎಲ್ಲಾ ಕುಟುಂಬಗಳು ಕೂಡ ಶೌಚಾಲಯಗಳನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಇದು ಸ್ವಚ್ಛ ಭಾರತ ಅಭಿಯಾನದ ಪ್ರತಿಫಲವೇ ಆಗಿದೆ ಎಂಬುದು ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹೆಚ್.ಬಿ.ಮಧುಸೂದನ್ ಅವರ ಅಭಿಪ್ರಾಯವಾಗಿದೆ. ಈ ಯೋಜನೆಯ ಕಾರಣದಿಂದಾಗಿ ಇರುವ ಎಲ್ಲಾ ಅವಕಾಶಗಳನ್ನು ಬಳಸಿಕೊಂಡು ಶೇ 100ರಷ್ಟು ಸಾಧನೆ ಮಾಡಿ ಬಯಲು ಶೌಚಮುಕ್ತ ಗ್ರಾಮ ಪಂಚಾಯಿತಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

**ಕೋಷ್ಟಕ 4: ಶೌಚಾಲಯ ಬಳಸುತ್ತಿರುವ ಪ್ರಮಾಣ**

| ಕ್ರ. ಸಂ. | ಗ್ರಾಮದ ಹೆಸರು | ಶೌಚಾಲಯ ಬಳಸುತ್ತಿರುವ ಪ್ರಮಾಣ | | |
|---|---|---|---|---|
| | | ಹೌದು | ಇಲ್ಲ | **ಒಟ್ಟು** |
| **1** | ಗೊರವನಹಳ್ಳಿ | 10 (100.0) | 0 (0.0) | **10** (100.0) |
| **2** | ಉಪ್ಪಿನಕೆರೆ | 9 (90.0) | 1 (10.0) | **10** (100.0) |
| **3** | ಚನ್ನಸಂದ್ರ | 9 (90.0) | 1 (10.0) | **10** (100.0) |
| | ಒಟ್ಟು | 28 (93.3) | 2 (6.7) | **30** (100.0) |

ಕೋಷ್ಟಕ 4ರಲ್ಲಿ ಶೌಚಾಲಯ ಬಳಸುತ್ತಿರುವವರ ಪ್ರಮಾಣವನ್ನು ನೀಡಲಾಗಿದೆ. ಮೇಲಿನ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಗೊರವನಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಮೂರು ಗ್ರಾಮಗಳಲ್ಲಿ ಶೌಚಾಲಯವನ್ನು ಬಳಸುತ್ತಿರುವವರ ಪ್ರಮಾಣ ಶೇ.93.3 ರಷ್ಟಿದೆ. ಗ್ರಾಮವಾರು ನೋಡಿದಾಗ ಗೊರವನಳ್ಳಿ ಗ್ರಾಮದಲ್ಲಿ ಶೇ.100 ರಷ್ಟು ಕುಟುಂಬಗಳು ಶೌಚಾಲಯ ಬಳಕೆ ಮಾಡುತ್ತಿದ್ದಾರೆ. ಉಪ್ಪಿನಕೆರೆ ಮತ್ತು ಚನ್ನಸಂದ್ರ ಗ್ರಾಮಗಳಲ್ಲಿ ಶೇ.90 ಕುಟುಂಬಗಳು ಶೌಚಾಲಯವನ್ನು ಬಳಸುತ್ತಿದ್ದಾರೆ.

**ಕೋಷ್ಟಕ 5: ತ್ಯಾಜ್ಯ ನಿರ್ವಹಣೆ ಬಗ್ಗೆ ನೀವು ಕಾಳಜಿ ಹೊಂದಿರುವವರ ವಿವರ**

| ಕ್ರ. ಸಂ. | ಗ್ರಾಮದ ಹೆಸರು | ಹೌದು | ಇಲ್ಲ | ಒಟ್ಟು |
|---|---|---|---|---|
| 1 | ಗೊರವನಹಳ್ಳಿ | 9 (90.0) | 1 (10.0) | **10** (100.0) |
| 2 | ಉಪ್ಪಿನಕೆರೆ | 8 (80.00 | 2 (20.0) | **10** (100.0) |
| 3 | ಚನ್ನಸಂದ್ರ | 8 (80.0) | 2 (20.0) | **10** (100.0) |
| | **ಒಟ್ಟು** | **25 (83.3)** | **5 (16.7)** | **30** (100.0) |

ಕೋಷ್ಟಕ 5ರಲ್ಲಿ ಪ್ರಕಾರ ತ್ಯಾಜ್ಯ ನಿರ್ವಹಣೆ ಬಗ್ಗೆ ಜನರು ಹೊಂದಿರುವ ಕಾಳಜಿಯನ್ನು ಕೇಳಲಾಗಿದ್ದು, ಶೇ 100ರಷ್ಟು ಶೌಚಾಲಯಗಳನ್ನು ಹೊಂದಿದ್ದರೂ ಬಳಕೆ ಪ್ರಮಾಣ ಕಡಿಮೆ ಇರುವಂತೆ ಕಸ, ತ್ಯಾಜ್ಯ ನಿರ್ವಹಣೆಯಲ್ಲಿಯೂ ಕೂಡ ಪೂರ್ಣ ಪ್ರಮಾಣದ ಬದಲಾವಣೆ ಕಂಡುಬಂದಿಲ್ಲ. ಶೇ.83.3 ರಷ್ಟು ತ್ಯಾಜನಿರ್ವಹಣೆಗೆ ಬಗ್ಗೆ ಕಾಳಜಿ ಹೊಂದಿದ್ದು, ಶೇ.16.7 ರಷ್ಟು ಯಾವುದೇ ರೀತಿಯ ಕಾಳಜಿಹೊಂದಿರದಿಲ್ಲದಿರುವುದನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಇಂದಿಗೂ ಕೂಡ ಹಸಿ ಮತ್ತು ಒಣ ತ್ಯಾಜ್ಯವನ್ನು ಮನೆಯ ಪಕ್ಕದಲ್ಲಿಯೇ ಹಾಕುವುದು, ಮನೆಗಳ ಪಕ್ಕದಲ್ಲಿ ತಿಪ್ಪೆಗುಂಡಿಗಳಿರುವುದು, ಕೊಟ್ಟಿಗೆಗಳಿರುವುದನ್ನು ಅವಲೋಕಿಸಲಾಯಿತು. ಇದರಿಂದ ತಿಳಿಯುವುದೇನೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಸ್ವಚ್ಛತೆ ಮತ್ತು ತ್ಯಾಜ್ಯ ನಿರ್ವಹಣೆ ಬಗ್ಗೆ ಇನ್ನೂ ಹೆಚ್ಚಿನ ಅರಿವು ಮೂಡಿಸುವ ಅಗತ್ಯವಿದೆ.

**ಸ್ವಚ್ಛ ಭಾರತ ಅಭಿಯಾನದ ಅನುಷ್ಠಾನಕ್ಕಿರುವ ಅವಕಾಶಗಳು**

ಸ್ವಚ್ಛ ಭಾರತ ಅಭಿಯಾನದ ಪೂರ್ಣ ಪ್ರಮಾಣದ ಅನುಷ್ಠಾನಕ್ಕೆ ಅನೇಕ ಅವಕಾಶಗಳಿವೆ. ನೈರ್ಮಲ್ಯ ಮತ್ತು ಶುಚಿತ್ವ ಕುರಿತು ಸಮುದಾಯದಲ್ಲಿ

ಜಾಗೃತಿ ಮೂಡಿಸುವುದು,ಮನೆಮನೆ ಸಂವಹನದ ಮೂಲಕ ಸುಧಾರಿತ ನೈರ್ಮಲ್ಯ ನಡವಳಿಕೆಯನ್ನು ಪ್ರೋತ್ಸಾಹಿಸುವುದು, ಶೌಚಾಲಯದ ನಿರಂತರ ಬಳಕೆ, ನೈರ್ಮಲ್ಯ ಮತ್ತು ಶುಚಿತ್ವ ಅಭ್ಯಾಸಗಳ ಬಗ್ಗೆ ಖಾತರಿಪಡಿಸಿಕೊಳ್ಳುವುದು, ಅನೈರ್ಮಲ್ಯ ಶೌಚಾಲಯಗಳು ನಿರ್ಮಾಣವಾಗದಂತೆ ಎಚ್ಚರವಹಿಸುವುದು ಮತ್ತು ಅಂತಹ ಶೌಚಾಲಯಗಳು ಕಂಡುಬಂದಲ್ಲಿ ಅವುಗಳನ್ನು ನೈರ್ಮಲ್ಯ ಶೌಚಾಲಯಗಳನ್ನಾಗಿ ಪರಿವರ್ತಿಸುವುದು, ನಿರುಪಯೋಗಿ ಅಥವಾ ಬಳಕೆಯಲ್ಲಿಲ್ಲದ ಸಮುದಾಯ ಶೌಚಾಲಯಗಳನ್ನು ಉಪಯೋಗಿ/ಬಳಕೆಯೋಗ್ಯ ಶೌಚಾಲಯಗಳನ್ನಾಗಿಸುವುದು ಮತ್ತು ಅವುಗಳ ನಿರಂತರ ನಿರ್ವಹಣೆಗೆ ಸಹಕಾರ ಹಾಗೂ ಗ್ರಾಮ ಪಂಚಾಯತ್ ವ್ಯಾಪ್ತಿಯ ಎಲ್ಲಾ ಶಾಲಾ–ಕಾಲೇಜು ಮತ್ತು ಅಂಗನವಾಡಿಗಳಲ್ಲಿ ಶೌಚಾಲಯಗಳ ನಿರ್ಮಾಣ ಮತ್ತು ಬಳಕೆಗೆ ಉತ್ತೇಜನ ನೀಡಬಹುದಾಗಿದೆ.

**ಸವಾಲುಗಳು**

- ಅಶುಚಿತ್ವದಿಂದ ಎದುರಾಗಬಹುದಾದ ದುಷ್ಪರಿಣಾಮಗಳ ಬಗ್ಗೆ ಗ್ರಾಮೀಣ ಜನತೆಗೆ ಹೆಚ್ಚಿನ ಅರಿವು ಇಲ್ಲದಿರುವುದು.
- ಮನೆಯೊಳಗಿರುವ ಶೌಚಾಲಯಗಳನ್ನು ಒಳಸಲು ನಾಚಿಕೆ ಮತ್ತು ಹಿಂಜರಿಕೆ.
- ಪಂಚಾಯಿತಿಗಳು ಸ್ವಚ್ಛತೆಯ ಸುಸ್ಥಿರ ಅಭಿವೃದ್ಧಿಗೆ ಗಮನಕೊಡದೆ ಅಂಕಿ–ಅಂಶಗಳಿಗೆ ಒತ್ತು ನೀಡುತ್ತಿರುವುದು.
- ಆರೋಗ್ಯ ಶಿಕ್ಷಣದ ಕೊರತೆ

**ಪ್ರಮುಖ ಫಲಿತಾಂಶಗಳು**

- ಸ್ವಚ್ಛ ಭಾರತ ಅಭಿಯಾನದಿಂದಾಗಿ ಗ್ರಾಮೀಣ ಪ್ರದೇಶಗಳು ಶೇ 100ರಷ್ಟು ಶೌಚಾಲಯಗಳುನ್ನು ಹೊಂದಿರುವುದು ಗಮನಾರ್ಹ ಬೆಳವಣಿಗೆ ಆಗಿದೆ.
- ಮಹಿಳಾ ಸಬಲೀಕರಣದ ಆಯಾಮವಾಗಿಯೂ ಶೌಚಾಲಯಗಳು ಪ್ರತಿಷ್ಠೆಯ ಸಂಕೇತವಾಗಿರದೇ ಗೌರವದ ಸಂಕೇತವಾಗಿರುವುದನ್ನು ಗಮನಿಸಲಾಗಿದೆ.
- ಗ್ರಾಮೀಣ ರಸ್ತೆಗಳು, ಚರಂಡಿಗಳು, ಗ್ರಾಮೀಣ ಸುಸ್ಥಿರ ಅಭಿವೃದ್ಧಿಯ ಪೂರಕ ಚಿಹ್ನೆಗಳಾಗಿವೆ.
- ತ್ಯಾಜ್ಯ ನಿರ್ವಹಣೆಗೆ ಸ್ಥಳೀಯ ಸರ್ಕಾರಗಳು ಹೆಚ್ಚು ಆಸಕ್ತಿವಹಿಸಿದ್ದು ಡಸ್ಟ್ ಬಿನ್‌ಗಾಗಿ ನೀಲಿ ಮತ್ತು ಹಸಿರು ಬಕೇಟುಗಳನ್ನು ಪ್ರತಿ ಕುಟುಂಬಗಳಿಗೆ ನೀಡಿರುವುದು ಗಮನಾರ್ಹ
- ಸಂಪೂರ್ಣ ಸ್ವಚ್ಛ ಗ್ರಾಮವಾಗಿದ್ದರೂ ಮನೆಯ ಅಕ್ಕಪಕ್ಕದಲ್ಲಿ ತಿಪ್ಪೆಗುಂಡಿಗಳು, ಸಾಕು ಪ್ರಾಣಿಗಳ ಕೊಟ್ಟಿಗೆಗಳನ್ನು ಹೊಂದಿದ್ದು ತ್ಯಾಜ್ಯ ನಿರ್ವಹಣೆಯಲ್ಲಿ ಹಿಂದುಳಿದಿರುವುದು ಕಂಡು ಬರುತ್ತದೆ.

**ಸಲಹೆಗಳು**

- ಸ್ವಚ್ಛ ಭಾರತ ಅಭಿಯಾನದ ಅನುಷ್ಠಾನ ಉದ್ದೇಶಗಳನ್ನು ಗ್ರಾಮೀಣರಿಗೆ ಮನವರಿಕೆ ಮಾಡಿಕೊಡಬೇಕು.
- ಶೌಚಾಲಯ ಬಳಕೆಯ ಬಗ್ಗೆ ಇರುವ ಸಾಂಪ್ರದಾಯಿಕ ಮತ್ತು ಅವೈಜ್ಞಾನಿಕ ಮನೋಭಾವನೆಯನ್ನು ತೊಡೆದುಹಾಕಬೇಕು
- ಸ್ಥಳೀಯ ಸರ್ಕಾರಗಳು ಗ್ರಾಮೀಣ ಸ್ವಚ್ಛತೆ ಮತ್ತು ನೈರ್ಮಲ್ಯವನ್ನು ಅಂಕಿ–ಅಂಶಗಳ ಮೂಲಕ ಅಳೆಯದೆ ಸಂಪೂರ್ಣ ಬಳಕೆ ಆಗುತ್ತಿರುವುದನ್ನು ಗುಣಾತ್ಮಕ ದೃಷ್ಟಿಕೋನದಲ್ಲಿ ನೋಡಬೇಕು.
- ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗಿ ಬಿಡುಗಡೆಯಾದ ಅನುದಾನವನ್ನು ಸಂಪೂರ್ಣ ಸದ್ಬಳಕೆ ಮಾಡಿಕೊಳ್ಳಬೇಕು.
- ವೈಯಕ್ತಿಕ ಮತ್ತು ಸಮುದಾಯ ಸ್ವಚ್ಛತೆ ಬಗ್ಗೆ ಹೆಚ್ಚಿನ ಅರಿವು ಮೂಡಿಸಬೇಕು

- ಗ್ರಾಮ ನೀರು ಮತ್ತು ನೈರ್ಮಲ್ಯ ಸಮಿತಿಗಳನ್ನು ಬಲಪಡಿಸಿ ನೀರು ಮತ್ತು ನೈರ್ಮಲ್ಯ ವಿಷಯದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ತಿಳಿಸಬೇಕು.
- ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ವಿಶೇಷ ದಿನಗಳನ್ನು ಅರ್ಥಪೂರ್ಣವಾಗಿ ಆಚರಿಸುವ ಮೂಲಕ ಸಾರ್ವಜನಿಕರಲ್ಲಿ ಅರಿವು ಮೂಡಿಸಲು ಕ್ರಮವಹಿಸಬೇಕು.
- ಗ್ರಾಮೀಣರಿಗೆ ಆರೋಗ್ಯ ಶಿಕ್ಷಣ ನೀಡಬೇಕು.
- ತ್ಯಾಜ್ಯ ನಿರ್ವಹಣೆ ಬಗ್ಗೆ ತರಬೇತಿ ನೀಡಬೇಕು ಅಥವಾ ಈ ಬಗ್ಗೆ ಹೆಚ್ಚಿನ ಜಾಗೃತಿ ಮೂಡಿಸಬೇಕು

**ಉಪಸಂಹಾರ**

ಸ್ವಚ್ಛ ಭಾರತ ಅಭಿಯಾನದ ಉದ್ದೇಶಗಳು ಬಯಲು ಬಹಿರ್ದೆಸೆ ಮುಕ್ತ ಸಮುದಾಯಗಳನ್ನು ಸುಸ್ಥಿರತೆಯನ್ನು ಕಾಪಾಡಿಕೊಳ್ಳುವುದಾಗಿದೆ. ಅಂದರೆ, ಎಲ್ಲಾ ಕುಟುಂಬಗಳು, ಸಮುದಾಯಗಳು ಹಾಗೂ ಸಾರ್ವಜನಿಕ ಸಂಸ್ಥೆಗಳು, ತ್ಯಾಜ್ಯ ವಿಲೇವಾರಿ ಮಾಡಲು ಕಡ್ಡಾಯ ಸುರಕ್ಷಿತ ತಂತ್ರಜ್ಞಾನವನ್ನು ಉಪಯೋಗಿಸಿಕೊಳ್ಳುವುದು ಕಂಡುಬರುತ್ತಿದೆ.

**ಪರಾಮರ್ಶನ ಗ್ರಂಥಗಳು**


- ಕರ್ನಾಟಕ ರಾಜ್ಯ ಗ್ರಾಮೀಣ ನೈರ್ಮಲ್ಯ ನೀತಿ ಕಾರ್ಯತಂತ್ರ ಮತ್ತು ಮಾದರಿ ಉಪ ವಿಧಿಗಳು. ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ.
- ರಾಜೇಶ್. ಎಚ್. ಆರ್. *ವೈಜ್ಞಾನಿಕ ತ್ಯಾಜ್ಯ ವಿಲೇವಾರಿ.* ಕರ್ನಾಟಕ ವಿಕಾಸ ಮಾಸ ಪತ್ರಿಕೆ.
- Bhattacharya, S., Sharma, D., & Sharma, P. (2018). Swachh Bharat Mission: an integrative approach to attain public health in India. *International Journal of Environment and Health*, *9*(2), 197. https://doi.org/10.1504/ijenvh.2018.092800
- Mohapatra, G. (2019). Projected Behavioural change in Swachh Bharat Mission: A Public Policy perspective. *Indian Journal of Public Administration*, *65*(2), 451–474.
- Report ODF Plus Declaration Of Villages And SLWM Arrangement, Swachh Bharat Mission(G) Phase – II,
- Vishwakarma, D. (2016). Swachh Bharat abhiyan Clean India abhiyan. *International Research Journal of Management, IT and Social Sciences*, *3*(3).


**ಅನುಬಂಧ–1**

**ಛಾಯಾಚಿತ್ರಗಳು**



ಮಾಹಿತಿ ಸಂಗ್ರಹಿಸುತ್ತಿರುವ ಸಂಶೋಧಕರು



ಪಂಚಾಯಿತಿ ಅಭಿವೃದ್ಧಿ ಅಧಿಕಾರಿಯಿಂದ ಮಾಹಿತಿ ಸಂಗ್ರಹಿಸುತ್ತಿರುವ ಸಂಶೋಧಕರು



ಗೊರವನ ಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ನಿರ್ಮಿಸಿರುವ ಸ್ವಚ್ಛ ಸಂಕೀರ್ಣ



ಶಾಲಾ ಆವರಣದಲ್ಲಿ ಕಸಸಂಗ್ರಣ ಡಬ್ಬಿಗಳನ್ನು ಅಳವಡಿಸಿರವುದು



ಗೋಡೆ ಬರಹದ ಮೂಲಕ ಸ್ವಚ್ಛತ ಅರಿವು ಮೂಡಿಸಿರುವುದು

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.74 - 81
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕಾಗೋಡು ರೈತ ಚಳುವಳಿಯಲ್ಲಿ ಭಾಗವಹಿಸಿದ ರೈತ ಮಹಿಳಾ ಹೋರಾಟಗಾರರು

**ದಿನೇಶ.ಎನ್.ಎನ್.[1] ಮತ್ತು ಪ್ರೊ.ಕೆ.ಆರ್.ಶಾನಿ.[2]**

[1]ಸಂಶೋಧನಾ ವಿದ್ಯಾರ್ಥಿ, ರಾಜ್ಯಶಾಸ್ತ್ರ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ.
[2]ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು, ರಾಜ್ಯಶಾಸ್ತ್ರ ವಿಭಾಗ, ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು.

***Abstract:***

*ಭಾರತದ ಕೃಷಿ ಅಭಿವೃದ್ಧಿಯಲ್ಲಿ ಮಹಿಳೆ ಪ್ರಮುಖ ಪಾತ್ರವಹಿಸತ್ತಾಳೆ. ಹೆಣ್ಣು ವ್ಯವಸಾಯದ ತಾಯಿ ಎಂಬ ಮಾತು ರೂಢಿಯಲ್ಲಿದೆ. ಸ್ತ್ರೀಯರು ನೆಲ ಸಂಬಂಧಿ ಕೆಲಸಗಳಲ್ಲಿ ತೊಡಗಿದ್ದರಲ್ಲಿ ಮೊದಲಿಗರಾಗಿದ್ದ ಕಾರಣ ಅವರೇ ಅತ್ಯಂತ ಪ್ರಾಚೀನ ರೈತರು. ಹೆಣ್ಣು ಭೂಮಿಯ ಸೃಷ್ಟಿಶೀಲತೆಯ ಸಂಕೇತ, ಅವಳು ಮನೆಯ ಕೌಟುಂಬಿಕ ಬದುಕನ್ನು ನಿರ್ವಹಿಸುವುದು, ಕೃಷಿಯ ಅಗತ್ಯತೆಗಳನ್ನು ಪೂರೈಸುವುದು ತನ್ನ ಆದ್ಯ ಕರ್ತವ್ಯವೆಂದು ಭಾವಿಸಿ ಅದರಂತೆ ನಡೆಯುತ್ತಾ ಬಂದಿದ್ದಾಳೆ. ಹೀಗಾಗಿ ಕೃಷಿಗೆ ಸಂಬಂಧಪಟ್ಟ ಎಲ್ಲ ವಿಚಾರಗಳನ್ನು ಆಕೆ ಜವಾಬ್ದಾರಿಯುತವಾಗಿ ನಡೆಸಿಕೊಂಡು ಬಂದಿದ್ದಾಳೆ. ಕಾಗೋಡು ರೈತ ಚಳುವಳಿಯಲ್ಲಿ ಷವಾಜಿ ಮಾಸ್ತ್ಯಮ್ಮ, ಬಿಳಿಯನ ಸಾವಿತ್ರಮ್ಮಾ, ಕೋಣೆ ಕನ್ನಮ್ಮ, ಮಡಿವಾಳ ಕನ್ನಮ್ಮ, ಬರ್ಶಿನ ಚೌಡಮ್ಮ, ಕೆಂಚನ ಬೀರಮ್ಮ ಮತ್ತು ಕೆಂಚಪ್ಪ, ರೊಡ್ಡಿ ದೇವಮ್ಮನವರು ಕಾಗೋಡು ರೈತ ಮಹಿಳಾ ಹೋರಾಟಗಾರರಾಗಿ ಗುರುತಿಸಿಕೊಂಡಿದ್ದಾರೆ. ರೈತರ ನ್ಯಾಯಯುತ ಹಕ್ಕುಗಳಿಗಾಗಿ ಹೋರಾಡುವ ರೈತ ಸಂಘಟನೆಗಳಲ್ಲಿ ರೈತ ಮಹಿಳೆಯರು ಕೈ ಜೋಡಿಸುತ್ತಿರುವುದು ಆಶಾದಾಯಕ ಬೆಳವಣಿಗೆ. ರೈತಾಪಿ ವರ್ಗದ ಬದುಕು ಹಸನಾದರೆ ರೈತ ಮತ್ತು ಗ್ರಾಮೀಣ ಮಹಿಳೆಯರ ಬದುಕು ಹಸನಾಗುತ್ತದೆ. ತನ್ಮೂಲಕ ಗ್ರಾಮೀಣ ಸ್ವರಾಜ್ಯದಿಂದ ಗ್ರಾಮ ಮಹಿಳೆಯ ಅರ್ಥಾತ್ ರೈತ ಮಹಿಳೆಯ ಬದುಕು ಅರ್ಥಪೂರ್ಣವಾಗಬೇಕಾಗಿದೆ. ಆದ್ದರಿಂದ ಈ ಲೇಖನವು ಕಾಗೋಡು ರೈತ ಚಳುವಳಿಯಲ್ಲಿ ಭಾಗವಹಿಸಿದ ರೈತ ಮಹಿಳಾ ಹೋರಾಟಗಾರರ ಕುರಿತು ಚರ್ಚಿಸುತ್ತದೆ.*

***Keywords:*** *ಕಾಗೋಡು ರೈತ ಚಳುವಳಿ, ರೈತರು, ಮಹಿಳಾ ಹೋರಾಟಗಾರರು, ಷವಾಜಿ ಮಾಸ್ತ್ಯಮ್ಮ.*

## ಪೀಠಿಕೆ

ಪುರಾತನ ಸಮಾಜದಲ್ಲಿ ಬೇಟೆಯಾಡುವುದು ಶೌರ್‍ಯದ ಕೆಲಸ, ನೆಲದೊಳಗಿನ ಗೆಡ್ಡೆಗೆಣಸುಗಳನ್ನು ಆಯುವುದು ನಿಕೃಷ್ಟದ ಕೆಲಸ ಎಂದು ಬಗೆದ ಪುರುಷ ಅದನ್ನು ಮಹಿಳೆಯ ಪಾಲಿಗೆ ಬಿಟ್ಟ. ಇದರಿಂದ ಆಕೆ ದೇಹಕ್ಕೆ ಹೊಂದಿಕೊಳ್ಳುವ ಆಹಾರದ ಮೂಲಗಳು ಯಾವುವೆಂಬುದನ್ನು ಕಂಡುಕೊಂಡಳು. ಅವುಗಳಲ್ಲಿ ಒಗ್ಗಿದಂತಹ ಕೆಲವು ಮೂಲಗಳನ್ನು ತಾನು ನೆಲೆಸಿದ ಸ್ಥಳದಲ್ಲಿಯೇ ಬೆಳೆಯಲು ಪ್ರಯತ್ನಿಸಿ ಪ್ರಥಮ ತೋಟಗಾರಳೂ, ಕೃಷಿಕಳೂ ಆದಳೆಂಬುದು ಖ್ಯಾತ ಇತಿಹಾಸಕಾರರಾದ 'ಕೊಸಾಂಬಿ'ಯವರ ಅಭಿಪ್ರಾಯವಾಗಿದೆ.[1] ಇದು ಮುಂದೆ ತುತ್ತಿನ ಚೀಲ ತುಂಬಿಸುವ ಬೆಳೆಗಳ ಆವಿಷ್ಕಾರಕ್ಕೆ ನಾಂದಿಯಾಯಿತು.

[1] ನಾಗರಾಜ್.ಎಂ.ಜಿ. (2006). *ಕರ್ನಾಟಕ ರೈತ ಚಳುವಳಿಗಳು–ಸತ್ಯಾಗ್ರಹಗಳು*. ಪು.ಸಂ. 10.

***Please cite this article as:*** ದಿನೇಶ.ಎನ್.ಎನ್. ಮತ್ತು ಕೆ.ಆರ್.ಶಾನಿ. (2024). ಕಾಗೋಡು ರೈತ ಚಳುವಳಿಯಲ್ಲಿ ಭಾಗವಹಿಸಿದ ರೈತ ಮಹಿಳಾ ಹೋರಾಟಗಾರರು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 2(6), 74–81.

ಈ ಎಲ್ಲದರಿಂದಾಗಿಯೇ ಹೆಣ್ಣು ವ್ಯವಸಾಯದ ತಾಯಿ ಎಂಬ ಮಾತು ರೂಢಿಯಲ್ಲಿದೆ. ಸ್ತ್ರೀಯರು ನೆಲಸಂಬಂಧಿ ಕೆಲಸಗಳಲ್ಲಿ ತೊಡಗಿದ್ದ ಮೊದಲಿಗರಾಗಿದ್ದ ಕಾರಣ ಅವರೇ ಅತ್ಯಂತ ಪ್ರಾಚೀನ ರೈತರು ಎಂದು 'ಲೌಟಿ' ಎಂಬ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[2]

ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಕೃಷಿಗೂ ಮಹಿಳೆಗೂ ಇರುವ ನಿಕಟವಾದ ಸಂಬಂಧ ನಮಗೆ ಕಾಣುತ್ತದೆ. ಹೆಣ್ಣು ಭೂಮಿಯ ಸೃಷ್ಟಿಶೀಲತೆಯ ಸಂಕೇತ, ಅವಳು ಮನೆಯ ಕೌಟುಂಬಿಕ ಬದುಕನ್ನು ನಿರ್ವಹಿಸುವುದು, ಕೃಷಿಯ ಅಗತ್ಯತೆಗಳನ್ನು ಪೂರೈಸುವುದು ತನ್ನ ಅದ್ಯ ಕರ್ತವ್ಯವೆಂದು ಭಾವಿಸಿ ಅದರಂತೆ ನಡೆಯುತ್ತಾ ಬಂದಿದ್ದಾಳೆ. ಹೀಗಾಗಿ ಕೃಷಿಗೆ ಸಂಬಂಧಪಟ್ಟ ಎಲ್ಲ ವಿಚಾರಗಳನ್ನು ಆಕೆ ಜವಾಬ್ದಾರಿಯುತವಾಗಿ ನಡೆಸಿಕೊಂಡು ಬಂದಿದ್ದಾಳೆ. ಆದರೆ ಕಾಲಕ್ರಮೇಣದಲ್ಲಿ ಕೃಷಿ ಕ್ಷೇತ್ರ ಕೌಟುಂಬಿಕ ಅಗತ್ಯದಿಂದ ಸಾಮಾಜಿಕ ಅಗತ್ಯಕ್ಕೆ ವಿಸ್ತರಿಸಿಕೊಂಡಾಗ ಹೆಣ್ಣು ಒಳಗಿನ ಜವಾಬ್ದಾರಿಗಳಿಗೆ ಮೀಸಲಾದ ಕಾರಣದಿಂದ ಕ್ರಮೇಣ ಆಕೆ ಕೃಷಿ ಕ್ಷೇತ್ರದ ಜವಾಬ್ದಾರಿ ನಿರ್ವಹಣೆ ಕಾರ್ಯದಿಂದ ಹಿಂದೆ ಸರಿಯಬೇಕಾಯಿತು. ಕೃಷಿ ವ್ಯವಹಾರಿಕ ಸ್ವರೂಪ ಪಡೆಯುತ್ತಾ ಬಂದಿದ್ದು ಈ ಬದಲಾವಣೆಗೆ ಕಾರಣವಾಗಿದೆ. ಪುರುಷ ಭೂಮಿಯ ಮೇಲೆ ಒಡೆತನ ಸ್ಥಾಪಿಸಿಕೊಂಡು ಕೃಷಿ ಒಂದು ಉದ್ಯಮದ ಸ್ವರೂಪ ಪಡೆದ ಮೇಲೆ ಜಮೀನ್ದಾರರು, ಭೂಮಾಲೀಕರು ಭೂಮಿಯ ಮೇಲೆ ಸ್ವಾಮ್ಯ ಸಾಧಿಸಿದರು. ಕೈಗಾರೀಕರಣ ಎಂಬುವುದು ಭೂಮಾಲೀಕ ವರ್ಗವನ್ನು ಒಳಗೊಂಡಂತೆ ಕೃಷಿ ಕಾರ್ಮಿಕರಲ್ಲಿಯೂ ಅನೇಕ ಬದಲಾವಣೆಯನ್ನು ತಂದಿತು. ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನದ ಬಳಕೆ, ಆಧುನಿಕ ಬೇಸಾಯ ಪದ್ಧತಿ ಮತ್ತು ಯಂತ್ರಗಳ ಮೇಲಿನ ಅವಲಂಬನೆಯಿಂದಾಗಿ ಸಾಕಷ್ಟು ಕೃಷಿ ಕಾರ್ಮಿಕರು ತಮ್ಮ ಕೆಲಸವನ್ನು ಕಳೆದುಕೊಳ್ಳುವಂತಾಯಿತು. ಕೃಷಿಗೆ ಬಳಸಲಾಗುತ್ತಿದ್ದ ಬಂಡವಾಳವು ಕ್ರಮೇಣ ಕೈಗಾರಿಕೆಗಳಲ್ಲಿ ಬಳಕೆಯಾಯಿತು. ಕೃಷಿ ಮತ್ತು ಕೈಗಾರಿಕೆಗಳ ನಡುವಿನ ಸ್ಥಾನಗಳ ವಿಂಗಡನೆಗಳಿಂದಾಗಿ ಸಣ್ಣ ರೈತರು, ಭೂರಹಿತ ಕೂಲಿ ಕಾರ್ಮಿಕರ ಮೇಲೆ ಗಾಢ ಪ್ರಭಾವ ಉಂಟಾಯಿತು. ಸಾಮಾನ್ಯವಾಗಿ ಕೃಷಿ ಕಾರ್ಮಿಕರೆಲ್ಲರೂ ಭೂರಹಿತರಾಗಿರುತ್ತಾರೆ.

ಮಹಿಳೆಯರು ಮನೆ, ಕುಟುಂಬ, ಊರು ಎಂಬ ಭಾವುಕತೆ ಮತ್ತು ಜವಾಬ್ದಾರಿಗಳಿಂದಾಗಿ ಮನೆಯಲ್ಲೇ ಉಳಿಯಬೇಕಾಯಿತು. ಹೊಲ, ಗದ್ದೆ, ಜಮೀನುಗಳಿಂದ ಹೆಣ್ಣು ಮಕ್ಕಳು ತಮ್ಮ ಬಡತನ ತಾಳಲಾರದೇ ಮಾಲೀಕ ಕೊಟ್ಟಷ್ಟು ಕೂಲಿ ಪಡೆದು ಜೀವಿಸುವಂತಾಯಿತು. ಕೌಟುಂಬಿಕ ಜವಾಬ್ದಾರಿ, ಉದ್ಯೋಗದ ಅಭದ್ರತೆಯಿಂದಾಗಿ ಮಾಲೀಕ ಕೈಗೆ ಹಾಕಿದ ಕೂಲಿ ಹಣವನ್ನು ಚಕಾರವೆತ್ತದೇ ಪಡೆದು ಬಾಳತೊಡಗಿದರು. ಸಮಾನ ಕೆಲಸಕ್ಕೆ ಸಮಾನ ಕೂಲಿ, ಹೆಚ್ಚು ಕೂಲಿ ಎಂದೇನಾದರೂ ದನಿ ಎತ್ತಿದರೆ ಇರುವ ಕೆಲಸವನ್ನು ಕಳೆದುಕೊಂಡು ಉಪವಾಸ ಸಾಯುವ ಸ್ಥಿತಿ ಉಂಟಾಯಿತು. ಹೊಸ ಬೇಸಾಯದ ಕ್ರಮಗಳು, ವೈಜ್ಞಾನಿಕ ಕೃಷಿ ವಿಧಾನಗಳು ಮಹಿಳೆಯರ ಕೃಷಿ ಚಟುವಟಿಕೆಗಳಿಗೆ ಧಕ್ಕೆ ತಂದವು. ಇದರಿಂದಾಗಿ ಕರ್ನಾಟಕದಲ್ಲಿ ರೈತರ ಪರ ಹೋರಾಡುವ ಸಲುವಾಗಿ 1938ರಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷದ ಅಂಗ ಸಂಸ್ಥೆಯಾಗಿ 'ಕಿಸಾನ್ ಸಭಾ' ಜನ್ಮ ತಾಳಿತು. 'ಕರ್ನಾಟಕ ರಾಜ್ಯ ಘಟಕದ ಕಿಸಾನ್ ಸಭೆ' ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ರೈತರ ಪರವಾಗಿ ಹೋರಾಡಲು 'ರೈತ ಸಂಘ' ಎಂಬ ಸಂಘಟನೆಯನ್ನು ಪ್ರಾರಂಭಿಸಿತು.[3]

ಸ್ವಾತಂತ್ರ್ಯಾನಂತರ ಕರ್ನಾಟಕದಲ್ಲಿ ನಡೆದ ರೈತ ಚಳುವಳಿಗಳಲ್ಲಿ ಕಾಗೋಡು ಸತ್ಯಾಗ್ರಹ ಬಹಳ

[2] ಸುಸಾನ್ ಕೆ.ಫೋಲಿ. (2004). *ಪೆಸಂಟ್ ವಿಮೆನ್. ಇನ್: ವಿಮೆನ್ ಇನ್ ಫ್ರಾನ್ಸ್ ಸಿನ್ಸ್ 1789.* ಪು.ಸಂ. 80–83.

[3] ನಾಗರಾಜ್.ಎಂ.ಜಿನಾಗರಾಜ್.ಎಂ.ಜಿ. (2006) ಪೂರ್ವೋಕ್ತ. ಪು.ಸಂ.11.

ಪ್ರಮುಖವಾದುದು. ಕಾಗೋಡು ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ತಾಳಗುಪ್ಪ ಹೋಬಳಿಯಲ್ಲಿರುವ ಒಂದು ಪುಟ್ಟ ಗ್ರಾಮ. ಇಲ್ಲಿ 1950–51ರಲ್ಲಿ ದೀವ ಜಾತಿಗೆ[4] (ಪ್ರವರ್ಗ 2ಎ) ಸೇರಿದ ಗೇಣಿದಾರರು ಅಲ್ಲಿನ ಲಿಂಗಾಯಿತ ಭೂಮಾಲೀಕರ ವಿರುದ್ಧ ನಡೆಸಿದ ಹೋರಾಟವೇ ಕಾಗೋಡು ಸತ್ಯಾಗ್ರಹ.[5] ಕಾಗೋಡಿನಲ್ಲಿ ಊರಿನ ನಾಲ್ಕೈದು ಕುಳಗಳನ್ನು (ಕುಟುಂಬ) ಬಿಟ್ಟರೆ ಉಳಿದವರು ತೀರಾ ಬಡವರು, ಅಶಿಕ್ಷಿತರೂ ಆಗಿದ್ದರು. ದೀವರು ಹಾಗೂ ಇತರರು ಮೇಲ್ಜಾತಿಯ ಭೂಮಾಲೀಕರ ಬಳಿ ಗೇಣಿದಾರರಾಗಿದ್ದರೆ, ದಲಿತ ಜನಾಂಗ ಕೃಷಿ ಕೂಲಿ ಕಾರ್ಮಿಕರಾಗಿದ್ದರು. ಇಲ್ಲಿನ ಭೂಮಾಲೀಕರಲ್ಲಿ ಕೆಲವರು ನೂರಾರು ಎಕರೆ, ಮತ್ತೆ ಕೆಲವರು ಸಾವಿರಾರು ಎಕರೆ ಭೂಮಿಯ ಒಡೆಯರಾಗಿದ್ದರು. ಇವರು ತಮ್ಮೆಲ್ಲಾ ಭೂಮಿಯನ್ನು ತಾವೇ ನೇರವಾಗಿ ಸಾಗುವಳಿ ಮಾಡಲಾರದೆ ಬಡ ರೈತರಾದ ದೀವರಿಗೆ ಕೊಟ್ಟಿದ್ದರು. ಜಮೀನಿನಲ್ಲಿ ಗೇಣಿ ಸಾಮಾನ್ಯವಾಗಿ 1/3 ರಷ್ಟು ಅಥವಾ 1/2 ಭಾಗದಷ್ಟಿತ್ತು. ಗೇಣಿ ಒಕ್ಕಲುಗಳು[6] ದಣಿಗಳಿಗೆ ಗೇಣಿಯಲ್ಲದೆ ಬಿಟ್ಟಿ ಕೆಲಸವನ್ನು ಮಾಡಬೇಕಿತ್ತು. ರಾಷ್ಟ್ರಮಟ್ಟದಲ್ಲಿ ಗಮನ ಸೆಳೆದ ಕಾಗೋಡು ಸತ್ಯಾಗ್ರಹಕ್ಕೆ ಮೂಲ ಕಾರಣ ಗೇಣಿ ಭತ್ತವನ್ನು ಅಳೆಯಲು ಬಳಸುತ್ತಿದ್ದ ಕೊಳಗಕ್ಕೆ ಸಂಬಂಧಿಸಿದ ಸಂಘರ್ಷ.[7] ಸಾಂಪ್ರದಾಯಿಕವಾಗಿ ಅಳತೆಯನ್ನು ಮೂರು ಸೇರಿನ ಕೊಳಗದಲ್ಲಿ ಅಳೆಯಲಾಗುತ್ತಿತ್ತು. ಆದರೆ ಭೂಮಾಲೀಕರು ಮೂರುವರೆಯಿಂದ ನಾಲ್ಕು ಸೇರು ತುಂಬುವಂತಹ ಕೊಳಗವನ್ನು ಸಿದ್ಧಪಡಿಸಿಕೊಂಡು ಅದರಲ್ಲಿ ಗೇಣಿಯನ್ನು ವಸೂಲಿ ಮಾಡುತ್ತಿದ್ದರು. ಹೀಗೆ ಲೆಕ್ಕಕ್ಕಿಂತ ಹೆಚ್ಚಿನ ಗೇಣಿಯನ್ನು ವಸೂಲಿ ಮಾಡಿ ಗೇಣಿದಾರರನ್ನು ಶೋಷಿಸುತ್ತಿದ್ದ ಭೂ ಮಾಲೀಕರ ಈ ಮೋಸದ ಕ್ರಮ, ಶೋಷಣೆ ಹಾಗೂ ಸಾಮಾಜಿಕ ತಾರತಮ್ಯವನ್ನು ಖಂಡಿಸಿ ಕಾಗೋಡಿನ ರೈತರ ಜೊತೆಗೆ ರೈತ ಮಹಿಳೆಯರು ಹೋರಾಟ ಆರಂಭಿಸಿದರು.

**ಕಾಗೋಡು ರೈತ ಚಳುವಳಿಯ ಪ್ರಮುಖ ರೈತ ಮಹಿಳಾ ಹೋರಾಟಗಾರರು**

**ಷವಾಜಿ ಮಾಸ್ತ್ಯಮ್ಮನವರು**

ಕಾಗೋಡಿನ ಷವಾಜಿ ಕುಟುಂಬದ ಪುಟ್ಟನಾಯ್ಕರಿಗೆ ಇಬ್ಬರು ಗಂಡು ಮಕ್ಕಳು, ಹಿರಿಯರು ಬೀರನಾಯ್ಕರು, ಎರಡನೆಯವರು ಸಣ್ಣಪ್ಪನವರು. ಸಣ್ಣಪ್ಪನವರ ಪತ್ನಿ ಮಾಸ್ತ್ಯಮ್ಮನವರು. ಈ ದಂಪತಿಗಳಿಗೆ ಮಕ್ಕಳಿರಲಿಲ್ಲ. ಕಾಗೋಡು ಸತ್ಯಾಗ್ರಹದ ಸಮಯಕ್ಕೆ ಮಾಸ್ತ್ಯಮ್ಮ ವಿಧವೆಯಾಗಿದ್ದರು. ದೊಡ್ಡ ಕುಟುಂಬವಾಗಿದ್ದ ಷವಾಜಿಯವರ ಮನೆ ಕಾಗೋಡು ಚಳುವಳಿಯ ಚಳುವಟಿಕೆಗಳ ಕೇಂದ್ರವಾಗಿತ್ತು. ಕಾಗೋಡು ಗುರುವೇಗೌಡರ ದರ್ಪ ಮತ್ತು ಗೇಣಿ ಕೊಳಗದ ಸುಲಿಗೆ ಎಲ್ಲ ರೈತರಲ್ಲಿಯು ಅನ್ಯಾಯವೆಂಬ ಭಾವನೆ ಹುಟ್ಟಿಸಿತ್ತು. ರೈತ ಸಂಘ ಮತ್ತು ಸಮಾಜವಾದಿ ಮುಖಂಡರಾಗಿದ್ದ ಗೋಪಾಲಗೌಡರು ಇನ್ನಿತರರ ಪ್ರಭಾವದಿಂದಾಗಿ ಮಾಸ್ತ್ಯಮ್ಮ, ಕೆಂಚನ ಬೀರಮ್ಮ ಮೊದಲಾದವರು ಒಡೆಯರ ಭೂಮಿಯಲ್ಲಿ ಪೋಲೀಸರ ಬಿಗಿ ಬಂದೋಬಸ್ತು ಮತ್ತು ಲಾಠಿ

[4] ಕಾವ್ಯಶ್ರೀ.ಕೆ ಮತ್ತು ಡಾ.ಗಂಗಾಧರ ದೈವಜ್ಞ, (2022). ಸೋಸಿಯೋ–ಎಕಾನೊಮಿಕ್ ಸ್ಟೇಟಸ್ ಆ ದಿ ದೀವರು ಕಮ್ಯೂನಿಟಿ ವಿಥ್ ರೆಫರೆನ್ಸ್ ಟು ಶಿವಮೊಗ್ಗ ಡಿಸ್ಟ್ರಿಕ್ಟ್, ಪು.ಸಂ.566-571.

[5] ಚಂದ್ರಶೇಖರ್.ಎಸ್. (2002). *ಆಧುನಿಕ ಕರ್ನಾಟಕದ ಆಂದೋಲನಗಳು.* ಪು.ಸಂ. 137

[6] ವಿಶೇಷತಃ ಕೃಷಿ ಭೂಮಿಯ ಉಪಯೋಗಕ್ಕಾಗಿ, ಅದರ ಒಡೆಯನಿಗೆ ಸಲ್ಲುವ ಪ್ರತಿಫಲ. ಭೂಮಿ ಮತ್ತು ನಿಸರ್ಗದ ಇತರ ನಿರುಪಾಧಿಕ ಕೊಡುಗೆಗಳ ಒಡೆತನದಿಂದ ಪಡೆದ ವರಮಾನ ಎಂಬುದು ಆಲ್ಫ್ರೆ ಮಾರ್ಷಲ್ ನೀಡಿರುವ ವ್ಯಾಖ್ಯೆ. ಬಳಕೆಗಾಗಿ ಭೂಮಿಯನ್ನು ಗುತ್ತಿಗೆಗೆ ಕೊಟ್ಟಿದ್ದಕ್ಕಾಗಿ ಭೂಮಾಲೀಕ ಪಡೆದ ಪರಿಹಾರವೇ ಗೇಣಿ, ಎಂಬುದು ನ್ಯಾಯಶಾಸ್ತ್ರದ ವ್ಯಾಖ್ಯೆ. ಮೈಸೂರು ವಿಶ್ವವಿದ್ಯಾನಿಲಯ ವಿಶ್ವಕೋಶ, https://kn.wikisource.org/s/27n

[7] ಬಳ್ಳ –ಎಂದರೆ ನಾಲ್ಕು ಸೇರಿನ ಅಳತೆ, ಕೊಳಗ–ಬಳ್ಳ (ಬಳ್ಳ) ಎಂಬ ಅರ್ಥವನ್ನು ನೀಡುತ್ತದೆ. ನಾಗರಾಜ್.ಎಂ.ಜಿ. (2006) ಪೂರ್ವೋಕ್ತ. ಪು.ಸಂ. 11.

ಏಟುಗಳಿಗೂ ಹೆದರದೆ ಚಳುವಳಿಯಲ್ಲಿ ಭಾಗವಹಿಸಿರುವುದು ಜಯಪ್ಪಗೌಡ. ಡಿ.ಎಸ್ ಅವರ ಲೇಖನದಿಂದ ತಿಳಿದುಕೊಳ್ಳಬಹುದು.[8]

'ಉಳುವವನೇ ಹೊಲದೊಡೆಯ' ಎಂಬ ಸಮಾಜವಾದಿಗಳ ಘೋಷಣೆ, ಈ ರೈತ ಮಹಿಳೆಯರ ಬಾಯಲ್ಲಿ "ಯಾರದು ಭೂಮಿ ನಂದೇ ಭೂಮಿ" ಎಂದು ಮಾರ್ಪಟ್ಟು ಆಗ ಜನಪ್ರಿಯವಾಗಿತ್ತು. ಡಾ.ರಾಮಮನೋಹರ ಲೋಹಿಯಾರವರು ಶ್ರೀಮತಿ ಮಾಸ್ತ್ಯಮ್ಮ ಅವರನ್ನು ತಮ್ಮ ಪಕ್ಷದ ಸಭೆಗಳಲ್ಲಿ ಉದಾಹರಿಸಿದ್ದರು.[9] ಪಕ್ಷದ ಸಂಘಟನೆಯಲ್ಲಿ ಕಾಗೋಡಿನ ಜಟ್ಟಪ್ಪ, ಕೆಂಚಪ್ಪ, ಮಾಸ್ತಿ ಅಂತಹ ರೈತರಿಗೂ ಸ್ಥಾನಮಾನ ದೊರೆಯಬೇಕು ಎಂಬ ತಮ್ಮ ಇರಾದೆಯನ್ನು ಹೇಳುತ್ತಿದ್ದರು. ಗೋಪಾಲಗೌಡರು, ಡಾ.ಲೋಹಿಯಾರವರು ಅವಿದ್ಯಾವಂತ ರೈತ ಮಹಿಳೆಯರ ಮೇಲೂ ತಮ್ಮ ಪ್ರಭಾವವನ್ನು ಬೀರಿದ್ದರು ಎಂಬುದಕ್ಕೆ 1951ರ ಕಾಲಕ್ಕೆ, ಕಾಗೋಡಿನ ಮಹಿಳೆಯರು ಚಳುವಳಿಯಲ್ಲಿ ಭಾಗವಹಿಸುವಂತೆ ಮಾಡಿರುವುದೇ ಸಾಕ್ಷಿ ಎಂದಿದ್ದಾರೆ.[10]

**ಬಿಳಿಯನ ಸಾವಿತ್ರಮ್ಮ**

"ಗಣಪತಿಯಪ್ಪನವರ ಕರೆಯಂತೆ ಕಾಗೋಡು ಸತ್ಯಾಗ್ರಹಕ್ಕೆ ಭಾಗವಹಿಸಿದೆ, ಹಾಗೇ ಹೋದ ನಮ್ಮನ್ನೆಲ್ಲಾ ಪೋಲೀಸರು ಬಂಧಿಸಿ ಕರೆದೊಯ್ದರು. ಆದರೆ ಹೆಂಗಸರನ್ನು ಯಡದಾರಿ (ಮಧ್ಯದಾರಿಯಲ್ಲಿಯೇ)ಯಲ್ಲಿಯೇ ಬಿಟ್ಟುಬಿಟ್ಟರು. ನಂತರ ನಮ್ಮನ್ನು ಕೋರ್ಟಿಗೆ ಕರೆಸಿದರು. ಮೂರಾಲ್ಕು ತಿಂಗಳುಗಳ ಕಾಲ ಕೋರ್ಟ್ ಹಿಯರಿಂಗ್‌ಗಳಿಗೆ ಹಾಜರಾದೆ. ನಂತರದಲ್ಲಿ ವಕೀಲರನ್ನಿಟ್ಟು ಕೇಸನ್ನು ವಜಾ ಆಗುವಂತೆ ಮಾಡಲಾಯಿತು" ಎಂಬುದು ಬಿಳಿಯನ ಸಾವಿತ್ರಮ್ಮನ ಕಾಗೋಡು ಸತ್ಯಾಗ್ರಹದ ಅನುಭವದ ಮಾತು ಮತ್ತು ಇವರಿಗೆ ಎರಡು ಗಂಡು ಹಾಗೂ ಮೂರು ಹೆಣ್ಣು ಮಕ್ಕಳಿದ್ದಾರೆ ಎಂದು ಡಾ.ಹಿ.ಚಿ.ಬೋರಲಿಂಗಯ್ಯ ಅವರು ತಿಳಿಸಿದ್ದಾರೆ. ಇವರು ಕೂಡ ನಾಲ್ಕು ಸೇರಿನ ಕೊಳಗದಲ್ಲಿಯೇ ಗೇಣಿ ಭತ್ತವನ್ನು ಅಳೆಸುತ್ತಿದ್ದರು ಎಂಬುದನ್ನು ಒತ್ತಿ ಹೇಳುತ್ತಾರೆ. ಸತ್ಯಾಗ್ರಹದ ಕಾಲಕ್ಕೆ ಇವರ ವಿವಾಹವಾಗಿರಲಿಲ್ಲ. ಸತ್ಯಾಗ್ರಹದ ಮಾರನೆಯ ವರ್ಷ ಇವರ ವಿವಾಹವಾಯಿತು. ತಂದೆಯ ಮನೆಯ ಜಮೀನು ಮೂರು ಎಕರೆ ಇದ್ದಿತು. ಅದು ಗೇಣಿಯ ಜಮೀನು, ತಂದೆಯ ಹೆಸರು ಬಿಳಿಯನ ಕನ್ನಪ್ಪ, ಇವರು ಒಡೆಯರ ಮನೆಯ ತೋಟಕ್ಕೆ ಆಳು ಹೋಗುತ್ತಿದ್ದರು. ಒಡೆಯರು ತಮ್ಮಿಂದ ಕಾನು ಕಂದಾಯವೆಂದು ವಸೂಲು ಮಾಡುತ್ತಿದ್ದರು, 'ಸಲಿಗೆ' ಭತ್ತ ವಸೂಲು ಮಾಡುತ್ತಿದ್ದರು ಎನ್ನುವುದು ವಿವರಣೆ. ಆಗಿನ ಕಾಲದಲ್ಲಿ ಸವಾಜಿಯವರು, ವಕೀಲಿನ ಮನೆಯವರು ಹಾಗೂ ಗಿರಿಯನ ಮನೆಯವರು ಅವರ ಕೇರಿಯಲ್ಲಿ ಸ್ವಲ್ಪ ಮಟ್ಟಿನ ಗಟ್ಟಿಕುಳಗಳಾಗಿದ್ದರು. ಗೇಣಿ ಭತ್ತವನ್ನು ಒಡೆಯರ ಮನೆಯ ಪಳತನ ಮನೆಗೆ ತುಂಬಿಬರಲು ಗಂಡಾಳಿನೊಂದಿಗೆ ಸಹಾಯಕ್ಕೆ ಹೆಣ್ಣಾಳುಗಳು ಹೋಗಬೇಕಾಗಿತ್ತು. ಕೋರ್ಟಿನಲ್ಲಿ ಬಿಡುಗಡೆಯಾಗುವಾಗ, ಸಾಗರದಲ್ಲಿ ಅಂಗಡಿ ಇಟ್ಟಿದ್ದರು. ಗುತ್ಯಪ್ಪ ಎಂಬುವವರು ನಮ್ಮ ಪರವಾಗಿ ಬಂದು ಸಾಕ್ಷ್ಯ ಹೇಳಿದ್ದರು ಎಂದು ನೆನಪು ಮಾಡಿಕೊಂಡಿದ್ದಾರೆ ಎಂದು ಡಾ.ಹಿ.ಚಿ. ಬೋರಲಿಂಗಯ್ಯ ಅವರ ಅಧ್ಯಯನದಿಂದ ತಿಳಿಯಬಹುದು.[11]

8 ಜಯಪ್ಪಗೌಡ.ಡಿ.ಎಸ್. (2011). *ಸಮಾಜವಾದಿ ಶಾಂತವೇರಿ ಗೋಪಾಲಗೌಡ.* ಪು.ಸಂ. 12

9 ಮುಜಾಫರ್ ಅಸ್ಸಾದಿ. (2009). *ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ: ರೈತ, ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿಗಳು.* ಪು.ಸಂ. 68.

10 ಬೋರಲಿಂಗಯ್ಯ ಹಿ.ಚಿ. ಎನ್.ಹುಚ್ಚಪ್ಪ ಮಾಸ್ತರ. (2002). ಕಾಗೋಡು ಚಳವಳಿ. ಪು.ಸಂ.176.

11 ಬೋರಲಿಂಗಯ್ಯ ಹಿ.ಚಿ. ಎನ್.ಹುಚ್ಚಪ್ಪ ಮಾಸ್ತರ. (2002). ಪೂರ್ವೋಕ್ತ.226.

**ಕೋಣೆ ಕನ್ನಮ್ಮ**

ಮೂರೂವರೆ ಎಕರೆ ಗೇಣಿ ಜಮೀನಿನಲ್ಲಿ ಹುಲ್ಲು ಮಾಡಿನ ಮನೆಯಲ್ಲಿ ಗಂಡನೊಂದಿಗೆ ವಾಸವಾಗಿದ್ದ ಕೋಣೆ ಕನ್ನಮ್ಮ. ಊರಿನ ಹಿರಿಯರಾದ ಗೋಪಾಲಗೌಡರು, ಗಣಪತಿಯಪ್ಪನವರು ಮತ್ತು ಲೋಹಿಯಾರವರ ಪ್ರೇರಣೆಯೊಂದಿಗೆ ಸತ್ಯಾಗ್ರಹಕ್ಕೆ ಇಳಿದಿದ್ದೆ ಎಂದು ಹೇಳುವ ಕೋಣೆ ಕನ್ನಮ್ಮನವರು. ಕಾಗೋಡು ಸತ್ಯಾಗ್ರಹದಲ್ಲಿ ಭಾಗಿಯಾಗಿ ಪೋಲೀಸರಿಂದ ಬಂಧನಕ್ಕೆ ಒಳಗಾದವರು. ಆದರೆ ಇವರನ್ನು ಜೈಲಿಗೆ ಹಾಕಲಿಲ್ಲ. ಬದಲಿಗೆ ಸ್ವಲ್ಪ ದೂರ ಒಯ್ದು ಪೋಲೀಸರು ಇವರನ್ನು ಬಿಟ್ಟು ಬಿಟ್ಟರು. ನಾಲ್ಕು ಸೇರಿನ ತಾಮ್ರದ ಕೊಳಗದಲ್ಲಿ ಇಲ್ಲಿನ ಗೌಡರು ಗೇಣಿ ಭತ್ತ ಅಳೆಯಿಸಿಕೊಳ್ಳುತ್ತಿದ್ದರು ಎಂಬುದನ್ನು ಕೋಣೆ ಕನ್ನಮ್ಮ ಒತ್ತಿ ಹೇಳುತ್ತಾರೆ. ಸತ್ಯಾಗ್ರಹಕ್ಕೆ ಬರಬೇಕೆಂದು ಹೆಂಗಸರನ್ನು ಕೂಡ ಮುಖಂಡರು ಕರೆದಾಗ ಹಿಂದೆ ಮುಂದೆ ಆಲೋಚಿಸಿದೆ ಮಂಕರಿ ಹೊತ್ತು ಕನ್ನಮ್ಮ ಗದ್ದೆಗೆ ಸಾಗಿದ್ದರು. ಕನ್ನಮ್ಮನನ್ನು ಅಲ್ಲಿ ಉಳುಮೆ ಕೆಲಸಕ್ಕೆ ಇಳಿದಿದ್ದ ಗಂಡಸರೊಂದಿಗೆ ಬಂಧಿಸಿದ್ದ ನಂತರ ದೂರ ಒಯ್ದು ಬಿಡುಗಡೆ ಮಾಡಿದ್ದನ್ನು ನೆನೆಯುತ್ತಾರೆ. ನಮ್ಮನ್ನು ಭೂಮಾಲೀಕರು ತಮ್ಮ ಮನೆ ಬಳಕೆಗೆ ಬೇಕಾಗುವ ಅಕ್ಕಿ ತಯಾರಿಸಲು, ಭತ್ತ ಕುಟ್ಟುವ ಕೆಲಸಕ್ಕೆ ಕರೆಯಿಸಿಕೊಳ್ಳುತಿದ್ದರು. ಅದಕ್ಕೆ ಕೂಲಿ ಕೊಟ್ಟರೆ ಕೊಟ್ಟರು, ಇಲ್ಲದಿದ್ದರೆ ಇಲ್ಲವೆಂದು ತಿಳಿಸುತ್ತಾರೆ. ಆಗಿನ ಮೂರೂವರೆ ಎಕರೆ ಜಮೀನಿನಲ್ಲಿ ಗಂಡ ಹೆಂಡತಿ ದುಡಿದರೂ ಅದು ಜೀವನಕ್ಕೆ ಸಾಲುತ್ತಿರಲಿಲ್ಲ, ಮತ್ತೆ ಕೂಲಿಗೆ ಹೋಗುತ್ತಿದ್ದೆವು ಎಂದು ಹೇಳುವ ಇವರು ವರ್ಷಕ್ಕೆ ಬರೀ ಎರಡು ಜೊತೆ ಬಟ್ಟೆ ಮಾತ್ರ ಹೊಲಿಸುತ್ತಿದ್ದವು ಎನ್ನುತ್ತಾರೆ. ಇವರಿಗೆ ಮೂರು ಜನ ಹೆಣ್ಣು ಮಕ್ಕಳಿದ್ದಾರೆ. ಮೂರೂವರೆ ಎಕರೆ ಜಮೀನು ಇದೆ. ಒಬ್ಬ ಮಗಳಿಗೆ ಮದುವೆ ಮಾಡಿ ಅಳಿಯನನ್ನು ಮನೆಯಲ್ಲಿ ಇಟ್ಟುಕೊಂಡು ನೆಮ್ಮದಿಯಿಂದ ಜೀವನ ಸಾಗುತ್ತಿದೆ. ಸತ್ಯಾಗ್ರಹದ ಸಮಯದಲ್ಲಿ ಪೋಲೀಸರು ಊರಿನ ಮನೆ ಮನೆಗೆ ನುಗ್ಗಿ ಗಂಡಸರನ್ನು ಸಿಕ್ಕಾಪಟ್ಟೆ ಥಳಿಸಿದ್ದರು, ನನ್ನ ಗಂಡನನ್ನು ಜೈಲಿಗೆ ಹಾಕಿದ್ದರು ಎಂದು ಕನ್ನಮ್ಮ ಆವೇಶದಿಂದ ನೆನೆಯುತ್ತಾರೆ. ಹಾಗೆಯೇ ಹೆಣ್ಣು ಮಕ್ಕಳಿಗೆ ಪೋಲೀಸರಿಂದಾಗಲೀ, ಸರ್ಕಾರಿ ಅಧಿಕಾರಿಗಳಿಂದಾಗಲೀ ತೊಂದರೆಯಾಗಲಿಲ್ಲವೆಂದು ಸಮಾಧಾನ ವ್ಯಕ್ತಪಡಿಸಿರುವುದನ್ನು ಎನ್.ಹುಚ್ಚಪ್ಪ ಮಾಸ್ತರ "ಕಾಗೋಡು ಚಳವಳಿ" ಪುಸ್ತಕದಲ್ಲಿ ವಿವರಿಸಿದ್ದಾರೆ.[12]

**ಮಡಿವಾಳ ಕನ್ನಮ್ಮ**

ಕಾಗೋಡು ಸತ್ಯಾಗ್ರಹದಲ್ಲಿ ಭಾಗಿಯಾದ ಹೆಣ್ಣುಮಕ್ಕಳಲ್ಲಿ ಕನ್ನಮ್ಮನವರೂ ಒಬ್ಬರು. ಇವರನ್ನು ಪೋಲಿಸರು ಬಂಧಿಸಿದರೂ ಜೈಲಿಗೆ ಹಾಕಲಿಲ್ಲ. ಇವರಿಂದ ಮುಚ್ಚಳಿಕೆ ಹೇಳಿಕೆ ತೆಗೆದುಕೊಂಡು ಅಲ್ಲಿಂದಲ್ಲಿಗೆ ಬಿಟ್ಟು ಕಳಿಸಿದರು. ಇವರು ಊರಿನ ಗಣಪತಿಯಪ್ಪನವರ, ಸವಾಜಿಯವರ ಮಾತಿನಂತೆ ಸತ್ಯಾಗ್ರಹಕ್ಕೆ ಇಳಿದಿದ್ದರು. ಗೌಡರೂ ಬೇರೆ ಭೂಮಿಗೆ ಕಾಲಿಡಬೇಡಿ ಎಂದು ಹೇಳುತ್ತಿದ್ದರು. ಹೊಟ್ಟೆಗಿಲ್ಲದ ಅವರಿಗೆ ಭೂಮಿ ಉಳುಮೆ ಮಾಡಿ ಬೀಜ ಬಿತ್ತುವುದು ಅನಿವಾರ್ಯವಾಗಿತ್ತು. ಹಾಗಾಗಿ ಗದ್ದೆಗೆ ಹೋಗಲೇಬೇಕೆಂಬ ಅನಿವಾರ್ಯ ಅವರಿಗಿದ್ದುದರಿಂದ ಗದ್ದೆಗೆ ಬಲವಂತವಾಗಿ ಹೋಗುತ್ತಿದ್ದರು. ಅಲ್ಲಿ ಅವರನ್ನು ಬಂಧಿಸಿ ಸ್ವಲ್ಪ ದೂರ ಒಯ್ದು ಬಿಟ್ಟರು. ಹೀಗೆ ಅಂದಿನ ದಿನಗಳನ್ನು ನೆನಪು ಮಾಡಿಕೊಳ್ಳುತ್ತಾರೆ. ಗೌಡರ ಗೇಣಿ ಗದ್ದೆ ಮಾಡಿದರೂ, ಗೇಣಿ ಭತ್ತಕೊಟ್ಟು ಉಳಿದ ಭತ್ತ ಜೀವನಕ್ಕೆ ಸಾಕಾಗದೆ ಕೂಲಿ ನಾಲಿ ಮಾಡಿ ಜೀವನಕ್ಕೆ ಮಾಡಿಕೊಳ್ಳುತ್ತಿದ್ದೆವು ಎಂದು ನೆನಪಿಸಿಕೊಳ್ಳುತ್ತಾರೆ ಎಂದು ಡಾ.ಹಿ.ಚಿ.ಬೋರಲಿಂಗಯ್ಯ ಅವರು ವಿವರಿಸಿದ್ದಾರೆ.[13]

**ಬರ್ಸಿನ ಚೌಡಮ್ಮ**

ಹಿರೇನೆಲ್ಲೂರಿನ ಬರ್ಸಿನ ಕನ್ನಪ್ಪನವರ ಪತ್ನಿಯವರಾಗಿದ್ದ ಶ್ರೀಮತಿ ಚೌಡಮ್ಮನವರು

[12] ಅದೇ. ಪು.ಸಂ.227–228.

[13] ಅದೇ. ಪು.ಸಂ.232.

ಕಾಗೋಡು ಚಳುವಳಿಯಲ್ಲಿ ಭಾಗಿಯಾಗಿದ್ದವರು. ಬಂಧನಕ್ಕೆ ಒಳಪಟ್ಟಿದ್ದರೂ ಜೈಲಿಗೆ ಹಾಕಲಿಲ್ಲ. ಇವರಿಗೆ ಐದೂವರೆ ಎಕರೆ ಸ್ವಂತ ಜಮೀನಿತ್ತು. ಇವರ ಒಬ್ಬಳೇ ಮಗಳಾದ ಮಂಜಮ್ಮನವರನ್ನೂ ಕಾಗೋಡು ಸತ್ಯಾಗ್ರಹದ ಪ್ರಮುಖರಲ್ಲೊಬ್ಬರಾಗಿದ್ದ ಹೆಚ್.ಗಣಪತಿಯಪ್ಪನವರಿಗೆ ಕೊಟ್ಟು ಮದುವೆ ಮಾಡಿದ್ದರಿಂದ, ಅಳಿಯನನ್ನು ಕಾಣುವ ತವಕದಿಂದಲೂ ಚೌಡಮ್ಮನವರು ಸತ್ಯಾಗ್ರಹಕ್ಕೆ ಬಂದಿದ್ದರು.[14] ರೈತರ ಪರವಾಗಿ ಹೋರಾಡುವ ಬಯಕೆಯೂ ಅಳಿಯನಿಗೆ ಬೆಂಬಲವಾಗಿ ಇವರಿಗಿತ್ತು.[15]

**ಕೆಂಚನ ಬೀರಮ್ಮ ಮತ್ತು ಕೆಂಚಪ್ಪ**

"ಯಾರದು ಭೂಮಿ, ನಮ್ಮದು ಭೂಮಿ" ಎಂಬ ಘೋಷಣೆಯೊಂದಿಗೆ ಕಾಗೋಡು ಸತ್ಯಾಗ್ರಹದಲ್ಲಿ ಭಾಗಿಯಾದ ಗಟ್ಟಿಗಿತ್ತಿ ಹೆಣ್ಣು ಮಗಳು ಕೆಂಚನ ಬೀರಮ್ಮ. ಇವರ ಮನೆತನದ ಹೆಸರು ಕೆಂಚನವರ ಮನೆ ಎಂದು. ಇವರ ಗಂಡನ ಹೆಸರೂ ಕೆಂಚಪ್ಪ ಎಂಬುದೇ ಆಗಿತ್ತು. ಕಾಗೋಡು ಸತ್ಯಾಗ್ರಹದಲ್ಲಿ ಗಂಡ ಹೆಂಡತಿ ಇಬ್ಬರೂ ಭಾಗಿಯಾಗಿದ್ದರು. ಆದರೆ ಕೆಂಚಪ್ಪನವರಿಗೆ ನಾಲ್ಕು ತಿಂಗಳು ಕಾಲ ಜೈಲಿಗೆ ಹಾಕಿದ್ದರು. ಬೀರಮ್ಮನವರನ್ನು ಹಾಗೆಯೇ ಬಿಟ್ಟಿದ್ದರು. ಕೆಂಚಪ್ಪನವರಿಗೆ ಇಬ್ಬರು ಹೆಂಡತಿಯರು. ಹಿರಿಯ ಹೆಂಡತಿಯಾದ ಬೀರಮ್ಮನವರಿಗೆ ಮಕ್ಕಳಿಲ್ಲದ ಪ್ರಯುಕ್ತ ಎರಡನೆಯ ವಿವಾಹವಾಗಿದ್ದರು. ಕಾಗೋಡು ಸತ್ಯಾಗ್ರಹದಲ್ಲಿ ಭಾಗಿಯಾಗಿ ಜೈಲಿಗೆ ಹೋಗಿ ಬಂದ ನಂತರ ಈ ದಂಪತಿಗಳಿಬ್ಬರು, ನಾವು ಯಾವುದೇ ಕಾರಣಕ್ಕೂ ಗೌಡರ ಜಮೀನು ಮಾಡುವುದಿಲ್ಲವೆಂದು ಶಪಥ ತೊಟ್ಟು ಹಾಗೆಯೇ ಬದುಕವವರಿದ್ದರು. ಹೀಗೆ ಕೆಲಕಾಲ ಬಾಳಿದ ಕೆಂಚಪ್ಪನವರು ಎರಡನೆಯ ಹೆಂಡತಿಯ ಒತ್ತಾಯಕ್ಕೆ ಮಣಿದರು. ಹಾಗೂ ತಮ್ಮ ಎರಡನೆಯ ಹೆಂಡತಿಯು ಕಾಗೋಡುಗೌಡರ ಮನೆಗೆ ಹೋಗಿ ಮೂರು ಎಕರೆ ಜಮೀನು ಗೇಣಿಗೆ ಪಡೆದು ಬಂದ ನಂತರ ಅದರಲ್ಲೇ ದುಡಿಮೆ ಮಾಡಿ ಬದುಕು ಸಾಗಿಸಿದರು. ಆದರೆ ಈಗ ಕೆಂಚನ ಬೀರಮ್ಮನಾಗಲಿ, ಕೆಂಚಪ್ಪನವರಾಗಲಿ ಬದುಕಿಲ್ಲ. ಆದರೆ ಅವರು ಉದ್ಘೋಷಿಸಿದ 'ಯಾರದು ಭೂಮಿ, ನಮ್ಮದು ಭೂಮಿ' ಎಂಬ ಘೋಷಣೆ ಮಾತ್ರ ಸಾಕಾರಗೊಂಡು ಮೈದಾಳಿ ನಿಂತಿದೆ ಎಂದು ಎನ್.ಹುಚ್ಚಪ್ಪ ಮಾಸ್ತರ "ಕಾಗೋಡು ಚಳವಳಿ" ಪುಸ್ತಕದಲ್ಲಿ ವಿವರಿಸಿದ್ದಾರೆ.[16]

**ರೊಡ್ಡಿ ದೇವಮ್ಮ (ತಡಗಳಲೆ)**

ಬಿ.ಚೆನ್ನಬಸಪ್ಪಗೌಡ ಎಂಬ ಭೂಮಾಲೀಕರು ತಮ್ಮ ದಾಯಾದಿ ವಿಧವೆಯೊಬ್ಬಳ ಜಮೀನನ್ನು ಬೇರಾರು ಮಾಡದೆ, ಅದು ಹಾಳು ಬೀಳಬೇಕೆಂದೂ, ಕ್ರಮೇಣ ಅದು ತನ್ನದಾಗಬೇಕೆಂದೂ ಬಯಸಿದ್ದರು. ಆದರೆ ಆ ವಿಧವೆಯ ಜಮೀನು ಮಾಡುತ್ತಿದ್ದ ಕಿಲಾರದವರ ದಬ್ಬಯಾನೆ ರೊಡ್ಡಿ ಚೌಡಪ್ಪನಾಗಲೀ, ಆಕೆಯ ಇತರೆ ಗೇಣಿದಾರರಾಗಲೀ, ಅವರ ಆಮಿಷಕ್ಕೆ ತಲೆತೂಗಲಿಲ್ಲ. ಆಗ ಇವರು ಉಳುಮೆ ಮಾಡುತ್ತಿದ್ದ ಭೂಮಿಗೆ ನುಗ್ಗಿ ಇವರ ನೇಗಿಲು, ನೊಗಗಳನ್ನು ಕಡಿದು ಹಾಕಿದರು. ಆ ರೀತಿ ದಾಯಾದಿಯ ಹೊಟ್ಟೆಕಿಚ್ಚಿಗೆ ಒಳಗಾಗಿ ತೊಂದರೆಗೆ ಒಳಗಾದ ಗೌಡತಿಯ ಹೆಸರು ತೋಟದ ಮನೆ ಬಂಗಾರಮ್ಮ ಎಂದು. ಒಟ್ಟು ಐದು ಎಕರೆ ಗೇಣಿ ಹೊಂದಿದ್ದ ಚೌಡಪ್ಪನ ಕುಟುಂಬ ಆಗ ಮೂರು ಜನರಿಂದ ಕೂಡಿತ್ತು. "ಮನೆ ಅಳಿಯ"ತನಕ್ಕೆ ಬಂದಿದ್ದ ಚೌಡಪ್ಪನವರು ಕಾಗೋಡು ಸತ್ಯಾಗ್ರಹದಲ್ಲಿ ಭಾಗಿಗಳಾದರೂ ಜೈಲು ಶಿಕ್ಷೆಗೆ ಒಳಗಾಗಲಿಲ್ಲ.[17]

**ಉಪಸಂಹಾರ**

ಭಾರತದ ಇತಿಹಾಸದಲ್ಲಿ ಮಹಿಳೆಯ ಸ್ಥಿತಿ ಸುಧಾರಿಸಲು ಹೋರಾಡಿದ ಮಹನೀಯರಾದಂಥ ರಾಜಾರಾಮ ಮೋಹನರಾಯ್, ಈಶ್ವರಚಂದ್ರ

---

[14] ಬೋರಲಿಂಗಯ್ಯ ಹಿ.ಚಿ. ಮತ್ತು ಎನ್.ಹುಚ್ಚಪ್ಪ ಮಾಸ್ತರ. (2002). ಪೂರ್ವೋಕ್ತ ಪು.ಸಂ.67.

[15] ಅದೇ. 232–233.

[16] ಅದೇ. 233–234.

[17] ಅದೇ. 243.

ವಿದ್ಯಾಸಾಗರ, ಸುಬ್ರಹ್ಮಣ್ಯಭಾರತಿ, ಶರತ್‌ಚಂದ್ರ ಚಟರ್ಜಿ, ಜ್ಯೋತಿಬಾಪುಲೆ, ಡಾ.ಬಿ.ಆರ್.ಅಂಬೇಡ್ಕರ್ ಇನ್ನು ಅನೇಕರನ್ನು ಇಲ್ಲಿ ಸ್ಮರಿಸಬೇಕಾಗುತ್ತದೆ. ಇವರ ಹೋರಾಟದಿಂದ ಮಹಿಳೆಯರಿಗೆ ಶಿಕ್ಷಣ, ಉದ್ಯೋಗದ ಅವಕಾಶ ದೊರೆಯಿತಲ್ಲದೆ ಬಾಲ್ಯವಿವಾಹ ಕಾನೂನು ತಡೆ, ವಿಧವೆಯರಿಗೆ ಮರುಮದುವೆಗೆ ಅವಕಾಶ, ಇನ್ನು ಅನೇಕ ಸಾಮಾಜಿಕ ಸಂಕಟಗಳಿಗೆ ಪರಿಹಾರ ದೊರೆತಿದೆ. ಗ್ರಾಮೀಣ ಮಹಿಳೆಯು ತನ್ನ ಮೂಲಭೂತ ಅವಶ್ಯಕತೆಗಳಿಗಾಗಿ ಹೋರಾಟ ನಡೆಸುವ ಹಂತ ತಲುಪಿದ್ದಾಳೆ. ಇದಲ್ಲದೆ ಸರಕಾರದ ಜಾಗತೀಕರಣ, ಖಾಸಗೀಕರಣದ ನೀತಿಗಳಿಂದ ಪರಿಸರದ ವಿನಾಶಕ್ಕೆ ಸಂಬಂಧಪಟ್ಟಂತೆ ಗಣಿಗಾರಿಕೆ, ಅಣೆಕಟ್ಟುನಿರ್ಮಾಣ, ಉದ್ದಿಮೆಗಳ ಸ್ಥಾಪನೆ ಮುಂತಾದ ಉದ್ದೇಶಗಳಿಗೆ ಭೂಮಿ ಕಳೆದುಕೊಳ್ಳಬೇಕಾದ ಪರಿಸ್ಥಿತಿ ಒದಗಿದೆ. ಇಂತಹ ಸಂದರ್ಭದಲ್ಲಿ ಭೂಮಿ ಕಳೆದುಕೊಂಡ ರೈತ ಮಹಿಳೆಯರು ಸಂಘಟಿತರಾಗಿ ಹೋರಾಟ ನಡೆಸಿದ್ದಾರೆ. ಹಾಗೆಯೇ ಅಲ್ಲಲ್ಲಿ ಸರ್ಕಾರದ, ಸಂಘಸಂಸ್ಥೆಗಳ ತರಬೇತಿಗಳಲ್ಲಿ ಭಾಗವಹಿಸಿ ತನ್ನ ವೃತ್ತಿಗೆ ಸಂಬಂಧಿಸಿದ ಮಾಹಿತಿ ಪಡೆದು ಬದುಕನ್ನು ಹಸನು ಮಾಡಿಕೊಂಡು ಸಾರ್ಥಕತೆ ಕಾಣುತ್ತಿದ್ದಾರೆ. ರೈತರ ನ್ಯಾಯಯುತ ಹಕ್ಕುಗಳಿಗಾಗಿ ಹೋರಾಡುವ ರೈತರ ಸಂಘಟನೆಗಳಲ್ಲಿಯೂ ರೈತ ಮಹಿಳೆಯರು ಕೈ ಜೋಡಿಸುತ್ತಿರುವುದು ಆಶಾದಾಯಕ ಬೆಳವಣಿಗೆ. ಈ ಸಮಸ್ಯೆಗಳು ಇಡೀ ದೇಶದ ಸಮಸ್ಯೆಯೇ ಆಗಿದೆ. ಬದಲಾದ ವಾತಾವರಣದಲ್ಲಿ ಜಾಗತೀಕರಣದ ಅಡ್ಡ ಪರಿಣಾಮಗಳಲ್ಲಿ ಈ ಪರಿಸ್ಥಿತಿ ಎಲ್ಲರಿಗೂ ಒದಗಿದೆ ಎಂಬುವುದರಲ್ಲಿ ಸುಳ್ಳು ಇಲ್ಲ. ಅದರೂ ರೈತಾಪಿ ವರ್ಗದ ಬದುಕು ಹಸನಾದರೆ ರೈತರ ಮತ್ತು ಗ್ರಾಮೀಣ ಮಹಿಳೆಯರ ಬದುಕು ಹಸನಾಗುತ್ತದೆ. ರೈತ ಮಹಿಳೆಗೆ ಶಿಕ್ಷಣ ಮತ್ತು ತರಬೇತಿ ಇವೆಲ್ಲವುಗಳಿಂದ ಭಾರತದ ಗ್ರಾಮಗಳೆಲ್ಲವೂ ಸ್ವಾವಲಂಬಿ ಗ್ರಾಮಗಳಾಗಿ ಸ್ವರಾಜ್ಯ ಸ್ಥಾಪನೆ ಆಗಬೇಕಿದೆ. ತನ್ಮೂಲಕ ಗ್ರಾಮೀಣ ಸ್ವರಾಜ್ಯದಿಂದ ಗ್ರಾಮ ಮಹಿಳೆಯ ಅರ್ಥಾತ್ ರೈತ ಮಹಿಳೆಯ ಬದುಕು ಅರ್ಥಪೂರ್ಣವಾಗಬೇಕಾಗಿದೆ.

**ಪರಾಮರ್ಶನ ಗ್ರಂಥಗಳು**


- ಬಸವರಾಜು.ಜಿ.ಪಿ. (20180. *ಕಾಗೋಡು ಭೂ ಹೋರಾಟದ ಹಿನ್ನೋಟ.* ಕನ್ನಡ ಪುಸ್ತಕ ಪ್ರಾಧಿಕಾರ.
- ಬೋರಲಿಂಗಯ್ಯ, ಹಿ.ಚಿ. ಮತ್ತು ಎನ್. ಹುಚ್ಚಪ್ಪ ಮಾಸ್ತರ. (2002). *ಕಾಗೋಡು ಚಳವಳಿ. ಮಲೆನಾಡು ಜಾನಪದ ಲೋಕ.*
- ಚಂದ್ರಶೇಖರ್.ಎಸ್. (2002). *ಆಧುನಿಕ ಕರ್ನಾಟಕದ ಆಂದೋಲನಗಳು.* ನಮ್ಮ ಪ್ರಕಾಶನ.
- ಗಿರೀಶ್ ತಾಳಿಕಟ್ಟೆ ಮತ್ತು ಕೆ.ಎಲ್.ಅಶೋಕ್. (2022). *ಹೆಚ್.ಆರ್.ಬಸವರಾಜಪ್ಪನವರ ಹಸಿರು ಹಾದಿಯ ಕಥನ.* ಗೌರಿ ಮೀಡಿಯಾ ಟ್ರಸ್ಟ್.
- ಜಯಪ್ಪಗೌಡ ಡಿ. ಎಸ್. (2011). *ಸಮಾಜವಾದಿ ಶಾಂತವೇರಿ ಗೋಪಾಲಗೌಡ.* ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ.
- ಕವಂಟಿ ಎಸ್.ಎಚ್. ಮತ್ತು ವಿ.ಜಿ.ಪೂಜಾರ್. (2000). *ಶ್ರೀ ಕಡಿದಾಳ್ ಮಂಜಪ್ಪ.* ಕರ್ನಾಟಕದ ವಿಧಾನ ಮಂಡಲದ ಗ್ರಂಥಾಲಯ ಸಮಿತಿ.
- ಕಾವ್ಯಶ್ರೀ.ಕೆ ಮತ್ತು ಡಾ.ಗಂಗಾಧರ ದೈವಜ್ಞ. (2022). ಸೋಸಿಯೋ–ಎಕಾನೊಮಿಕ್ ಸ್ಟೇಟಸ್ ಆ ದಿ ದೀವರು ಕಮ್ಯೂನಿಟಿ ವಿಥ್ ರೆಫರೆನ್ಸ್ ಟು ಶಿವಮೊಗ್ಗ ಡಿಸ್ಟ್ರಿಕ್ಟ್, ಕರ್ನಾಟಕ. *ಇಂಟರ್ನ್ಯಾಷನಲ್ ಜರ್ನಲ್ ಆಫ್ ಕ್ರಿಯೇಟಿವ್ ರಿಸರ್ಚ್ ಥಾಟ್ಸ್.* www.ijcrt.org, 10(4), ಪು.ಸಂ.566-571.
- ಕೋಣಂದೂರು ವೆಂಕಪ್ಪಗೌಡ. (2001). ಕಾಗೋಡು ರೈತ ಹೋರಾಟದ ರೂವಾರಿ ಹೆಚ್. ಗಣಪತಿಯಪ್ಪನವರ ಜೀವನ ಚರಿತ್ರೆ. ಯಶಸ್ವಿ ಪ್ರಕಾಶನ.
- ಮುಜಾಫರ್ ಅಸ್ಸಾದಿ. (2009). *ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ: ರೈತ, ರೈತ ಹೋರಾಟ*

*ಹಾಗೂ ಸಾಮಾಜಿಕ ಚಳುವಳಿಗಳು.* ಡಾ. ಬೈರೇಗೌಡ ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

- ನಾಗರಾಜ್.ಎಂ.ಜಿ. (2006). *ಕರ್ನಾಟಕ ರೈತ ಚಳುವಳಿಗಳು–ಸತ್ಯಾಗ್ರಹಗಳು.* ಕರ್ನಾಟಕದ ವಿಧಾನ ಮಂಡಲದ ಗ್ರಂಥಾಲಯ ಸಮಿತಿ.
- ರಾಜಶೇಖರ್ ಜಿ. (1980). *ಕಾಗೋಡು ಸತ್ಯಾಗ್ರಹ.* ಅಕ್ಷರ ಪ್ರಕಾಶನ.
- ರಾಜಶೇಖರ.ಜಿ. (2017). *ಭೂಮಿಗಾಗಿ ಹೋರಾಟ:ಕಾಗೋಡು ಕಥನ.* ಸಂಪುಟ–4, ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಸುಸಾನ್ ಕೆ.ಫೋಲಿ. (2004). *ಪೆಸಂಟ್ ವಿಮೆನ್. ಇನ್: ವಿಮೆನ್ ಇನ್ ಫ್ರಾನ್ಸ್ ಸಿನ್ಸ್ 1789.* ಯುರೋಪಿಯನ್ ಸ್ಟಡೀಸ್ ಸೀರೀಸ್, ಲಂಡನ್, ಪು.ಸಂ. 80–83. https://doi.org/10.1007/978-0-230-80214-8_4

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.82 - 85
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕೌಟಿಲ್ಯನ ಅರ್ಥಶಾಸ್ತ್ರ: ಸಮಕಾಲೀನ ಪ್ರಸ್ತುತತೆ

**ದೇವೇಂದ್ರ ಮಂಡೇದ**

ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಕ್ಕೋಡಿ

***Abstract:***

*ಕೌಟಿಲ್ಯನ ಅರ್ಥಶಾಸ್ತ್ರ ಅತ್ಯಂತ ಉನ್ನತ ರಾಜ್ಯತಂತ್ರ, ಆರ್ಥಿಕ ಕಾರ್ಯನೀತಿ ಮತ್ತು ಸೇನಾ ಕಾರ್ಯತಂತ್ರದ ವಿವರಗಳುಳ್ಳ ಪ್ರಾಚೀನ ಭಾರತೀಯ ಶಾಸ್ತ್ರ ಗ್ರಂಥ ಮತ್ತು ಇದರ ಲೇಖಕ ಕೌಟಿಲ್ಯ. ಕೌಟಿಲ್ಯ ಮೌರ್ಯ ಸಾಮ್ರಾಜ್ಯದ ಸ್ಥಾಪಕ ಸಾಮ್ರಾಟ್ ಚಂದ್ರಗುಪ್ತ ಮೌರ್ಯನ ಗುರುಗಳಾಗಿದ್ದರು. ಇವರಿಗೆ ವಿಷ್ಣುಗುಪ್ತ, ಚಾಣಕ್ಯ ಎಂಬ ಹೆಸರುಗಳೂ ಇವೆ. ರಾಜ್ಯಾಡಳಿತ, ಆರ್ಥಿಕ ನೀತಿ, ಸೇನಾವ್ಯೂಹ ರಚನೆಯ ಕುರಿತ ನಾಲ್ಕನೇ ಶತಮಾನದ ಶಾಸ್ತ್ರಗಂಥವಾಗಿದೆ. ಕೃಷಿ, ಗಣಿಗಾರಿಕೆ ಮತ್ತು ಲೋಹಗಳು, ಪಶುಸಂಗೋಪನೆ, ಔಷಧ, ಅರಣ್ಯ ಹಾಗೂ ವನ್ಯಜೀವಿಗಳ ಪ್ರಾಚೀನ ಆರ್ಥಿಕ ಮತ್ತು ಸಾಂಸ್ಕೃತಿಕ ವಿವರಗಳನ್ನು ಒಳಗೊಂಡಿದೆ.*

***Keywords:*** *ರೈತ ಕೌಟಿಲ್ಯನ ಅರ್ಥಶಾಸ್ತ್ರ, ಆರ್ಥಿಕ ನೀತಿ, ರಾಜ್ಯಾಡಳಿತ ಗ್ರಂಥ.*

## ಪೀಠಿಕೆ

ಸಮಾಜದ ಆರ್ಥಿಕ ಮತ್ತು ರಾಜಕೀಯ ಚಿಂತಕರಲ್ಲಿ ಕೌಟಿಲ್ಯರು ಅಗ್ರಮಾನ್ಯರಾದವರು. ಅಲ್ಲದೇ ಆಡಳಿತಗಾರರು ಚಿಂತಕರು ಹೆಚ್ಚಾಗಿ ವಸ್ತುಸ್ಥಿತಿಯ ಬದಲಾವಣೆಗೆ ಕಾರಣೀಭೂತರಾದ ಅಪ್ರತಿಮ ವ್ಯಕ್ತಿತ್ವವೇ ಚಾಣಕ್ಯರು. ಚಾಣಕ್ಯರು ಕ್ರಿ.ಪೂ. 350–2575ರಲ್ಲಿ ತಕ್ಷಶಿಲೆಯಲ್ಲಿ ಜನಿಸಿದ ಇವರಿಗೆ ವಿಷ್ಣುಗುಪ್ತ, ಚಾಣಕ್ಯ ಎಂಬ ಅಭಿದಾನಗಳುಂಟು ಇವರು ಕುಟಲನೆಂಬ ಗೋತ್ರ ಪ್ರವರ್ತಕನ ವಂಶದಲ್ಲಿ ಹುಟ್ಟಿದ್ದರಿಂದ ಕೌಟಲ್ಯನೆಂದು, ಜನಕ ದೇಶದಲ್ಲಿ ಜನಿಸಿದವರಾದ್ದರಿಂದ ಚಾಣಕ್ಯನೆಂದು ತಂದೆ ತಾಯಿಯರು ಇಟ್ಟ ಹೆಸರು ವಿಷ್ಣುಗುಪ್ತರೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ ನಳಂದ ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ಮುಗಿಸಿ ನಂತರ ಪ್ರಾಧ್ಯಾಪಕರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಚಾಣಕ್ಯ ಎಂದೂ ಕರೆಯಲ್ಪಡುವ ಕೌಟಿಲ್ಯ ಭಾರತದ ಸಾರ್ವಕಾಲಿಕ ಅತ್ಯಂತ ಪ್ರಸಿದ್ಧ ರಾಜಕೀಯ ಅರ್ಥಶಾಸ್ತ್ರಜ್ಞ, ಯಾವುದೇ ರಾಜಕೀಯ ವಿತರಣೆಯ ಕಾರ್ಯಚಟುವಟಿಕೆಗಳ ಹಿಂದಿನ ಚಾಲನಾ ಶಕ್ತಿಯಾಗಿ ಅವರು ಆರ್ಥಿಕ ಚಟುವಟಿಕೆಯನ್ನು ಪರಿಗಣಿಸಿದ್ದಾರೆ. ವಾಸ್ತವವಾಗಿ, ಅವರು ಸೈನ್ಯದ ಮೇಲೆ ಆದಾಯವು ಆದ್ಯತೆಯನ್ನು ತೆಗೆದುಕೊಳ್ಳಬೇಕು ಎಂದು ಹೇಳುವ ಮಟ್ಟಿಗೆ ಹೋದರು ಏಕೆಂದರೆ ಸೈನ್ಯವನ್ನು ಉಳಿಸಿಕೊಳ್ಳುವುದು ಉತ್ತಮವಾಗಿ ನಿರ್ವಹಿಸಲ್ಪಟ್ಟ ಆದಾಯ ವ್ಯವಸ್ಥೆಯಿಂದ ಸಾಧ್ಯ. ಕೌಟಿಲ್ಯನು ರಾಜ್ಯದ ತೆರಿಗೆಯ ಅಧಿಕಾರವನ್ನು ಸೀಮಿತಗೊಳಿಸುವುದನ್ನು ಪ್ರತಿಪಾದಿಸಿದನು, ಕಡಿಮೆ ತೆರಿಗೆ ದರಗಳನ್ನು ಹೊಂದಿದ್ದು, ತೆರಿಗೆಯಲ್ಲಿ ಕ್ರಮೇಣ ಹೆಚ್ಚಳವನ್ನು ಕಾಯ್ದುಕೊಳ್ಳುವುದು ಮತ್ತು ಮುಖ್ಯವಾಗಿ

***Please cite this article as:*** ದೇವೇಂದ್ರ ಮಂಡೇದ. (2024). ಕೌಟಿಲ್ಯನ ಅರ್ಥಶಾಸ್ತ್ರ: ಸಮಕಾಲೀನ ಪ್ರಸ್ತುತತೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 2(6), 82–85.

ಅನುಸರಣೆಯನ್ನು ಖಾತ್ರಿಪಡಿಸುವ ತೆರಿಗೆ ರಚನೆಯನ್ನು ರೂಪಿಸುವುದು. ಅವರು ವಿದೇಶಿ ವ್ಯಾಪಾರವನ್ನು ಬಲವಾಗಿ ಪ್ರೋತ್ಸಾಹಿಸಿದರು, ಯಶಸ್ವಿ ವ್ಯಾಪಾರ ಒಪ್ಪಂದವನ್ನು ಸ್ಥಾಪಿಸಲು, ಅದು ಎಲ್ಲರಿಗೂ ಪ್ರಯೋಜನಕಾರಿಯಾಗಬೇಕು ಎಂಬ ಆಧಾರವನ್ನು ಆಧರಿಸಿತ್ತು. ಭೂಮಿ, ನೀರು ಮತ್ತು ಗಣಿಗಾರಿಕೆಯಲ್ಲಿ ರಾಜ್ಯ ನಿಯಂತ್ರಣ ಮತ್ತು ಹೂಡಿಕೆಗೆ ಅವರು ಒತ್ತು ನೀಡಿದರು. ಕೌಟಿಲ್ಯನು ಅನುಭವ ಮತ್ತು ದೃಷ್ಟಿಯ ನಡುವಿನ ಅಂತರವನ್ನು ಕಡಿಮೆ ಮಾಡಿದ ನಿಜವಾದ ರಾಜಕಾರಣಿ. ಕೌಟಿಲ್ಯನಿಗೆ ಉತ್ತಮ ಆಡಳಿತವೇ ಪ್ರಧಾನವಾಗಿತ್ತು. ದುಷ್ಕೃತ್ಯಗಳ ನಿಯಂತ್ರಣಕ್ಕಾಗಿ ವ್ಯವಸ್ಥೆಗಳು ಮತ್ತು ಕಾರ್ಯವಿಧಾನಗಳಲ್ಲಿ ಅಂತರ್ನಿರ್ಮಿತ ತಪಾಸಣೆ ಮತ್ತು ಸಮತೋಲನಗಳನ್ನು ಅವರು ಸೂಚಿಸಿದರು. ಕೌಟಿಲ್ಯನ ರಾಜಕೀಯ ಅರ್ಥಶಾಸ್ತ್ರದ ತತ್ವಶಾಸ್ತ್ರದ ಅನೇಕ ನಿಲುವುಗಳು ಸಮಕಾಲೀನ ಕಾಲಕ್ಕೆ ಅನ್ವಯಿಸುತ್ತವೆ. (ಕೌಟಿಲ್ಯನ ಅರ್ಥಶಾಸ್ತ್ರ, 2013)

ಈ ಗ್ರಂಥವು ಹಿಂದಿನ ಮತ್ತು ಪ್ರಸ್ತುತದ ಜಾಗತಿಕ ಮಣ್ಣನೆ ಗಳಿಸಿದ ಅದ್ಭುತ ಕೃತಿಯಾಗಿದೆ ಇದರಲ್ಲಿ 15 ಅಧೀಕರಣಗಳು, 180 ಪ್ರಕರಣಗಳು ಮತ್ತು 6000 ಶ್ಲೋಕಗಳನ್ನು ವಿವರಿಸಿದ್ದಾರೆ. ಇದು ಭೂಮಿ, ಹಣ, ರಾಜ್ಯ ರಕ್ಷಣೆ, ಸ್ನೇಹ, ಆಡಳಿತ, ಒಪ್ಪಂದ, ವಿನಿಮಯದಂತಹ ಹಲವಾರು ಮಹತ್ವದ ಅಂಶಗಳನ್ನು ಒಳಗೊಂಡಿದೆ.

ಈ ಮಹತ್ತರವಾದ ಕೃತಿಯಲ್ಲಿ ಯಾವುದೇ ಒಂದು ರಾಜ್ಯ ಬಲಿಷ್ಠವೆನಿಸಿಕೊಳ್ಳಬೇಕಾದಲ್ಲಿ ಸಪ್ತ ಅಂಗಗಳಿಂದ ಕೂಡಿರಬೇಕೆಂದು ವಿವರಿಸಿದ್ದು ಇದನ್ನು ಮನುಷ್ಯನ ದೇಹದ ಜೊತೆಗೂ ಸಹ ಹೋಲಿಕೆ ಮಾಡಲಾಗಿದೆ.

ಇವರನ್ನು ವರ್ತಮಾನಕ್ಕೆ ಪರಿಚಯಿಸಿದ ಕೀರ್ತಿ ಆರ್ ಶ್ಯಾಮಶಾಸ್ತ್ರೀಯವರಿಗೆ ಸಲ್ಲುತ್ತದೆ ಇವರು 1909ರಲ್ಲಿ ಈ ಗ್ರಂಥ ಪ್ರಕಟಿಸಿದರು ನಂತರ ಇದನ್ನು ತಿರುವನಂತಪುರದ ಗಣಪತಿ ಶಾಸ್ತ್ರಿಗಳು ಈ ಗ್ರಂಥವನ್ನು ಸಂಪಾದಿಸಿ ಪ್ರಕಟಿಸಿದರು ಈ ಗ್ರಂಥವು ಇಂಗ್ಲಿಷ್, ಫ್ರೆಂಚ್, ಜರ್ಮನ್ ಇತ್ಯಾದಿ ಅನೇಕ ಭಾಷೆಗಳಿಗೆ ಭಾಷಾಂತರಗೊಂಡು ಪ್ರಸಿದ್ಧಿ ಹೊಂದಿದ ಮೇರು ಕೃತಿಯಾಗಿದೆ.

ಇವರ ಗ್ರಂಥದ ಕೆಲವು ಅಂಶಗಳನ್ನು ಪ್ರಸ್ತುತ ವಿದ್ಯಮಾನಕ್ಕೆ ಹೋಲಿಸಿ ನೋಡಿದರೆ ಕಂಡುಬರುವುದಾದ ಪ್ರಮುಖ ಅಂಶಗಳೆಂದರೆ ರಾಜ್ಯ, ಮಂತ್ರಿ, ಜನಪದ, ಕೋಟೆ, ಕೋಶ, ಸೈನ್ಯ, ಮಿತ್ರತ್ವದಂತಹ 10 ಹಲವು ಅಂಶಗಳಿಗೆ ತರಬೇತಿಯ ಅವಶ್ಯಕತೆಯನ್ನು ಎತ್ತಿ ತೋರಿಸಿರುವುದು ಗಮನಾರ್ಹವಾಗಿದೆ. ಪ್ರಸ್ತುತದ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವ್ಯಾಪಾರಗಳು ಸಂಘ–ಸಂಸ್ಥೆಗಳಿಂದೊಡಗೂಡಿ ಮಿತ್ರತ್ವವನ್ನು ಹೊಂದಿದ್ದಲ್ಲಿ ಅಭಿವೃದ್ಧಿಯನ್ನು ಸಾಧಿಸಬಹುದು ಎಂಬುದು ಇವರ ವಿವರಣೆಯಲ್ಲಿ ಅರ್ಥವಾಗುತ್ತದೆ. ಪ್ರಸ್ತುತದ ದೇಶ ಮತ್ತು ವಿದೇಶಗಳಲ್ಲಿನ ಆಪತ್ಕಾಲದ ಸನ್ನಿವೇಶಗಳಿಗೆ ಮಾಡಬಹುದಾಗಿರುವ ಸಹಾಯಗಳು ಸಹ ಕೌಟಿಲ್ಯರ ವಿಚಾರಗಳನ್ನು ನೆನೆಸುವಂತವುಗಳಾಗಿವೆ.

ಪ್ರಸ್ತುತ ಭಾರತದ ಸಮಗ್ರ ಚಿಂತನೆಯು ಇವರ ಪ್ರಭಾರವನ್ನು ಎತ್ತಿ ತೋರಿಸುವಂತಿದೆ ಕಾರಣ ಪ್ರಸ್ತುತ ಅರ್ಥಶಾಸ್ತ್ರದಲ್ಲಿನ ಸೂಕ್ಷ್ಮತೆ, ಸಮಗ್ರತೆ, ಅಂತರಾಷ್ಟ್ರೀಯತೆ ಇತರೆ ಎಲ್ಲಾ ಅಂಶಗಳಲ್ಲಿ ಮುಖ್ಯವಾಗಿ ಪ್ರಪಂಚದ ಸಮಗ್ರ ಚಿಂತೆಯಲ್ಲೂ ಮತ್ತು ಪ್ರಪಂಚದ ಪ್ರಸ್ತುತ ಚಿಂತನೆಯಲ್ಲೂ ಕೌಟಲ್ಯರ ಅರ್ಥಶಾಸ್ತ್ರದ ಸೂಕ್ಷ್ಮತೆಗಳನ್ನು ಗಮನಿಸಬಹುದಾಗಿದೆ. ಕೌಟಿಲ್ಯರ ಸಪ್ತಾಂಗ ಕೋಶವು ಅಭಿವೃದ್ಧಿ ಹೊಂದಿದ ದೇಶಗಳಿಗೆ ಅನ್ವಯವಾಗುವುದಿಲ್ಲವೆಂದು ವಿವರಿಸಿದರೂ ಸಹ ಈ ಕೋಶದಲ್ಲಿನ ಅಂಶಗಳು ಪ್ರತ್ಯಕ್ಷ ಪರೋಕ್ಷವಾಗಿ ಅಭಿವೃದ್ಧಿ ಹೊಂದದ, ಹೊಂದುತ್ತಿರುವ ಮತ್ತು ಹೊಂದಿದ ದೇಶಗಳ ಆರ್ಥಿಕತೆಯಲ್ಲಿ ಕಾಣಬಹುದಾಗಿದೆ.

ಸರ್ಕಾರದ ಆಡಳಿತ, ರಾಜ್ಯಧರ್ಮ, ಕೋಶನಿತಿ, ಅಂತರಾಷ್ಟ್ರೀಯ ವ್ಯವಹಾರ, ನಿರ್ವಹಣೆ ಮುಂತಾದವುಗಳ ಬಗ್ಗೆ ಮತ್ತು ಆಸ್ತಿ ವಿನಿಮಯದ ವಿಧಿನಿಯಮಗಳು, ಸಾಮಾಜಿಕ ಜೀವನದ

ಕಟ್ಟುಪಾಡುಗಳು ವಿವರಿಸಲಾಗಿದ್ದು, ಇವೆಲ್ಲವೂ ಪ್ರಸ್ತುತವಾಗಿಯೂ ಪ್ರಭಾವಶಾಲಿಯಾಗಿವೆ. ಈ ಗ್ರಂಥವು ಧಾರ್ಮಿಕತೆಯ ಜೊತೆಯಲ್ಲಿ ಲೌಕಿಕತೆಯ ಜೊತೆಗೆ ಪ್ರಜಾಹಿತಾತ್ಮಕ ಮಾರ್ಗದರ್ಶಿ ಗ್ರಂಥವಾಗಿದೆ ಎನ್ನಬಹುದು. ಇಂದು ಇಡೀ ಆರ್ಥಿಕತೆಗೆ ಮೂಲ ಅಂಶವೇ ಎನ್ನಲಾದ ತೆರಿಗೆ ಪದ್ಧತಿಯು ಕೌಟಲ್ಯರ ಆರ್ಥಿಕ ಚಿಂತನೆಯ ಒಂದು ಪ್ರಮುಖವಾದ ಕೊಡುಗೆ ಎನ್ನಬಹುದಾಗಿದೆ.

ಇವರು ವಿವರಿಸಿದ ತೆರಿಗೆ ಪದ್ಧತಿಯು ಶುಲ್ಕಾಧ್ಯಕ್ಷ ಅಂದರೆ ಶುಲ್ಕ ವ್ಯವಹಾರ ಎಂಬುದಾಗಿ ಹೆಸರುವಾಸಿ ಆಗಿದೆ. ಇಲ್ಲಿ ಇವರ ವಿವರಣೆ ಎಂದರೇ ಶುಲ್ಕವು ಬಾಹ್ಯ, ಅಭ್ಯಂತರ ಮತ್ತು ಆತಿಥ್ಯವೆಂದು ಮೂರು ವಿಧಗಳಿದ್ದು ಅವು, ತನ್ನ ರಾಜ್ಯದ ಮಾರಾಟ ವಸ್ತುಗಳ ಮೇಲೆ ವಿಧಿಸುವ ಶುಲ್ಕವು ಬಾಹ್ಯವೆಂದು, ಅಭ್ಯಂತರ ಎಂಬುದು ಭೂಮಿಗೆ ಸಂಬಂಧಿಸಿದ್ದು, ವಿದೇಶಿ ವಸ್ತುಗಳ ಮೇಲಿನ ತೆರಿಗೆಯೇ ಆತಿಥ್ಯವಾಗಿದೆ. ಇವು ವಿದೇಶಗಳಿಗೆ ಕಳುಹಿಸುವುದಾದಲ್ಲಿ ನಿಷ್ಕ್ರಾಮ್ಯ ಶುಲ್ಕವೆಂದು ಆಮದು ಮಾಡುವ ವಸ್ತುಗಳ ಮೇಲೆ ವಿಧಿಸುವುದನ್ನು ಪ್ರವೇಶ್ಯ ಶುಲ್ಕವೆಂದು ವಿವರಿಸಲಾಗಿದೆ. ಇವು ಪ್ರಸ್ತುತಕ್ಕೆ ಸರಿಸಮನಾದ ತೆರಿಗೆಗಳಾಗಿವೆ ಎಂಬುದು ವಿಶೇಷವಾದುದಾಗಿದೆ.

ಇವರ ಕೆಲವು ತೆರಿಗೆಯ ಪ್ರಮಾಣದ ವಿವರಣೆಗಳೆಂದರೆ ವಿದೇಶದಿಂದ ತರಿಸುವ ವಸ್ತುಗಳಿಗೆ ವಸ್ತುವಿನ ಬೆಲೆಯ ಐದನೇಯ ಒಂದು ಭಾಗ ಶುಲ್ಕ. ಹೂವು, ಹಣ್ಣು, ತರಕಾರಿ, ಮೀನು, ಮಾಂಸ, ಧಾನ್ಯ ಇವುಗಳಿಗೆ ಆರನೇಯ ಒಂದು ಭಾಗ ಶುಲ್ಕ. ವಸ್ತುಗಳನ್ನು ತರುವ ಬಾಗಿಲು ಕಾಯುವವನಿಗೆ ವಸೂಲಾದ ಶುಲ್ಕದ ಐದನೇಯ ಒಂದು ಭಾಗ ಇನಾಮು ಕೊಡುವುದು. ಇತ್ಯಾದಿ ತೆರಿಗೆ ದಂಡನೆಗಳಲ್ಲದೆ ಹೊಸ ವಿಧದ ಇಲ್ಲವೆ ಪುರಾತನವಾದ ಮಾರಾಟ ವಸ್ತುಗಳಿಗೆ ದೇಶಾಚಾರ ಜಾತ್ಯಾಚಾರಗಳನ್ನನುಸರಿಸಿ ತೆರಗೆಳನ್ನು ವಿಧಿಸಬೇಕು. ಇದನ್ನು ಅತಿಕ್ರಮಿಸಿದರೆ ದಂಡನೆಯನ್ನು ಅಪರಾದಕ್ಕನುಗುಣವಾಗಿ ವಿಧಿಸಬೇಕು ಎಂಬ ವಿಷಯ ವಿಶೇಷವಾದುದಾಗಿದೆ.

ಇವರು ಈ ತರದ ತೆರಿಗೆಗಳಲ್ಲದೆ ಇನ್ನೂ ಹಲವಾರು ಬಗೆಯ ತೆರಿಗೆಗಳನ್ನು ವಿವರಿಸಿದ್ದು ಪ್ರತಿಯೊಂದು ಸಹ ಪ್ರಸ್ತುತದ ಆರ್ಥಿಕ ಪ್ರಗತಿಗೆ ಪೂರಕವಾದವುಗಳಾಗಿವೆ. ಇವರು ತಮ್ಮ ವಿವರಣೆಯಲ್ಲಿ ಕೃಷಿಗೆ ಅತಿಯಾದ ಮಹತ್ವ ಕೊಟ್ಟಿರುವುದು ಸಹ ಕಂಡುಬರುತ್ತದೆ. ಕಾರಣ ಇವರು ತಮ್ಮ ವಿವರಣೆಯಲ್ಲಿ ಬಳಿಸಿದ ಕ್ರಿಮಿ ಕಿಟಗಳ ಉಪದ್ರವ ತಡೆಯುವ ಮಾರ್ಗ ಸೂಚಿಗಳು ಇಂದಿಗೂ ಸಹ ಮಾದರಿಯಾಗಿವೆ.

ಕೌಟಿಲ್ಯರ ದಾಯ ಕ್ರಮ: ವಿವರಣೆಯಲ್ಲಿ ಕುಲದಲ್ಲಿರುವ ಎಲ್ಲರಿಗೂ ಸಮಾನವಾದ ಹಕ್ಕುಳ್ಳ ದ್ರವ್ಯವು ದಾಯ ಅದರ ವಿಭಾಗವು ಇಲ್ಲಿ ಹೇಳಲ್ಪಡುತ್ತದೆ. ದಾಯವನ್ನು ಯಾರು, ಯಾವಾಗ, ಹೇಗೆ ವಿಭಾಗ ಮಾಡಿಕೊಳ್ಳಬೇಕೆಂದು ಈ ಪ್ರಕರಣದಲ್ಲಿ ಹೇಳುತ್ತಾರೆ. ಅಲ್ಲದೇ ತುಲಮಾನ ಪೌತವಂ ವಿವರಣೆಯಲ್ಲಿ ಅಳತೆಯ ಸಾಧನಗಳ ಕುರಿತಾಗಿ ವಿವರಿಸಿದ್ದಾರೆ.

ಕೌಟಿಲ್ಯರ ಕುರಿತಾಗಿ ಅಸ್ಟ್ರಿಯಾ ದೇಶದ ವಿಂಟರನಿಟ್ಸ, ಇಂಗ್ಲೆಂಡ್‌ನ ಕೀತ್‌ರವರು ವಿಮರ್ಶಾತ್ಮಕವಾಗಿ ವಿವರಿಸಿದರೂ ಸಹ ಪ್ರಸ್ತುತದ ಆರ್ಥಿಕ, ರಾಜಕೀಯ ಚಿಂತನೆಗೆ ಇವರ ಕೃತಿಯು ಸ್ಫೂರ್ತಿಯ ಸೆಲೆಯಾಗಿದ್ದು ಹಲವಾರು ಪಾಶ್ಚಿಮಾತ್ಯರು ಭಾರತೀಯ ವಿಮರ್ಶಕರು ಇವರ ಕೃತಿಯ ಚಿಂತನೆಯನ್ನು ಹೊಗಳಿದ್ದು ಕೌಟಿಲ್ಯರ ಅದ್ಭುತ ಪ್ರತಿಭೆಯನ್ನು ಸೂಚಿಸುವಂತದ್ದಾಗಿದೆ.

**ಪರಾಮರ್ಶನ ಗ್ರಂಥಗಳು**


- *ಕೌಟಿಲ್ಯನ ಅರ್ಥಶಾಸ್ತ್ರ* (2013). ಜೈಕೋ ಪಬ್ಲಿಷಿಂಗ್ ಹೌಸ್.
- Gautam, P. K. (2016). *Understanding dharma and artha in statecraft through Kautilya's Arthashastra*. IDSA Monograph Series No.53.

- Kamal, K. (2022). *Kautilya's arthashastra: Strategic Cultural Roots of India's Contemporary Statecraft*. Taylor & Francis.
- Kangle, R. P., & Jog, K. P. (1999). *Perceptions on Kauṭilīya arthaśāstra: In Commemoration of Prof. R.P. Kangle's Birth Centenary*. Popular Prakashan.
- Kauṭalya, & Kangle, R. P. (1986). *The Kauṭilīya arthaśāstra*. Motilal Banarsidass Publ.

ಸೃಜನಿ

**SRUJANI: Indian Journal of Innovative Research and Development (SIJIRD)**
Volume-2 Issue 6, January-February 2024, Pp.86 - 94
Bi-Monthly, Peer-Reviewed, Open Access, Indexed Journal

**I S S N: 2583-3510**
**S I R D F**
**J O U R N A L S**
editor@srujani.in
www.srujani.in

# ಡಾ.ಬಾಬೂ ಜಗಜೀವನ್‌ರಾಮ್ ದಲಿತರಿಗೆ ನೀಡಿದ ಕೊಡುಗೆಗಳು

**ಡಾ. ಶಂಕರ ಆರ್ ಗೇರುಮಾಳಂ**
ಮಾನವಶಾಸ್ತ್ರ ಸಂಶೋಧಕ

**Abstract:**
*ಬಾಬೂ ಜಗಜೀವನ್‌ರಾಮ್‌ರವರು ಸಮಾಜದಲ್ಲಿನ ಜಾತಿ ಆಚರಣೆ ಮತ್ತು ಶೋಷಣೆ ವಿರುದ್ಧ ಪ್ರತಿಭಟನೆಗಳನ್ನು ನಡೆಸಿದರು. ಬನಾರಸ್ ವಿಶ್ವವಿದ್ಯಾಲಯದ ಘಟನೆಯ ನಂತರ ಸಮಾಜದಲ್ಲಿ ಹೆಚ್ಚು ಜಾಗೃತಿ ಮೂಡಿಸುವ ಸಲುವಾಗಿ, ತಮಗೆ ದೊರೆತಿದ್ದ ಸರ್ಕಾರಿ ನೌಕರಿಯನ್ನು ತೊರೆದು, 'ರಾಜಕೀಯ ಅಧಿಕಾರ ದೊರೆತಾಗ ಮಾತ್ರ ಸಮಾಜದ ಸಮಾನತೆಗೆ ದುಡಿಯಬಹುದು' ಎಂಬುದು ಮನವರಿಕೆಯಾಯಿತು. ಒಮ್ಮೆ ಕಾಂಗ್ರೆಸ್ಸನ್ನು ಟೀಕಿಸಿದರೆ, ಮತ್ತೊಮ್ಮೆ ಹರಿಜನ ಸೇವಾ ಸಂಘವನ್ನು ಟೀಕಿಸಿದರು. ಅಂದು ಕಾಂಗ್ರೆಸ್ ರಾಷ್ಟ್ರದ ಪ್ರಮುಖ ರಾಜಕೀಯ ಪಕ್ಷವಾಗಿದ್ದಿತು. ಇದರ ಮೂಲಕವೇ ರಾಜಕೀಯ ಅಧಿಕಾರ ಪಡೆದು ಶೋಷಿತರು ಮತ್ತು ದಲಿತರ ಏಳಿಗೆಗೆ ದುಡಿಯಲು ಪಣತೊಟ್ಟರು. ಅದರಂತೆಯೇ ಕೃಷಿ ಕಾರ್ಮಿಕ ಸಂಘ ಸ್ಥಾಪಿಸಿ, ಜನರಮನ-ಮನದ ಕಣ್ಮಣಿಯಾಗಿದ್ದ ಬಾಬೂಜಿಯವರು 1946ರ ಮಧ್ಯಂತರ ಸರ್ಕಾರದಲ್ಲಿ ಕೇಂದ್ರ ಕಾರ್ಮಿಕ ಮಂತ್ರಿಯಾದರು.*

**Keywords:** *ಡಾ.ಬಾಬೂ ಜಗಜೀವನ್‌ರಾಮ್, ದಲಿತರು, ಕೃಷಿ ಕಾರ್ಮಿಕ ಸಂಘ, ಕಾಂಗ್ರೆಸ್, ಭೂ ಸುಧಾರಣೆ.*

**ಪೀಠಿಕೆ**

ಸ್ವಾತಂತ್ರ ಹೋರಾಟಗಾರ, ಸಮಾಜ ಸುಧಾರಕ, ಹಸಿರು ಕ್ರಾಂತಿಯ ಹರಿಕಾರ ಡಾ. ಬಾಬೂ ಜಗಜೀವನ ರಾಮ್‌ರವರು ಏಪ್ರಿಲ್ 5, 1908 ರಂದು ಬಿಹಾರ ರಾಜ್ಯದ ಆರಾ ಜಿಲ್ಲೆಯ ಚಾಂದ್ವಾ ಎಂಬ ಗ್ರಾಮದಲ್ಲಿ ಶೋಭಿರಾಮ್ ಮತ್ತು ವಾಸಂತಿ ದೇವಿಯರ ಮಗನಾಗಿ ಜನಿಸಿದರು. ಒಟ್ಟು ಏಳು ಮಕ್ಕಳಲ್ಲಿ ನಾಲ್ಕು ಜನ ಹೆಣ್ಣು ಮಕ್ಕಳು, ಮೂವರು ಗಂಡು ಮಕ್ಕಳು. ಮೂರನೇ ಮಗನೇ ಜಗಜೀವನರಾಮ್. ಜಗಜೀವನ್‌ರಾಮರ ತಂದೆ ಮತ್ತು ತಾಯಿಗೆ ಕಿತ್ತುತಿನ್ನುವ ಬಡತನವಿದ್ದರೂ ಕೂಡ ಮಕ್ಕಳನ್ನು ಓದಿಸಬೇಕೆಂಬದು ಮಹಾದಾಸೆ. ಅದರಲ್ಲೂ ಬಾಲ್ಯದಲ್ಲಿಯೇ ಚುರುಕಾಗಿದ್ದ ಜಗಜೀವನರಾಮನನ್ನು ಓದಿಸಬೇಕೆಂಬ ಹೆಬ್ಬಯಕೆ ತಂದೆಯದಾಗಿತ್ತು. ಅದರಂತೆ ಜಗಜೀವನರಾಮ್‌ಗೆ ಆರು ವರ್ಷ ತುಂಬಿದಾಗ ಅವರ ತಂದೆ ಶಾಲೆಗೆ ದಾಖಲಿಸಿದರು. ಗ್ರಾಮದ ಹಿರಿಯ ಬ್ರಾಹ್ಮಣರೂ ಹಾಗೂ ಎಲ್ಲರನ್ನೂ ಸಮನಾಗಿ ಕಾಣುತ್ತಿದ್ದ ಪಂಡಿತ ಕಪಿಲ ಮುನಿ ತಿವಾರಿಯವರು ಗುರುಗಳಾಗಿದ್ದರು.

**ಕಾರ್ಮಿಕ ಮಂತ್ರಿಯಾಗಿ ಜಗಜೀವನ ರಾಮ್ (1946–1952)**

ಜಗಜೀವನ್‌ರಾಮ್ 1937ರ ಸರ್ಕಾರದಲ್ಲಿ ಸಂಸದೀಯ ಕಾರ್ಯದರ್ಶಿಯಾಗಿದ್ದ ಸಂದರ್ಭದಲ್ಲಿ ಕೈಗಾರಿಕಾ, ಶಿಕ್ಷಣ, ಗ್ರಾಮೀಣಾಭಿವೃದ್ಧಿ ಇತರೆ

***Please cite this article as:*** ಶಂಕರ ಆರ್ ಗೇರುಮಾಳಂ. (2024). ಡಾ.ಬಾಬೂ ಜಗಜೀವನ ರಾಮ್ ದಲಿತರಿಗೆ ನೀಡಿದ ಕೊಡುಗೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವೆಲಪ್‌ಮೆಂಟ್*, 2(6), 86–94.

ಸಚಿವಾಲಯಕ್ಕೂ ಕಾರ್ಯದರ್ಶಿಯಾಗಿದ್ದು, ರಾಷ್ಟ್ರದಾದ್ಯಂತ ಸುತ್ತಾಡಿ ಕೈಗಾರಿಕಾ ಕಾರ್ಮಿಕರ ಸಮಸ್ಯೆಗಳನ್ನು ಅರಿತಿದ್ದರು. ಜಗಜೀವನರಾಮ್‌ರವರು ಕೃಷಿ ಕಾರ್ಮಿಕ ಸಂಘದ ರ್‍ಯಾಲಿಯನ್ನು ನಡೆಸಿ, ಕಡಿಮೆ ವೇತನಕ್ಕೆ ದುಡಿಸಿಕೊಳ್ಳುವ ಜಮೀನ್ದಾರರ ವಿರುದ್ಧ ಗುಡುಗಿದ್ದರು. ಸ್ವಾತಂತ್ರ್ಯದ ಪೂರ್ವದಲ್ಲಿಯೇ ಕಾರ್ಮಿಕ ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. ಇಲ್ಲಿನ ಶೋಷಣೆಯನ್ನು ಕೊನೆಗಾಣಿಸಬೇಕಾದರೆ ಆರ್ಥಿಕ ಸಬಲತೆಯೇ ಬಲವೆಂದು ಪರಿಗಣಿಸಿದ್ದ ಜಗಜೀವನರಾಮ್ ಪ್ರಥಮವಾಗಿ ಕನಿಷ್ಠ ಕೂಲಿ ಕಾಯಿದೆಯನ್ನು ಜಾರಿಗೆತಂದರು. ಇದು ಹಳ್ಳಿಗಾಡಿನಲ್ಲಿ ಕಡಿಮೆ ಕೂಲಿಗೆ ದುಡಿಸಿಕೊಳ್ಳುತ್ತಿದ್ದ ಭೂಮಾಲೀಕರು ಹಾಗೂ ಗಿರಣಿ ಮಾಲೀಕರ ವಿರುದ್ಧವಾಗಿತ್ತು. ಕಡಿಮೆ ಕೂಲಿಗೆ ದುಡಿಯುತ್ತಿದ್ದ ಬಹುಪಾಲು ಮಂದಿ ದಲಿತರೇ ಆಗಿದ್ದರು. ನಂತರ ಕಾರ್ಖಾನೆಗಳಲ್ಲಿ ಸೃಷ್ಟಿಯಾಗುತ್ತಿದ್ದ ವಿವಾದಗಳನ್ನು ನಿವಾರಿಸಲು ಜಗಜೀವನರಾಂ ಅವರು ಕೈಗಾರಿಕಾ ವಿವಾದ ಮಸೂದೆಯನ್ನು ಜಾರಿಗೊಳಿಸಿದರು. ಈ ಕಾಯಿದೆಯು 23ನೇ ಏಪ್ರಿಲ್ 1946ರಂದು ಜಾರಿಗೆ ಬಂದಿತು. ಈ ಕಾಯಿದೆಯು ಕೈಗಾರಿಕಾ ಉದ್ಯೋಗಿಗಳಲ್ಲಿ ಭರವಸೆಯ ಬೆಳಕಾಗಿತ್ತು. ಯಾವುದೇ ಕಾರಣ ನೀಡದೆ ಯಾವುದೇ ಕಾರ್ಮಿಕರನ್ನು ತೆಗೆಯುವಂತಿರಲಿಲ್ಲ. ಹಾಗೇನಾದರೂ ತೆಗೆದ ಪಕ್ಷದಲ್ಲಿ ಕಾರ್ಮಿಕ ದಾವೆ ಹೂಡಿದರೆ ಕಂಪನಿಯು ದಾವೆಯ ಇತ್ಯರ್ಥವಾಗುವವರೆಗೆ ಆತನಿಗೆ ಅರ್ಧ ಸಂಬಳ ನೀಡಬೇಕು ಎಂಬುದನ್ನು ಉಲ್ಲೇಖಿಸಿದೆ.

**ಮಧ್ಯಂತರ ಸರ್ಕಾರದಲ್ಲಿ ಜಗಜೀವನ್‌ರಾಮ್ ನೀಡಿದ ಕೊಡುಗೆಗಳು**

ಬ್ರಿಟನ್ನಿನಲ್ಲಿ ಕಾರ್ಮಿಕ ಪಕ್ಷದ ಸರ್ಕಾರವು ಕ್ಯಾಬಿನೆಟ್ ಮಿಷನ್‌ನ ಯೋಜನೆಯನ್ನು ರೂಪಿಸಿತ್ತು. ಇದನ್ನು ಭಾರತದ ಅಖಂಡತೆಯನ್ನು ಆಧಾರವಾಗಿಟ್ಟುಕೊಂಡು ಮಾಡಲಾಗಿತ್ತು ಎಂಬುದು ಗಮನಾರ್ಹವಾದ ವಿಷಯ. ಜೂನ್ 16, 1946ರಂದು ಭಾರತದ ಗವರ್ನರ್ ಜನರಲ್ ಆದ ಲಾರ್ಡ್ ವೇವಲರು ಮಧ್ಯಂತರ ಸರ್ಕಾರ ಘೋಷಣೆ ಮಾಡಿದರು. ವೇವಲರ ಆಹ್ವಾನದ ಮೇರೆಗೆ ದೆಹಲಿಗೆ ಆಗಮಿಸಿದ ಜಗಜೀವನರಾಮ್‌ರವರು ದಲಿತರಿಗೆ ಮಧ್ಯಂತರ ಸರ್ಕಾರದಲ್ಲಿ ಸಾಕಷ್ಟು ಪ್ರಾತಿನಿಧ್ಯ ಇಲ್ಲದೆ ಇರುವುದರಿಂದ ಕುಪಿತರಾಗಿ ವೇವಲರಿಗೆ ಒಂದು ತಂತಿ ಕಳುಹಿಸಿದರು."ನಾನು ಯಾವೊಬ್ಬ ರಾಷ್ಟ್ರೀಯ ಮುಸಲ್ಮಾನರನ್ನು ತೆಗೆದುಕೊಳ್ಳದೇ ಇರುವುದನ್ನು ಅನುಚಿತವೆಂದು ಭಾವಿಸುತ್ತೇನೆ. ಅಲ್ಪಸಂಖ್ಯಾತರ ಪ್ರಾತಿನಿಧಿತ್ವವನ್ನು ಜಿನ್ನಾರವರ ಕೃಪೆಗೆ ಬಿಟ್ಟುಬಿಡುವುದು ಪ್ರಜಾತಂತ್ರ ಸಿದ್ಧಾಂತಕ್ಕೆ ವಿರುದ್ಧವಾಗಿದೆ. ಅನುಸೂಚಿತ ಜಾತಿಗಳ ಪ್ರಾತಿನಿಧ್ಯ ಸಾಕಷ್ಟಿಲ್ಲ, ಆದಕಾರಣ ಸದ್ಯದ ಪರಿಸ್ಥಿತಿಯಲ್ಲಿ ಮಧ್ಯಂತರ ಸರ್ಕಾರದ ಸದಸ್ಯತ್ವವನ್ನು ನಾನು ಸ್ವೀಕರಿಸುವುದಿಲ್ಲ"ಎಂದು ತಿಳಿಸಿದರು. ಇದು ದಲಿತರು ರಾಜಕೀಯವಾಗಿ ಸಮಾನ ಅವಕಾಶಗಳನ್ನು ಪಡೆಯಬೇಕೆಂಬ ನಿಲುವಿನಿಂದಾಗಿ ವಿರೋಧ ವ್ಯಕ್ತಪಡಿಸಿದರು.

ಇದಾದ ನಂತರ ಮುಸ್ಲಿಂಲೀಗ್ ಪಾಕಿಸ್ತಾನದ ಬೇಡಿಕೆಯನ್ನು ದೃಢವಾಗಿ ಮಂಡಿಸಿದರು ಮತ್ತು ಭಾರತದ ಸಂವಿಧಾನ ರಚನೆ ಪರಿಷತ್ತಿನಿಂದ ದೂರ ಉಳಿದರು. ಈ ಸಂದರ್ಭದಲ್ಲಿ ಅಂಬೇಡ್ಕರ್‌ರವರು 'ಸಂವಿಧಾನವನ್ನು' ಸಂವಿಧಾನ ಪರಿಷತ್‌ನಿಂದ ರಚನೆಯಾಗುವುದನ್ನು ವಿರೋಧಿಸಿದರು. ಜಗಜೀವನ ರಾಮ್‌ರವರೂ ಸಹ ವಿರೋಧಿಸಿ, ವಿರೋಧದ ಜ್ಞಾಪನವನ್ನು ಹೊತ್ತು ಲಂಡನ್ನಿಗೆ ಹೋದರು. ಈ ಮೊದಲೇ ದಲಿತರ ಪ್ರಾತಿನಿಧಿತ್ವ ಕಡಿಮೆ ಎಂದು ಕೊರಗಿದ್ದ ಜಗಜೀವನ ರಾಮ್, ಡಾ.ಬಿ.ಆರ್. ಅಂಬೇಡ್ಕರ್‌ರವರನ್ನು ಸ್ವತಂತ್ರ ಭಾರತದ ಮೊದಲ ಮಂತ್ರಿಮಂಡಲಕ್ಕೆ ಸೇರಿಸುವಲ್ಲಿ ಯಶಸ್ವಿಯಾದರು.

ಜೂನ್ 15, 1946ರಂದು ಅಂತರಾಷ್ಟ್ರೀಯ ಕಾರ್ಮಿಕರ ಸಂಘ (ILO)ಗೆ ಭಾರತದ ಪ್ರತಿನಿಧಿಯ

ರೂಪದಲ್ಲಿ ಹೋದರು. ಅಲ್ಲಿ ಭಾಷಣವನ್ನು ಮಾಡಿ, ಭಾರತದ ಕಾರ್ಮಿಕರ ಸ್ಥಿತಿಗಳ ಬಗ್ಗೆ ವಿವರಿಸಿ, ಇತರೆ ಸಚಿವಾಲಯಗಳ ಕಾರ್ಮಿಕರ ಪರಿಸ್ಥಿತಿಗಳನ್ನು ಅರಿತು 1948ರಲ್ಲಿ 'ಜೀವವಿಮಾ ಯೋಜನೆ' ಜಾರಿಗೆತಂದರು. ಕಾರ್ಮಿಕರಿಗೆ ಅನಾರೋಗ್ಯದ ದಿನಗಳಲ್ಲಿ ವಿಮೆ ಹಣ ಸಿಗುವಂತಾಯಿತು. ಕಾರ್ಮಿಕ ಕಲ್ಯಾಣದ ವಿಷಯದಲ್ಲಿ ಇದು ಅತ್ಯಂತ ಯಶಸ್ವಿಯಾದ ಕಾಯಿದೆಯಾಗಿದೆ. ಈ ಕಾಯಿದೆಯೂ ಕೂಡ ಪ್ರಸ್ತುತದಲ್ಲಿ ಚಾಲ್ತಿಯಲ್ಲಿದೆ.

ಸಂವಿಧಾನದ 335ನೇ ವಿಧಿಯು ಜಗಜೀವನರಾಮ್ ಮತ್ತು ಹರಿಜನ ಸದಸ್ಯರ ಅಭಿಪ್ರಾಯದಂತೆ ಸೇರ್ಪಡೆಗೊಂಡಿತು. ಸಂವಿಧಾನ ರಚನಾ ಸಂದರ್ಭದಲ್ಲಿ ದಲಿತರನ್ನು ಅಲ್ಪಸಂಖ್ಯಾತರೆಂದೇ ವರ್ಗೀಕರಣ ಮಾಡಿದ್ದರು. ಇದರ ಅನ್ವಯ ಉಪಸಮಿತಿಯು ವಿಧಾನಸಭೆಗೆ ಮಾತ್ರ ಮೀಸಲಾತಿಯನ್ನು ಕಲ್ಪಿಸಿತು. ಕೇಂದ್ರೀಯ ಮತ್ತು ಪ್ರಾದೇಶಿಕವಾಗಿ ಮೀಸಲಾತಿ ಇಲ್ಲವಾಗಿತ್ತು. ಅಲ್ಲದೆ ಸರ್ಕಾರಿ ಸೇವೆಗಳಲ್ಲಿ ಸೇರ್ಪಡೆಗೊಳ್ಳುವುದು ಕಷ್ಟ ಸಾಧ್ಯವಾಗಿತ್ತು. ಇಂತಹ ಸಂದರ್ಭದಲ್ಲಿ ಜಗಜೀವನರಾಮ್‌ರವರು ಸರ್ಕಾರಿ ಸೇವೆಯಲ್ಲಿ ದಲಿತರಿಗೆ ಮೀಸಲಾತಿ ದೊರಕಿಸಿ ಕೊಡುವುದರಲ್ಲಿ ಯಶಸ್ವಿಯಾದರು. ಜಗಜೀವನರಾಮ್ ಎಲ್ಲಾ ಸದಸ್ಯರಿಗೂ ಮನದಟ್ಟು ಮಾಡಿ, ಸರ್ಕಾರಿ ಸೇವೆಯಲ್ಲಿ ಹರಿಜನರಿಗೆ ಮೀಸಲಾತಿ ವ್ಯವಸ್ಥೆಯಾಗದಿದ್ದರೆ, ದಲಿತ ವರ್ಗದ ಸದಸ್ಯರು ಸಂವಿಧಾನ ಸಭೆಯಿಂದ ಹೊರನಡೆಯುವುದಾಗಿ ತಿಳಿಸಿದರು. ಇದರ ಫಲವಾಗಿಯೇ ಉದ್ಯೋಗದಲ್ಲಿ ಮೀಸಲಾತಿ ದೊರಕಿತು.

**ಸಾರಿಗೆ ಮತ್ತು ಸಂಪರ್ಕ ಸಚಿವರಾಗಿ ಜಗಜೀವನ್‌ರಾಮ್ ದಲಿತರಿಗೆ ನೀಡಿದ ಕೊಡುಗೆಗಳು**

ಭಾರತ 1947ರಲ್ಲಿ ಸ್ವತಂತ್ರವಾಯಿತು. ಈ ಸಮಯದಲ್ಲಿ ಮಧ್ಯಂತರ ಸರ್ಕಾರ ಅಧಿಕಾರ ನಡೆಸಿತ್ತು. ಮಧ್ಯಂತರ ಸರ್ಕಾರವು 1951–52ರಲ್ಲಿ ಸಾರ್ವತ್ರಿಕ ಚುನಾವಣೆ ನಡೆಸಲು ತೀರ್ಮಾನಿಸಿತು. ಈ ಚುನಾವಣೆಯಲ್ಲಿ ಕಾಂಗ್ರೆಸ್ ಸ್ಪಷ್ಟ ಬಹುಮತ ಗಳಿಸಿತು. ಈ ಸಂದರ್ಭದಲ್ಲಿ ಪ್ರಧಾನ ಮಂತ್ರಿಯಾಗಿ ಜವಾಹರಲಾಲ್ ನೆಹರೂರವರನ್ನು ಆಯ್ಕೆ ಮಾಡಲಾಯಿತು. ಇದೇ ಸಮಯದಲ್ಲಿ ಜಗಜೀವನರಾಮ್ ಅವರನ್ನು ಸಾರಿಗೆ ಮತ್ತು ಸಂಪರ್ಕ ಸಚಿವರನ್ನಾಗಿ ಆರಿಸಲಾಯಿತು. ಇದರ ಪ್ರಮಾಣವಚನವು ಮೇ 3, 1952ರಂದು ರಾಷ್ಟ್ರಪತಿ ಭವನದ ದರ್ಬಾರ್ ಹಾಲ್‌ನಲ್ಲಿ ನಡೆಯಿತು.

ಭಾರತದಲ್ಲಿ ಸಾರಿಗೆ–ಸಂಪರ್ಕ ವ್ಯವಸ್ಥೆಯು ಬಹಳ ಹಿಂದುಳಿದಿತ್ತು. ಇದನ್ನು ವೈಜ್ಞಾನಿಕ ತಳಹದಿಯ ಮೇಲೆ ಸುಧಾರಿಸಬೇಕಾಗಿತ್ತು. ಜಗಜೀವನರಾಮ್‌ರವರು ಅಧಿಕಾರ ವಹಿಸಿಕೊಂಡ ತಕ್ಷಣ ಮೊದಲು ಮಾಡಿದ ಕಾರ್ಯವೆಂದರೆ ಪ್ರತಿ ಎರಡು ಸಾವಿರ ಜನಸಂಖ್ಯೆಗೆ ಅನುಗುಣವಾಗಿ ಒಂದು ಅಂಚೆ ಕಛೇರಿಗಳನ್ನು ಸ್ಥಾಪಿಸಲು ಅನುಮೋದನೆ ನೀಡಿದರು. ಜೊತೆಗೆ ಚಳಿ ಪ್ರದೇಶಗಳಲ್ಲಿ ಸೇವೆ ಸಲ್ಲಿಸಲು ಅಂಚೆ ಇಲಾಖೆ ನೌಕರರಿಗೆ ಸೈಕಲ್‌ಗಳು ಮತ್ತು ಉಣ್ಣೆ ಬಟ್ಟೆಯ ಸಮವಸ್ತ್ರಗಳನ್ನು ವಿತರಿಸಿದರು. ಅಂಚೆ ಇಲಾಖೆಯ ನಂತರ ಜಗಜೀವನರಾಮ್‌ರವರು ವಿಮಾನಯಾನದ ಸುಧಾರಣೆಗೆ ಆದ್ಯತೆ ನೀಡಿದರು. ಇದಕ್ಕಾಗಿ ಇವರು ಹೊಸ ವಿಮಾನಗಳನ್ನು ಖರೀದಿಸಿದರು. ಹಿಂದೆ ಪೈಲಟ್ ಹುದ್ದೆಗಳು ಮೇಲ್ವರ್ಗದವರ ಸ್ವತ್ತಾಗಿತ್ತು. ಜಗಜೀವನರಾಮ್ ಅವರು ಸಮಾಜದ ಎಲ್ಲಾ ವರ್ಗಗಳಿಗೂ ಸರ್ಕಾರಿ ಹುದ್ದೆಗಳಲ್ಲಿ ಅವಕಾಶವಿರಬೇಕೆಂದು ಆ ಹುದ್ದೆಯನ್ನು ಮುಕ್ತಗೊಳಿಸಿದರು. ಈ ನಿರ್ಧಾರದಿಂದ ವಾಯು ಸಾರಿಗೆ ಇಲಾಖೆಯಲ್ಲಿ ಅಲ್ಪಸಂಖ್ಯಾತರು ಮತ್ತು ಪರಿಶಿಷ್ಟರಿಗೆ ಪ್ರಾತಿನಿಧ್ಯ ದೊರೆಯುವಂತಾಯಿತು. ಇದಲ್ಲದೆ ವಿಮಾನಯಾನವು ಕೇವಲ ಶ್ರೀಮಂತರಿಗೆ ಮಾತ್ರ ಲಭ್ಯವಾಗಬಾರದು, ಶ್ರೀಸಾಮಾನ್ಯನೂ ಅದರಲ್ಲಿ ಪ್ರಯಾಣ ಕೈಗೊಳ್ಳಬೇಕೆಂಬುದು ಜಗಜೀವನರಾಮ್ ಅವರ ಆಶಯವಾಗಿತ್ತು.

ಜಗಜೀವನರಾಮ್ ಅವರ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಿಮಾನಯಾನವನ್ನು ಅಭಿವೃದ್ಧಿ ಪಡಿಸಲಾಯಿತು. ದೇಶಿಯತೆಗೆ ಆದ್ಯತೆ ನೀಡಿ, 500ಜನ ಯುವಕರಿಗೆ ವಿಮಾನಯಾನ ತರಬೇತಿ ನೀಡಲಾಯಿತು. ತರಬೇತಿ ಪಡೆದವರಲ್ಲಿ ಪ್ರತಿಶತ ಐವತ್ತು ದಲಿತರು ಮತ್ತು ಶೋಷಿತ ವರ್ಗದವರಿಗೆ ಆದ್ಯತೆ ನೀಡಲಾಗಿತ್ತು. ಜಗಜೀವನರಾಮ್ ಅವರ ದೂರದೃಷ್ಟಿಯ ಫಲವಾಗಿ ರಾಷ್ಟ್ರ ಮತ್ತು ದಲಿತರಿಗೆ ಏಕಕಾಲದಲ್ಲಿ ನ್ಯಾಯ ಸಮ್ಮತವಾದ ಕಾರ್ಯಗಳನ್ನು ನೀಡಿದರು. ನಾಗರಿಕ ವಿಮಾನಯಾನ ಪೈಲೆಟ್ ತರಬೇತಿಗೆ ಶಿಫಾರಸ್ಸು ಅನುಷ್ಠಾನಗೊಳಿಸಿ, ಫ್ಲೇಯಿಂಗ್ ಕ್ಲಬ್‌ಗಳಿಗೆ ಆರ್ಥಿಕ ನೆರವು ನೀಡಿ ಯುವಕರನ್ನು ಆಕರ್ಷಿಸಿದರು. ಪೈಲೆಟ್ ತರಬೇತಿಗೆ ಬರುವ ಪರಿಶಿಷ್ಟರಿಗೆ ಶುಲ್ಕದಲ್ಲಿ ರಿಯಾಯಿತಿ ನೀಡಿದರು. ಇವರ ಈ ಸೇವೆ ದಲಿತರ ಶ್ರೇಯೋಭಿವೃದ್ಧಿಗೆ ನೀಡಿದ ಮಹತ್ತರ ಕೊಡುಗೆಯಾಗಿದೆ.

1960ರಲ್ಲಿ ರಾಷ್ಟ್ರದಲ್ಲಿ 76,839 ಅಂಚೆ ಕಛೇರಿಗಳಿದ್ದವು. ಇವುಗಳಲ್ಲಿ 69,513 ಅಂಚೆ ಕಛೇರಿಗಳು ಹಿಂದುಳಿದ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿ ನಿರ್ಮಾಣವಾಗಿ ಸೇವೆ ಸಲ್ಲಿಸಿದವು. ಗ್ರಾಮೀಣ ಭಾಗದ ಜನರಿಗೆ ಉಳಿತಾಯದ ಅಗತ್ಯವನ್ನು ಜನರಿಗೆ ಮನವರಿಕೆ ಮಾಡಿಕೊಡುವ ಉದ್ದೇಶದಿಂದ ವಿಶೇಷತಃ ಗ್ರಾಮೀಣ ಪ್ರದೇಶದಲ್ಲಿ, ಅಂಚೆ ಕಛೇರಿಗಳಲ್ಲಿ ಉಳಿತಾಯ ಖಾತೆ ಆರಂಭಿಸಲು ಜನರನ್ನು ಆಕರ್ಷಿಸಿದರು. 1961ರಲ್ಲಿ 92ಲಕ್ಷ ಜನ ತಮ್ಮ ಉಳಿತಾಯ ಖಾತೆಯನ್ನು ಅಂಚೆ ಕಛೇರಿಯಲ್ಲಿ ಹೊಂದಿದ್ದರು. ಈ ಖಾತೆಗಳಲ್ಲಿ 431.40ಕೋಟಿ ರೂಪಾಯಿಗಳಿದ್ದವು. ಈ ಯೋಜನೆಯು ಪ್ರಸ್ತುತದಲ್ಲಿಯೂ ಯಶಸ್ವಿಯಾಗಿ ಚಾಲನೆಯಲ್ಲಿದೆ.

ಜಗಜೀವನರಾಮ್ ಅವರು ಅಂಚೆ ಇಲಾಖೆಯ ಸಿಬ್ಬಂದಿಗಳನ್ನು ತರಬೇತಿ ಮತ್ತು ಅಧ್ಯಯನಕ್ಕಾಗಿ ವಿದೇಶಕ್ಕೆ ತೆರಳಲು ಅನುಮತಿ ನೀಡಿದರು. ಸಿಬ್ಬಂದಿಯ ಕಲ್ಯಾಣಕ್ಕಾಗಿ ಸಹಕಾರಿ ಸಂಘ ಸ್ಥಾಪನೆ, ಕ್ಯಾಂಟೀನ್ ವ್ಯವಸ್ಥೆ ನಿರ್ಮಿಸಲಾಯಿತು. ನಾಲ್ಕನೇ ವರ್ಗದ ನೌಕರರಿಗೆ ರಾತ್ರಿ ಶಾಲೆಗಳನ್ನು ಪ್ರಾರಂಭಿಸಿ ವಿದ್ಯಾರ್ಜನೆ ಮಾಡಿಸಲಾಯಿತು. ಅಂಚೆ ಇಲಾಖೆಯ ನೌಕರರ ಆರೋಗ್ಯದ ಹಿತದೃಷ್ಟಿಯಿಂದ ದವಾಖಾನೆಗಳನ್ನು ಸ್ಥಾಪಿಸಲಾಯಿತು ಹಾಗೂ ಆಹಾರದ ಕೊರತೆಯನ್ನು ನೀಗಿಸಲು ಧಾನ್ಯ ಮಳಿಗೆಗಳನ್ನು ತೆರೆಯಲಾಯಿತು. ಶೋಷಿತ ವರ್ಗದ ಅಂಚೆ ಸಿಬ್ಬಂದಿ ಕುಟುಂಬದವರ ವಿದ್ಯಾರ್ಥಿಗಳಿಗೆ 200 ರೂಪಾಯಿಗಳ ವಿದ್ಯಾರ್ಥಿವೇತನವನ್ನು ನಿಗಧಿಮಾಡಿದರು.

**ರೈಲ್ವೆ ಸಚಿವರಾಗಿ ದಲಿತೋದ್ಧಾರ ಕಾರ್ಯಗಳು**

1956 ನವೆಂಬರ್ 23ರಂದು ಮದ್ರಾಸಿನ ಹತ್ತಿರ ಟುಟಿಕುರಿನ್ ರೈಲು ಅಪಘಾತವಾಗಿ ಅತ್ಯಧಿಕ ಸಾವು–ನೋವು ಸಂಭವಿಸಿತು. ಈ ಸಂದರ್ಭದಲ್ಲಿ ಲಾಲ್ ಬಹದ್ದೂರ್ ಶಾಸ್ತ್ರಿಯವರು ರೈಲ್ವೆ ಸಚಿವರಾಗಿದ್ದರು. ಇದನ್ನು ನಿಭಾಯಿಸಲಾಗದೆ ರಾಜಿನಾಮೆ ಸಲ್ಲಿಸಿದ್ದರು. ಡಿಸೆಂಬರ್ 7, 1956ರಂದು ರೈಲ್ವೆ ಖಾತೆಯನ್ನು ನಿರ್ವಹಿಸುವಂತೆ ಪಂಡಿತ ಜವಹರಲಾಲ್ ನೆಹರೂರವರು ಜಗಜೀವನರಾಮ್ ಅವರನ್ನು ಒಪ್ಪಿಸಿದರು. ರೈಲ್ವೆ ಇಲಾಖೆ ವಹಿಸಿಕೊಂಡ ತಕ್ಷಣ ರೈಲ್ವೆಯ ಜನರಲ್ ಮ್ಯಾನೇಜರ್‌ಗಳ ಸಭೆ ಕರೆದು ಕುಂದು–ಕೊರತೆಗಳನ್ನು ಆಲಿಸಲಾಯಿತು. ಜೊತೆಗೆ ರೈಲ್ವೆ ಇಲಾಖೆಯ ಕೆಳದರ್ಜೆ ಕರ್ಮಚಾರಿಗಳ ಸಮಸ್ಯೆಗಳ ಕುರಿತಾಗಿ ಆಲಿಸಿದರು. ದೇಶದ ಹಿತ ಮತ್ತು ಅಧಿಕಾರಿಗಳು, ನೌಕರರ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಈ ಇಲಾಖೆಯಲ್ಲಿ ಕಾರ್ಯಾರಂಭ ಮಾಡಿದರು.

**ಎರಡನೇ ಬಾರಿಗೆ ರೈಲ್ವೆ ಸಚಿವರಾಗಿ (1957–62)**

ಇದು ಸ್ವತಂತ್ರ ಭಾರತದ ಎರಡನೇ ಮಹಾ ಚುನಾವಣೆ. ಬಾಬೂಜಿಯವರು ಸ್ಪರ್ಧಿಸುತ್ತಿದ್ದುದು ಸಾಮಾನ್ಯ ಕ್ಷೇತ್ರ. ಈ ಬಾರಿ ಇವರು ಅವಿರೋಧವಾಗಿ ಆಯ್ಕೆಯಾದದ್ದು ಕೂಡ ಒಂದು ಸ್ವಾರಸ್ಯಕರ ಸಂಗತಿಯಾಗಿದೆ. ಒಂದು ಸಾಮಾನ್ಯ

ಕ್ಷೇತ್ರದಲ್ಲಿ ಇವರ ಎದುರು ಸ್ಪರ್ಧಿಸಲು ಅಭ್ಯರ್ಥಿಗಳೇ ಇರಲಿಲ್ಲ. ಆದರೆ ಸವರ್ಣೀಯರು ಛತ್ತೂರಾಮ ಎಂಬ ವ್ಯಕ್ತಿಯನ್ನು ಇವರ ಚುನಾವಣಾ ಕಣದ ಪ್ರತಿಸ್ಪರ್ಧಿಯಾಗಿ ನಿಲ್ಲಿಸಿದರು. ಉಮೇದುವಾರಿಕೆ ಸಲ್ಲಿಸಲಿಲ್ಲ ಎಂದರೆ ಜೀವ ತೆಗೆಯಲಾಗುವುದು ಎಂದು ಬೆದರಿಕೆ ಒಡ್ಡಿದರು. ಆದರೆ ಛತ್ತೂರಾಮ್ ಅವರು ತಮ್ಮ ಉಮೇದುವಾರಿಕೆಯನ್ನು ಹಿಂಪಡೆದು ಜಗಜೀವನರಾಮ್ ಅವರ ಬಳಿಬಂದು ಕ್ಷಮೆಯಾಚಿಸಿ ಆಶೀರ್ವಾದ ಪಡೆದರು.

ಜಗಜೀವನರಾಮ್ ಅವರು ರೈಲ್ವೆ ಮಂತ್ರಿಯಾಗಿ ಈ ಖಾತೆಗೆ ಸಂಬಂಧಿಸಿದ ಹಳೆಯ ನಿಯಮಾವಳಿಗಳನ್ನು ಸಂಪೂರ್ಣವಾಗಿ ಪುನರ್‌ಪರಿಶೀಲನೆ ಮಾಡಿದರು. ಸಾರಿಗೆ ಮತ್ತು ರೈಲ್ವೆ ಇಲಾಖೆಯಲ್ಲಿರುವ ನೌಕರರ ಸೇವಾ ಪರಿಸ್ಥಿತಿಯನ್ನು ಸುಧಾರಿಸಿದರು. ಈ ಇಲಾಖೆಯಲ್ಲಿದ್ದ ಪಟ್ಟಾಭದ್ರ ಹಿತಾಸಕ್ತಿಗಳನ್ನು ಹಾಗೂ ಗೊಡ್ಡು ಸಂಪ್ರದಾಯಗಳನ್ನು ಬುಡಸಮೇತ ಕಿತ್ತುಹಾಕಲು ಮುಂದಾದರು. ಮೊಟ್ಟಮೊದಲು ರೈಲ್ವೆಯಲ್ಲಿರುವ ಅವ್ಯವಸ್ಥೆಗಳನ್ನು ಸರಿಪಡಿಸುವ ಕೆಲಸಕ್ಕೆ ಮುಂದಾದರು. ತಳವರ್ಗದವರ ಯೋಗಕ್ಷೇಮವನ್ನು ಲಕ್ಷ್ಯದಲ್ಲಟ್ಟುಕೊಂಡು ಭವಿಷ್ಯನಿಧಿಯನ್ನು ಜಾರಿಗೆತಂದರು. ಅಲ್ಲದೆ ಇಲಾಖೆಯ ನೌಕರರಿಗೆ ನಿವೃತ್ತಿ ವೇತನದ ವ್ಯವಸ್ಥೆಯನ್ನೂ ಕಲ್ಪಿಸಿದರು. ರೈಲ್ವೆ ಇಲಾಖೆಯಲ್ಲಿ ಕೆಳದರ್ಜೆಯ ನೌಕರರಿಗೆ ಬಡ್ತಿಯ ಅವಕಾಶ ಇರಲಿಲ್ಲ. ಯಾವ ದರ್ಜೆಯಲ್ಲಿರುತ್ತಿದ್ದರೋ, ಅದೇ ದರ್ಜೆಯಲ್ಲಿಯೇ ನಿವೃತ್ತರಾಗುತ್ತಿದ್ದರು. ಅಲ್ಲದೆ ಸವರ್ಣೀಯರು ದಲಿತರಿಗೆ ಯಾವುದೇ ಕೆಲಸದಲ್ಲಿ ಆದ್ಯತೆ ನೀಡುತ್ತಿರಲಿಲ್ಲ. ಈ ರೀತಿಯ ಪಕ್ಷಪಾತವನ್ನು ಬಾಬೂಜಿಯವರು ಮೊದಲು ತೊಡೆದುಹಾಕಿದರು. 'ಸಂವಿಧಾನದಲ್ಲಿಯೇ ಇಲ್ಲದ ಬಡ್ತಿ ಮೀಸಲಾತಿಯನ್ನು ಮೊದಲ ಬಾರಿಗೆ ರೈಲ್ವೆ ಇಲಾಖೆಯಲ್ಲಿ ಜಾರಿಗೆ ತಂದರು, ರೈಲ್ವೆ ಇಲಾಖೆಯ ನಂತರ ಮುಂಬಡ್ತಿ ಮೀಸಲನ್ನು ಕೇಂದ್ರ ಸರಕಾರವು ಎಲ್ಲಾ ವಿಭಾಗಗಳಲ್ಲಿಯೂ ಕಾರ್ಯರೂಪಕ್ಕೆ ತರುವಂತೆ ನೋಡಿಕೊಂಡರು.

ರೈಲ್ವೆ ಜಂಕ್ಷನ್‌ಗಳಲ್ಲಿನ ತಿಂಡಿ–ತಿನಿಸು ಅಂಗಡಿಗಳು ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿದ್ದವು ಅವುಗಳಲ್ಲಿ ಹರಿಜನರಿಗೆ ಮತ್ತು ಆದಿವಾಸಿಗಳಿಗೆ ಅವಕಾಶ ಕಲ್ಪಿಸಿದರು. ಸವರ್ಣೀಯ ಹಿಂದೂಗಳು ಬ್ರಿಟಿಷರ ಕಾಲದಲ್ಲಿ ರೈಲ್ವೆ ಸಂಚಾರದ ವೇಳೆ ಹಿಂದೂ ಪಾನಿ ಮತ್ತು ಮುಸ್ಲಿಂ ಪಾನಿ ಎಂಬೆರಡು ವಿಭಾಗಗಳನ್ನು ಹುಟ್ಟುಹಾಕಿದ್ದರು. ದೇಶ ಸ್ವತಂತ್ರಗೊಂಡ ನಂತರ ಇದನ್ನು 'ಪಂಡಿತ ಪಾನಿ' ಎಂಬ ಹೆಸರಿನಿಂದ ರೈಲಿನಲ್ಲಿ ನೀರು ಸರಬರಾಜು ಪ್ರಕ್ರಿಯೆ ಚಾಲನೆಯಲ್ಲಿತ್ತು. ಈ ನೀರು ಸರಬರಾಜು ಕಾರ್ಯವನ್ನು ಪಂಡಿತರೇ ನಿರ್ವಹಿಸುತ್ತಿದ್ದರು ಮತ್ತು ಇದರಲ್ಲಿ ಏಕಸ್ವಾಮ್ಯತೆಯನ್ನು ಸಾಧಿಸಿದ್ದರು. ಈ 'ಪಂಡಿತ ಪಾನಿ' ಸರಬರಾಜಿನಿಂದ ದಲಿತರ ಮತ್ತು ಆದಿವಾಸಿಗಳು ಪ್ರಯಾಣದ ವೇಳೆ ನೀರಿನಿಂದ ವಂಚಿತರಾಗುತ್ತಿದ್ದರು. ಈ ಪರಮಾಧಿಕಾರ ಶ್ರೇಷ್ಠತೆಯ ವರ್ತನೆಗೆ ಬೇಸರಗೊಂಡು, ತಕ್ಷಣವೇ ಇದನ್ನು ನಿಲ್ಲಿಸುವಂತೆ ಸೂಚಿಸಿದರು. ನೀರನ್ನು ಹಂಚಲು ವಾಲ್ಮೀಕಿ ಸಮುದಾಯವನ್ನು ನೇಮಿಸಿದರು. ರೈಲ್ವೆ ಇಲಾಖೆಯಲ್ಲಿ ಅಡುಗೆ ಸಹಾಯಕರನ್ನಾಗಿ ದಲಿತರನ್ನು ನೇಮಿಸಲು ಶಿಫಾರಸ್ಸು ಮಾಡಿದರು.

### ರೈಲ್ವೆ ಕಾರ್ಮಿಕರ ಪರವಾಗಿ ಜಗಜೀವನ್‌ರಾಮ್

ಕಾರ್ಮಿಕರ ಒಂದೇ ಒಂದು ಸಂಘಟನೆಯಿದ್ದರೆ ಕಾರ್ಮಿಕರ ನಡುವೆ ಐಕ್ಯತೆ ಮತ್ತು ಸಾಮರಸ್ಯ ಏಕರೀತಿಯಲ್ಲಿರುತ್ತದೆ. ಎರಡು ಸಂಘಟನೆಗಳಿಗಿಂತ ಒಂದು ಸಂಘಟನೆ ಬಲಯುತವಾದುದು ಎಂಬುದು ಸರಳ ಸಾಮಾನ್ಯ ತಿಳುವಳಿಕೆ. "ಪ್ರತಿಯೊಂದು ರೈಲ್ವೆ ವಿಭಾಗದ ನೌಕರರು ಒಂದು ಸಂಘಟನೆಯನ್ನು ರಚಿಸಿಕೊಳ್ಳಲು ಬಯಸುತ್ತೇನೆ. ಆದರೆ ಅದರ ಆಡಳಿತದಲ್ಲಿ ನಾನು ಕೈ ಹಾಕಲು ಬಯಸುವುದಿಲ್ಲ. ಒಂದು ವೇಳೆ ಅವರಿಗೆ ನನ್ನ ಸೇವೆಯ ಅಗತ್ಯವಿದ್ದರೆ ಸದಾ ನಾನು ಲಭ್ಯವಿರುವೆ ಎಂದು ಹೇಳಿದರು.

ನೌಕರಿಯ ವಿಚಾರದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ಅಭ್ಯರ್ಥಿಗಳು ನೇಮಕಾತಿಯು ನಿಗಧಿತ ಕೋಟಾದ ಪ್ರಮಾಣದಲ್ಲಿ ನಡೆಯುತ್ತಿಲ್ಲ. ಅದನ್ನು ಆದಷ್ಟು ಶೀಘ್ರವಾಗಿ ಪರಿಹರಿಸುತ್ತೇನೆ. ನನಗೂ ನಿಗಧಿತ ಕೋಟಾದಡಿಯಲ್ಲಿ ಅಗತ್ಯ ಸಂಖ್ಯೆಯನ್ನು ತುಂಬುವ ಪ್ರಾಮಾಣಿಕ ಹಂಬಲವಿದೆ. ನನಗಿಂತಲೂ ಮೊದಲು ಲಾಲ್ ಬಹದೂರ್ ಶಾಸ್ತ್ರಿ ಮತ್ತು ಡಾ. ಕುಂಜ್ರು ಅವರಿದ್ದರು. ನಾನು ಹಳೆಯ ಶಿಫಾರಸ್ಸುಗಳನ್ನು ಪರಿಶೀಲಿಸಿ, ರೈಲ್ವೆ ನೌಕರರ ಮಕ್ಕಳಿಗೆ ಶಿಷ್ಯವೇತನ ಮಂಜೂರು ಮಾಡಿರುವೆ. ಪ್ರಸ್ತುತದ ಸಂದರ್ಭದಲ್ಲಿ 930 ವಿದ್ಯಾರ್ಥಿಗಳಿಗೆ ಶಿಷ್ಯವೇತನ ನೀಡಲಾಗಿದೆ ಎಂದರು. ಇದರ ವಾರ್ಷಿಕ ಮೊತ್ತ 2,81,956 ರೂಪಾಯಿಗಳು"ಎಂದು ತಿಳಿಸಿದರು.

ಇಡೀ ನೌಕರಶಾಹಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ಥಿತಿಯಲ್ಲಿರುವುದು ನಾಲ್ಕನೇ ದರ್ಜೆ ನೌಕರರು. ಈ ದರ್ಜೆಯಲ್ಲಿ ಅತಿ ಹೆಚ್ಚಿನ ಮಂದಿ ದಲಿತರು ಮತ್ತು ಶೋಷಿತರು ಮಾತ್ರ. ಇವರು ಉನ್ನತ ಶಿಕ್ಷಣದ ಬಗೆಗೆ ಚಿಂತಿಸಿಯೂ ಇಲ್ಲ. ಆದ್ದರಿಂದ ಇವರಿಗೆ ಹೆಚ್ಚಿನ ಸಂಬಳ ದೊರಕುವುದು ಕಷ್ಟಸಾಧ್ಯವಾಗಿತ್ತು. ಇದನ್ನು ಅಧ್ಯಯನ ನಡೆಸಲು 'ತಾಪ್ಸೆ' ಎಂಬ ಸಮಿತಿಯೊಂದನ್ನು ನೇಮಿಸಿದರು. ಇದರ ಉದ್ದೇಶ ನಾಲ್ಕನೇ ದರ್ಜೆ ನೌಕರರಿಗೆ ಮುಂಬಡ್ತಿ ನೀಡುವುದಾಗಿತ್ತು. ನಾಲ್ಕನೇ ವರ್ಗದ ಜನ ಯಾರೆಂಬುದನ್ನು ಒಮ್ಮೆ ಸಂಸತ್ತಿನಲ್ಲಿ ಹೀಗೆ ಹೇಳುತ್ತಾರೆ; ನಾಲ್ಕನೇ ದರ್ಜೆಯ ನೌಕರ ಎಂದಾಕ್ಷಣ ಜವಾನನನ್ನು ಮುಂದೆ ನಿಲ್ಲಿಸುತ್ತಾರೆ. ರೈಲ್ವೆ, ಅಂಚೆ ಮತ್ತು ತಂತಿ ಇಲಾಖೆ ಮತ್ತು ಕಾರ್ಯಾಚರಣೆ ಸಿಬ್ಬಂದಿ ಅಥವಾ ಕಾರ್ಯನಿರ್ವಾಹಕ ಸಿಬ್ಬಂದಿಯ ಭಾಗವಾಗಿರುತ್ತಾರೆಂದು ಮಂಡಿಸಿದರು.

ಸಂಸತ್ತಿನಲ್ಲಿ ಶ್ರೀ ದಲ್ಜೀತ್‌ಸಿಂಗ್‌ರವರು ಪರಿಶಿಷ್ಟ ಜಾತಿ ಮತ್ತು ಪಂಗಡದವರ ಪ್ರಾತಿನಿಧ್ಯದ ಕುರಿತು ಕೇಳಿರುವ ಪ್ರಶ್ನೆಗೆ ಬಾಬೂಜಿಯವರು "ಬಾಂಬೆ, ಕಲ್ಕತ್ತಾ, ಅಲಹಾಬಾದ್ ಮತ್ತು ಮದ್ರಾಸು ಈ ನಾಲ್ಕು ವಿಭಾಗಗಳಲ್ಲಿ ಪರಿಶಿಷ್ಟ ಜಾತಿಗೆ ಮೀಸಲಾಗಿರುವ ಹುದ್ದೆಗಳ ಸಂಖ್ಯೆ 4321. ಪರಿಶಿಷ್ಟ ಪಂಗಡಕ್ಕೆ 2074 ಹುದ್ದೆ. ಆದರೆ ಪರಿಶಿಷ್ಟ ಜಾತಿಯಲ್ಲಿ ಆಯ್ಕೆಯಾದವರು 3454, ಪರಿಶಿಷ್ಟ ಪಂಗಡದಲ್ಲಿ ಕೇವಲ 342. ಈ ಅಂಕಿ ಅಂಶಗಳನ್ನು ಗಣನೆಗೆ ತೆಗೆದುಕೊಂಡು ನೀವು ಮಾತನಾಡುತ್ತಿರುವಿರಿ. ನಾಲ್ಕನೇ ದರ್ಜೆಯ 'ಶೌಚ' ಸಿಬ್ಬಂದಿಯು ಪರಿಶಿಷ್ಟ ಜಾತಿಯಿಂದಲೇ ಬಂದವರಾಗಿರುತ್ತಾರೆ. ಅವರನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸುವುದು ಉಚಿತವಲ್ಲ". ಏಕೆಂದರೆ ಆ ವರ್ಗವೊಂದನ್ನು ಬಿಟ್ಟರೆ ಉಳಿದವರಾರು ಈ ಕೆಲಸ ಮಾಡಲಾರರು ಎಂದು ಉತ್ತರವಿತ್ತರು.

**ಆಹಾರ, ಕೃಷಿ, ಸಹಕಾರ ಮಂತ್ರಿಯಾಗಿ ಜಗಜೀವನ್‌ರಾಮ್ (1967–70)**

ಈ ಸಮಯದಲ್ಲಿ ಇಂದಿರಾಗಾಂಧಿ ನೇತೃತ್ವದ ಕಾಂಗ್ರೆಸ್ ಸರ್ಕಾರವನ್ನು ರಚಿಸುವುದಿತ್ತು. ಈ ಸಂದರ್ಭದಲ್ಲಿ ಜಗಜೀವನರಾಮ್ ಅವರಿಗೆ ಕೃಷಿ ಮತ್ತು ಆಹಾರ ಖಾತೆ ಪ್ರಾಪ್ತವಾಯಿತು. ಈ ಖಾತೆಯನ್ನು ವಹಿಸಿಕೊಂಡ ಕೂಡಲೇ ಇವರು ಜನತೆಯನ್ನುದ್ದೇಶಿಸಿ 'ನನ್ನ ಕೃಷಿ ಮಂತ್ರಿಯ ಪದವಿಯ ಕಾಲದಲ್ಲಿ ಯಾರೊಬ್ಬರೂ ಹಸಿವಿನಿಂದ ಸಾಯಲು ಬಿಡುವುದಿಲ್ಲ' ಎಂಬ ಘೋಷಣೆಯನ್ನು ಆತ್ಮವಿಶ್ವಾಸದಿಂದ ನುಡಿದರು. ನಂತರ ಎಲ್ಲಾ ಕೃಷಿ ತಜ್ಞರನ್ನು ಕರೆಯಿಸಿ ಒಂದು ಸಮ್ಮೇಳನ ನಡೆಸಿದರು. ಇದರಲ್ಲಿ ಬರಪೀಡಿತ ಪ್ರದೇಶಗಳಲ್ಲಿ ಶೀಘ್ರವಾಗಿ ಬೆಳೆಯುವ ಫಸಲಿಗೆ ಆದ್ಯತೆ ನೀಡಲಾಯಿತು. ಇದರ ಜೊತೆಗೆ ಕೃಷಿ ಬೆಂಬಲ ಬೆಲೆಯ ಬಗೆಗೂ ಚಿಂತಿಸಲಾಯಿತು. ಒಮ್ಮೆ ಬೆಲೆಯ ಮಟ್ಟ ಕುಸಿದರೆ ರೈತರು ಬೆಳೆಗಳನ್ನು ಬೆಳೆಯಲು ನಿರುತ್ಸಾಹಿಗಳಾಗುವರು ಎಂಬುದನ್ನೂ ಮನಗಂಡಿದ್ದರು. ನಮ್ಮ ದೇಶದಲ್ಲಿ ಸಣ್ಣ ರೈತರ ಸಂಖ್ಯೆ ಅತ್ಯಧಿಕವಾಗಿದ್ದು, ಅವರುಗಳಿಗೆ ಸಾಲ ಯೋಜನೆಯನ್ನು ಜಾರಿಗೆತಂದರು.

ಶತಮಾನಗಳಿಂದಲೂ ಎಲ್ಲಾ ಕಾಲದಲ್ಲೂ ಅವಕಾಶ ವಂಚಿತ ಜನರೆಂದರೆ ಅವರು ದಲಿತರು ಮಾತ್ರ. ಇದನ್ನು ಮನಗಂಡಿದ್ದ ಜಗಜೀವನರಾಮ್ ಅವರು ಮಧ್ಯಪ್ರದೇಶದಲ್ಲಿ ನಡೆದ ಹರಿಜನ ಸಮ್ಮೇಳನದಲ್ಲಿ "ಸಾಗುವಳಿ ಮಾಡದ ಜಮೀನುಗಳನ್ನು ಹರಿಜನರು ಸ್ವಾಧೀನಪಡಿಸಿಕೊಳ್ಳ ಬಹುದು" ಎಂಬ ಘೋಷಣೆ ಹೊರಡಿಸಿದರು. ಈ ಘೋಷಣೆಗೆ ಹಲವಾರು ಭಿನ್ನಾಭಿಪ್ರಾಯಗಳೇ ಬಂದವು. ಇದನ್ನು ಕೇಳಿದ ಸವರ್ಣೀಯರು ಇವರ ಆಹ್ವಾನವನ್ನು ಪರಮಾರ್ಶಿಸತೊಡಗಿದರು. ಕೆಲವು ಮಂತ್ರಿಗಳ ಹೇಳಿಕೆ ಪ್ರಕಾರ ಪ್ರಸ್ತುತ ಇವರು ಭೂ ಆಕ್ರಮಣದ ಬಗ್ಗೆ ಮಾತನಾಡಿರುವವರು. ಮುಂದೊಂದು ದಿನ ಸ್ವತಂತ್ರ ಹರಿಜನ ರಾಷ್ಟ್ರಕ್ಕೂ ಕರೆ ನೀಡಬಹುದು ಎಂದು ಹೇಳುತ್ತಿದ್ದರು. ಸಮಾಜವಾದಿಗಳು ಜಗಜೀವನರಾಮ್ ಜನರಲ್ಲಿ ಜಾತಿ ಸಂಘರ್ಷ ಮತ್ತು ವರ್ಗ ಸಂಘರ್ಷವನ್ನು ಬಿತ್ತುತ್ತಿದ್ದಾರೆ ಎಂದು ಬೊಬ್ಬೆ ಹೊಡೆದರು. ಇವರ ಮಾತಿನ ಅರ್ಥ'ಯಾರು ಉಳುವುದಿಲ್ಲವೋ ಅವರಿಗೆ ಜಮೀನು ಇಟ್ಟುಕೊಳ್ಳುವ ಯಾವುದೇ ಅಧಿಕಾರವಿಲ್ಲ, ಉಳುವವನೇ ಭೂಮಿ ಒಡೆಯನಾಗಬೇಕು' ಎಂದು ಹೇಳಿದರು.

**ಭೂ ಸುಧಾರಣೆ ಮತ್ತು ಜಗಜೀವನರಾಮ್**

ಉಳುವವನೇ ಭೂಮಿ ಒಡೆಯ ಎಂಬ ವಿಚಾರದಲ್ಲಿ ಅಚಲ ನಂಬಿಕೆಯುಳ್ಳವರಾಗಿದ್ದರು. ಇದರಿಂದ ಭೂವಂಚಿತ ಸಮುದಾಯವು ಭೂಮಿಯನ್ನು ಪಡೆಯಲು ಸಾಧ್ಯ ಎಂಬುದು ಜಗಜೀವನರಾಮ್ ಅವರಿಗೆ ತಿಳಿದಿದ್ದಿತು. ಬೇರೆಯವರ ಜಮೀನಿನಲ್ಲಿ ಉಳುಮೆ ಮಾಡುತ್ತಿದ್ದ ಉಳುಮೆದಾರ ರೈತರಿಗೆ ಭೂಮಿಯ ಮಾಲಿಕತ್ವ ನೀಡಲು ವಾರ್ಷಿಕ ಯೋಜನೆಗಳಲ್ಲಿ ಭೂ ಸುಧಾರಣಾ ಯೋಜನೆಗಳನ್ನು ಅಳವಡಿಸಿ, ಅವುಗಳನ್ನು ನಿಷ್ಠೆಯಿಂದ ಅಳವಡಿಸಲು ರಾಜ್ಯ ಸರಕಾರಗಳಿಗೆ ಸೂಚಿಸಲಾಯಿತು. ಇದರ ಜೊತೆಗೆ;

1. ಬಿಹಾರದ ಗುಡ್ಡಗಾಡು ಪ್ರದೇಶದ ಪರಿಶಿಷ್ಟ ವರ್ಗದ ಜನರಿಗೆ ಭೂಮಿ ನೀಡಲು ಬಿಹಾರದ ಪರಿಶಿಷ್ಟ ಪ್ರದೇಶಗಳ ಕಾಯಿದೆಯನ್ನು ಜಾರಿಗೊಳಿಸಲಾಯಿತು.
2. ಗುಜರಾತ್ ರಾಜ್ಯದಲ್ಲಿ ಬಾಂಬೆ ಇನಾಮ್ಸ್ ಕಾಯಿದೆ 1958 ಮತ್ತು ಬಾಂಬೆ ತಲುಗ್‌ದಾರಿ ಟೆನ್ಯೂರ್ ರದ್ಧತಿ ಕಾಯಿದೆ 1949 ಇವುಗಳಿಗೆ ತಿದ್ದುಪಡಿ ತಂದು ಭೂಮಿ ಉಳುಮೆದಾರರಿಗೆ ಮಧ್ಯವರ್ತಿಗಳಿಂದ ಭೂ ಮಾಲಿಕತ್ವ ಪಡೆದುಕೊಳ್ಳಲು ಇನ್ನೊಂದು ಅವಕಾಶ ನೀಡಲಾಯಿತು.
3. ಕೇರಳ ರಾಜ್ಯದಲ್ಲಿ ಸ್ಟೇಆಫ್ ಎವಿಷನ್ ಪ್ರೊಸಿಡಿಂಗ್ಸ್ ಕಾಯಿದೆ 1969ಅನ್ನು ಜಾರಿಗೆತಂದು ಉಳುಮೆದಾರರಿಗೆ ರಕ್ಷಣೆ ನೀಡಲಾಯಿತು.
4. ತಮಿಳುನಾಡು ರಾಜ್ಯದಲ್ಲಿ 'ಗೂಡಲೂರು ಜಾಮನ್ ಎಸ್ಟೇಟುಗಳು ಕಾಯಿದೆ' 1968ನ್ನು ಜಾರಿಮಾಡಿ ಗುಡಲೂರು ತಾಲೂಕಿನ ಮಧ್ಯವರ್ತಿಗಳ ರದ್ಧತಿ ಮಾಡಲಾಯಿತು.
5. ಮಹಾರಾಷ್ಟ್ರ ರಾಜ್ಯದಲ್ಲಿ ರಾಜ್ಯ ಸರ್ಕಾರವು ಭೂ ಸುಧಾರಣಾ ಸಮಿತಿಯನ್ನು ರಚಿಸಿ ಸುಧಾರಣಾ ಕ್ಷೇತ್ರದಲ್ಲಿ ಉಂಟಾಗಿರುವ ಕೆಲಸ ಕಾರ್ಯಗಳ ಪ್ರಗತಿಯನ್ನು ಮೌಲ್ಯಮಾಪನ ಮಾಡಲು ಕ್ರಮ ಕೈಗೊಳ್ಳಲಾಯಿತು.

**ಜೀತ ಪದ್ಧತಿಯ ನಿರ್ಮೂಲನೆ**

ಜಗಜೀವನರಾಮ್ ಅವರು ಗ್ರಾಮೀಣ ಭಾರತದ ಸಾಮಾಜಿಕ ಮತ್ತು ಕೃಷಿ ಬದುಕಿನತ್ತ ದೃಷ್ಟಿ ಹಾಯಿಸಿದರು. ಈ ಸಂದರ್ಭದಲ್ಲಿ "ಹಳ್ಳಿಯಲ್ಲಿರುವವರೆಲ್ಲ ರೈತರೆಂದಾಗಲೀ, ರೈತರೆಲ್ಲ ಭೂಮಾಲೀಕರೆಂದಾಗಲೀ ಭಾವಿಸುವುದು ಸತ್ಯಕ್ಕೆ ದೂರವಾದ ಮಾತು ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಬಹುಸಂಖ್ಯಾತ ಕೃಷಿ ಕಾರ್ಮಿಕರು ಭೂಹೀನರಾಗಿದ್ದು, ಅವರಲ್ಲಿ ಶೇ.90 ಪರಿಶಿಷ್ಟಜಾತಿ

ಮತ್ತು ಪಂಗಡದವರೇ ಆಗಿರುತ್ತಾರೆ. ಕೃಷಿಯಲ್ಲಿ ವರಮಾನ ಕಡಿಮೆ ಮತ್ತು ಮೂರನೇ ಒಂದು ಭಾಗದ ಜನರು ನಿರುದ್ಯೋಗಿಗಳಾಗಿರುತ್ತಾರೆ. ಗ್ರಾಮೀಣ ಭಾರತದ ಅತಿ ದೊಡ್ಡ ಕಳಂಕವೆಂದರೆ ಅದು ಜೀತಗಾರಿಕೆ ಪದ್ಧತಿ. ಇದನ್ನು ಕುರಿತು ಸರ್ಕಾರ ಜೀತ ವಿಮೋಚನೆಗಾಗಿ ಆಯೋಜಿಸಿರುವ ಕಾರ್ಯಕ್ರಮಗಳು ಕೇವಲ ಪ್ರಚಾರ ವಿಷಯಗಳಾಗಿವೆ" ಹಾಗಾಗಿ ಜೀತ ನಿರ್ಮೂಲನೆಗೆ ಸರ್ಕಾರ ಮತ್ತು ಸಾರ್ವಜನಿಕರ ಬೆಂಬಲ ಅಗತ್ಯವೆಂದು ಭಾವಿಸಿದರು.

ಈ ನಿಟ್ಟಿನಲ್ಲಿ 1969ರಲ್ಲಿ ಅಖಿಲ ಭಾರತ 73ನೇ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ (73)ರಲ್ಲಿ ಮಾತನಾಡುತ್ತಾ "ನಮ್ಮ ಎಲ್ಲಾ ಭೂ ಸುಧಾರಣೆಗಳು ಕೃಷಿ ಹಾಗೂ ಗ್ರಾಮೀಣ ಆರ್ಥಿಕತೆಯನ್ನು ಆಧರಿಸಿ ಪ್ರಾರಂಭವಾಗಬೇಕು. ಭೂ ಸುಧಾರಣೆ ನಮ್ಮ ಆದ್ಯ ಕರ್ತವ್ಯವಾಗಿರಬೇಕು. ಭೂ ಒಡೆತನದ ಮಿತಿಯನ್ನು ಜಾರಿಗೊಳಿಸಿ ಹೆಚ್ಚುವರಿ ಸಿಗುವ ಖಾಸಗಿ ಹಾಗೂ ಸರ್ಕಾರಿ ಭೂಮಿಯನ್ನು ಭೂರಹಿತ ಕೃಷಿ ಕಾರ್ಮಿಕರಿಗೆ ಹಂಚಬೇಕು ಎನ್ನುವ ಮಹತ್ವಾಕಾಂಕ್ಷೆಯನ್ನು ವ್ಯಕ್ತಪಡಿಸುತ್ತಾರೆ. ಗ್ರಾಮೀಣ ಬದುಕನ್ನು ಹಸನುಗೊಳಿಸಲು ಸಹಕಾರಿ ಕೃಷಿ ಹಾಗೂ ಸೇವಾ ಕೇಂದ್ರಗಳನ್ನು ಪ್ರಾರಂಭಿಸಿ ರೈತರಿಗೆ ಉತ್ತಮ ಗುಣಮಟ್ಟದ ಬೀಜ, ರಾಸಾಯನಿಕ ಗೊಬ್ಬರ ಮೊದಲಾದವುಗಳನ್ನು ಒದಗಿಸಿ ಹಾಗೂ ಮಾರಾಟದ ವ್ಯವಸ್ಥೆಯನ್ನು ಮಾಡುವ ಅಗತ್ಯವಿದೆ ಎಂದು ಒತ್ತಿ ಹೇಳಿದ ಅವರು ಗ್ರಾಮೀಣ ಜನರ ಜೀವನದ ಅಭಿವೃದ್ಧಿಗೆ ಕೃಷಿಯೊಂದಿಗೆ ಹೈನುಗಾರಿಕೆ ಹಾಗೂ ಮೀನುಗಾರಿಕೆಯಂತಹ ಉಪಕಸುಬುಗಳನ್ನು ಬೆಂಬಲಿಸಲು ಯೋಜನೆಗಳನ್ನು ರೂಪಿಸುವ ಅಗತ್ಯತೆ"ಯನ್ನು ಪ್ರಸ್ತಾಪಿಸುತ್ತಾರೆ.

**ದೇಶ ರಕ್ಷಣೆಯಲ್ಲಿ ಪರಿಶಿಷ್ಟರ ಸೇವೆ (1970–74)**

ಹಲವಾರು ಇಲಾಖೆಗಳನ್ನು ದಕ್ಷವಾಗಿ ಸಮರ್ಥವಾಗಿ ಮುನ್ನಡೆಸಿ, ನ್ಯಾಯ ಒದಗಿಸಿದ್ದ ಬಾಬೂ ಜಗಜೀವನರಾಮ್ ಅವರನ್ನು 1970ರಲ್ಲಿ ರಕ್ಷಣಾ ಸಚಿವರನ್ನಾಗಿ ನೇಮಿಸಲಾಯಿತು. ಭಾರತದಲ್ಲಿ ಗಡಿಯಲ್ಲಿ ಭಾರತೀಯ ಸೈನಿಕರು ಎದುರಿಸುತ್ತಿದ್ದ ಸಮಸ್ಯೆಯನ್ನು ಖುದ್ದು ಭೇಟಿಮಾಡಿ ತಿಳಿದರು. ಇದರ ಜೊತೆಗೆ ಪೂರ್ವ ಮತ್ತು ಪಶ್ಚಿಮ ಎರಡು ಕಡೆಯಿಂದಲೂ ಪಾಕಿಸ್ತಾನ ಗಡಿ ತಂಟೆಗೆ ಬಂದು ಯುದ್ಧಕ್ಕೆ ಸನ್ನದ್ಧವಾಗಿತ್ತು. 1971 ಮಾರ್ಚ್ 25ರಂದು ಪಾಕಿಸ್ತಾನ ಪಡೆಗಳು ಹಠಾತ್ ದಾಳಿ ನಡೆಸಿದವು. ಜಗಜೀವನರಾಮ್ ಗಡಿಯಲ್ಲಿ ಸನ್ನದ್ಧರಾಗಿರುವಂತೆ ಜವಾನರಿಗೆ ಹೇಳಿದರಲ್ಲದೆ ಅವರಿಗೆ ಎಲ್ಲಾ ರೀತಿಯ ಸಹಾಯದ ಅಭಯ ನೀಡಿದರು. ಸಮರೋಪಾದಿಯಲ್ಲಿ ಪುನರ್‌ವಸತಿ ಕಾರ್ಯಗಳು ಏರ್ಪಟ್ಟವು. ಪೂರ್ವ ಪಾಕಿಸ್ತಾನದಿಂದ (ಈಗಿನ ಬಾಂಗ್ಲದೇಶ)ಭಾರತಕ್ಕೆ ಆಗಮಿಸಿದ ನಿರಾಶ್ರಿತರಿಗೆ ಅನ್ನ, ಬಟ್ಟೆ ನೀಡುವುದಲ್ಲದೆ ವಸತಿ ಸೌಲಭ್ಯ ಕಲ್ಪಿಸುವುದು ಅವಶ್ಯವೆನಿಸಿತು ಮತ್ತು ಇವರಿಗೆ ವೈದ್ಯಕೀಯ ನೆರವು ನೀಡಲಾಯಿತು.

ಭಾರತದ ರಕ್ಷಣಾ ವ್ಯವಸ್ಥೆಯಲ್ಲಿ ಕೆಲವೇ ವರ್ಗದ ಜನರಿಗೆ ಮಾತ್ರ ಅವಕಾಶ ಒದಗಿಸಲಾಗುತ್ತಿತ್ತು. ಇವರು ರಕ್ಷಣಾ ಇಲಾಖೆಯಲ್ಲಿ ಕೆಲವು ಮಾರ್ಪಾಡುಗಳನ್ನು ತರಲು ಬಯಸಿದರು. ಜಗಜೀವನರಾಮ್ ಅವರು "ಯಾವುದೇ ವ್ಯಕ್ತಿ ಸೈನ್ಯಕ್ಕೆ ಜಾತಿಯ ಆಧಾರದ ಮೇಲೆ ಅನರ್ಹ ಎಂದು ಪರಿಗಣಿಸಲಾಗುವುದಿಲ್ಲ. ಆತ ಯಾವುದೇ ಜಾತಿ ಮತ್ತು ಧರ್ಮದವನಾಗಿರಲೀ, ಆತನ ದೈಹಿಕ ಸದೃಢತೆಯ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು ಎಂದು ಘೋಷಿಸಿದರು". ಈ ಒಂದು ಘೋಷಣೆಯೇ ಪ್ರಸ್ತುತದಲ್ಲಿ ದಲಿತರು ಸೇನೆಯನ್ನು ಸೇರಲು ಅವಕಾಶವನ್ನು ಒದಗಿಸಿದಂತಾಯಿತು. ತಲತಲಾಂತರದಿಂದ ಬಂದ ಜಾತಿಪದ್ಧತಿ, ಹಳೆ ಸಂಪ್ರದಾಯಗಳನ್ನು ಕಿತ್ತೆಸೆದು ಕ್ಷತ್ರಿಯ ವಿಶೇಷ ಸವಲತ್ತಿನ ವ್ಯವಸ್ಥೆಯನ್ನು ತೊಡೆದು ಹಾಕಿ, ಸಮಾಜದ ಎಲ್ಲಾ ವರ್ಗದವರಿಗೆ ಸೈನ್ಯದ ಬಾಗಿಲನ್ನು ಮುಕ್ತವಾಗಿ ತೆರೆದರು.

**ಸಮಾರೋಪ**

ಹೀಗೆ ಜಗಜೀವನರಾಮ್‌ರವರು ರಾಜಕೀಯ ಜೀವನಕ್ಕೂ ಮೊದಲು ಮತ್ತು ರಾಜಕೀಯ ಜೀವನದಲ್ಲಿ ದಲಿತರ ಹಿತಾಸಕ್ತಿಗೆ ದುಡಿದುದನ್ನು ಮನಗಾಣಬಹುದು. ಇಲಾಖೆ ಯಾವುದೇ ಇರಲಿ, ಅದರಲ್ಲಿ ದಲಿತರ ಪ್ರಾತಿನಿಧ್ಯ ಎಷ್ಟೆಂಬುದನ್ನು ನೋಡುತ್ತಿದ್ದರು. ಅದರಲ್ಲಿ ಅಗತ್ಯ ಸವಲತ್ತುಗಳನ್ನು ಸೌಲಭ್ಯ ವಂಚಿತರಿಗೆ ನೀಡುತ್ತಿದ್ದರು. ಸ್ವಾತಂತ್ರ್ಯ ನಂತರ ಭಾರತದಲ್ಲಿ ದಲಿತರ ಒಳಗೊಳ್ಳುವಿಕೆ ಕಾರ್ಯಗಳು ಅತಿ ಜರೂರಾಗಿ ನಡೆದವು. ಇವು ಜಗಜೀವನರಾಮ್‌ರವರು ತಮ್ಮ ದೂರದೃಷ್ಟಿಯಿಂದ ಅಭ್ಯಾಸಿಸುತ್ತಿದ್ದ ಫಲವಾಗಿದೆ. ರಕ್ಷಣಾ ಸಚಿವರಾಗಿ ನೇಮಕವಾದ ಕೂಡಲೇ ಜನರು ಸೈನ್ಯಕ್ಕೆ ಅಸ್ಪೃಶ್ಯರನ್ನು ನೇಮಕ ಮಾಡುತ್ತಾರೆಯೇ ಎಂಬ ಪ್ರಶ್ನೆಗಳು ಎದ್ದಿದ್ದವು. ಅವರ ಪ್ರಶ್ನೆಗಳಿಗೆ ತಮ್ಮ ಕಾರ್ಯಗಳಿಂದಲೇ ಉತ್ತರಿಸಿದುದು ಜಗಜೀವನರಾಮ್ ಅವರ ಪ್ರತಿಭಾವಂತಿಕೆಯ ಲಕ್ಷಣವಾಗಿತ್ತು. ಸ್ವಾತಂತ್ರ್ಯ ಪೂರ್ವ ಮತ್ತು ನಂತರದಲ್ಲಿ ರಾಷ್ಟ್ರ ಮತ್ತು ದಲಿತರಿಗೆ ಹಾಗೂ ಸಮಸ್ತ ಜನತೆಗೂ ಹಲವಾರು ಕೊಡುಗೆಗಳನ್ನು ನೀಡಿದ್ದಾರೆ. ಅಂಬೇಡ್ಕರ್ ನಂತರದ ಭಾರತದಲ್ಲಿ ದಲಿತ ಚಳವಳಿಗೆ ಕೊಡುಗೆ ನೀಡಿದವರಲ್ಲಿ ಬಾಬೂಜಿ ಪ್ರಮುಖರು. ಅಂಬೇಡ್ಕರ್‌ರವರ ಆಶಯವಾದ ದಲಿತರ ರಾಜಕೀಯ ನಾಯಕತ್ವವನ್ನು ಪೂರೈಸಿದರು. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಕಾಲದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದ ಮಹಾನ್ ನಾಯಕ ಜಗಜೀವನ್‌ರಾಮ್ ಅವರನ್ನು ಯಾರೂ ಕೂಡ ಮರೆಯಲಾಗದು.

**ಪರಾಮರ್ಶನ ಗ್ರಂಥಗಳು**


- ವೈಶಾಲಿ. (2019). ಡಾ.ಬಾಬೂ ಜಗಜೀವನ್ ರಾಮ್ ಸಂಸದರಾಗಿ ಮತ್ತು ಸಚಿವರಾಗಿ: ಒಂದು ಅಧ್ಯಯನ.
- Anil Kumar Sinha. (2005). *Jagjivan Ram- The enlightened Spirit.* Aniket Seva.
- Bakshi S.R. (1992). *Jagjivanram: The Harijan Leader.* Anmol Publication.
- Chanchreek K.L.(2006). *Babu Jagjivan Ram: A Nation Builder, vol-I*, Shree Publishers.
- Dasari S. (1990). *Socio-Political Background of Babu Jagjivan Ram,* Ambedkar Fraternity Printing Publication Service.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.95 - 100
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ತತ್ವಪದ ಸಾಹಿತ್ಯದಲ್ಲಿ ಆಧುನಿಕತೆಯ ವಿರೋಧದ ನೆಲೆಗಳು

**ಡಾ. ಜಾಜಿ ದೇವೇಂದ್ರಪ್ಪ**
ಕನ್ನಡ ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗಂಗಾವತಿ.

***Abstract:***
*ಕನ್ನಡ ನೆಲದಲ್ಲಿ ಜನರ ಭಾವನೆಯೊಳಗೆ ಹೊಕ್ಕು ಅಂತರಂಗ ಮತ್ತು ಬಹಿರಂಗ ಶುದ್ಧಿಯನ್ನು ಮಾಡಿದ ಸಾಹಿತ್ಯ ಪ್ರಕಾರಗಳಲ್ಲಿ ತತ್ವಪದಗಳಿಗೆ ಬಹು ಮಹತ್ವವಿದೆ. ಕನ್ನಡದಲ್ಲಿ ವೈಚಾರಿಕತೆಯನ್ನು ಬೋಧಿಸಿದ, ಚಳುವಳಿಯನ್ನು ರೂಪಿಸಿದ, ಜಾತ್ಯಾತೀತ, ಲಿಂಗಾತೀತ ನೆಲೆಯಲ್ಲಿ ಸಮಾಜವನ್ನು ಕಟ್ಟುತ್ತಲೇ ಸಾಹಿತ್ಯ ಸೃಜನಮಾಡಿದ ವಚನ ಸಾಹಿತ್ಯ ಬರೆದ ಶರಣರು ಒಂದು ಚಳವಳಿಯನ್ನೇ ಮಾಡಿದರು. ನಂತರದ ಕಾಲಘಟ್ಟದಲ್ಲಿ ತತ್ವಪದಕಾರರು, ಸೂಫಿಗಳು, ಆರೂಢರು, ಅವಧೂತ ಇತ್ಯಾದಿ ಪಂಥಗಳು ನಿರಂತರ ಶ್ರಮಿಸಿದರು. ಪ್ರಸ್ತುತ ಲೇಖನದಲ್ಲಿ ತತ್ವಪದ ಸಾಹಿತ್ಯದಲ್ಲಿ ಆಧುನಿಕತೆಯ ವಿರೋಧದ ನೆಲೆಗಳನ್ನು ಕುರಿತು ಅಧ್ಯಯನಿಸಲಾಗಿದೆ.*

***Keywords:*** *ವಚನ ಸಾಹಿತ್ಯ, ತತ್ವಪದ ಸಾಹಿತ್ಯ, ಆಧುನಿಕತೆ, ಪ್ರತಿರೋಧದ ನೆಲೆಗಳು.*

**ಪೀಠಿಕೆ**

ಮಧ್ಯಕಾಲೀನ ಭಾರತದಲ್ಲಿ ಸಾಮಾಜಿಕವಾಗಿ ನಡೆದ ಭಕ್ತಿ ಸ್ವರೂಪ ವೈಚಾರಿಕ ಆಕೃತಿಯಾದದ್ದೊಂದು ವಿಶೇಷ. ಅದರಲ್ಲಿಯೂ ಕರ್ನಾಟಕ ಅಂತಹ ಜನಪರ, ಜನಧ್ವನಿಯ ಮುಖ್ಯ ಕೇಂದ್ರವಾಗಿದ್ದಿತು. ಅಂತೆಯೇ 17–18 ನೇ ಶತಮಾನದ ಕಾಲಘಟ್ಟದಲ್ಲಿ ಕರ್ನಾಟಕದ ಕೆಲವು ಭೌಗೋಳಿಕ ವಲಯಗಳಲ್ಲಿ ವಿಚಿತ್ರವಾದ ವಿದ್ಯಮಾನಗಳು ನಡೆದವು. ಆಗತಾನೆ ಈ ನೆಲಕ್ಕೆ ಬ್ರಿಟಿಷರು ಕಾಲಿಟ್ಟಿದ್ದರು. ಅವರ ರಾಜಕೀಯ ಇಚ್ಛಾಶಕ್ತಿ ಹಾಗೂ ಧರ್ಮ ಪ್ರಸಾರದ ಆಕಾಂಕ್ಷೆಗಳು ಎಲ್ಲೆಡೆ ತಲ್ಲಣಗಳನ್ನುಂಟು ಮಾಡಿದ್ದುವು. ದೇಶೀಯವಾದ ರಾಜಮನೆತನಗಳು ತಮ್ಮ ಸರ್ವಾಧಿಕಾರಿ ಧೋರಣೆಯನ್ನು ಬದಿಗಿಟ್ಟು ಬ್ರಿಟಿಷ್ ವಸಾಹತುಶಾಹಿಗಳು ಬೀಸಿದ ಪ್ರಗಾಢವಾದ ರಾಜಕಾರಣದ ಬಲೆಗೆ ಬಿದ್ದರು. ಜೊತೆಗೆ ಅವರನ್ನು ರಾಜಕೀಯವಾಗಿ ಎದುರಿಸಲಾಗಿದೆ, ಒಪ್ಪಂದಗಳನ್ನು ಮಾಡಿಕೊಂಡು ಒಂದರ್ಥದಲ್ಲಿ ಸೋತುಹೋಗಿದ್ದರು. ಒಗ್ಗಟ್ಟೇಯಿಲ್ಲದ ದೇಶಿಯ ರಾಜಮನೆತನಗಳು. ಅವರ ಒಳಜಗಳಗಳು, ಜಾತಿಯ ಧರ್ಮದ ಸಂಘರ್ಷಗಳ ಕಾರಣದಿಂದ ಒಡೆದು ಚೂರಾದರು. ಈ ಸಮಯದಲ್ಲಿ ಮೈಸೂರು ಭಾಗ ಬ್ರಿಟಿಷ್ ವಸಾಹತು ಸಂಸ್ಕೃತಿಯನ್ನು ಅನುಕರಿಸತೊಡಗಿತು. ಇಂಗ್ಲಿಷ್ ಶಿಕ್ಷಣ ಪಡೆದು ಆಧುನಿಕತೆಯತ್ತ ತಮ್ಮ ಸಾಮಾಜಿಕ, ಸಾಂಸ್ಕೃತಿಕ ಜೀವನವನ್ನು ನಡೆಸತೊಡಗಿದರು. ಅಲ್ಲಿನ ಮೈಸೂರು ಒಡೆಯರು ಆಧುನಿಕ ಶಿಕ್ಷಣ ಪಡೆದು ಹೊಸತಿನ ಕಡೆ ಚಲಿಸಿದರು. ಇದೇ ಸಂದರ್ಭದಲ್ಲಿ ಮೈಸೂರು–ಮಂಗಳೂರು–ಧಾರವಾಡ ಕರ್ನಾಟಕ ಭಾಗಗಳಲ್ಲಿ ಬ್ರಿಟಿಷ್ ಮಿಶನರಿಗಳು

***Please cite this article as:*** ಜಾಜಿ ದೇವೇಂದ್ರಪ್ಪ. (2024). ತತ್ವಪದ ಸಾಹಿತ್ಯದಲ್ಲಿ ಆಧುನಿಕತೆಯ ವಿರೋಧದ ನೆಲೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವೆಲಪ್‌ಮೆಂಟ್,* 2(6), 95–100.

ಹೊಸಬಗೆಯ ಶಿಕ್ಷಣ ನೀಡುತ್ತಲೇ ಸಾಹಿತ್ಯ ಪರಿಚಾರಿಕೆಯನ್ನು ಸಂಗ್ರಹ–ಸಂಪಾದನೆ–ಪ್ರಕಟಣೆಯ ಮೂಲಕ ಮಹತ್ತರವಾದ ಕೊಡುಗೆಯನ್ನು ನೀಡಿದರು. ಆ ಕಾಲಘಟ್ಟದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯೂ ಆ ಭಾಗದ ಸಾಂಪ್ರದಾಯಿಕ ಲೇಖಕರ ಮೇಲಾಯಿತು. ಸಹಜವಾಗಿ ಆ ಪ್ರದೇಶಗಳಲ್ಲಿ ಸಾರಿಗೆ–ಶಿಕ್ಷಣ–ಇಂಗ್ಲಿಷ್ ಭಾಷೆ ಪಾಶ್ಚಾತ್ಯ ಸಂಸ್ಕೃತಿಯಿಂದ ಸಾಮಾಜಿಕ ಪಲ್ಲಟವಾಯಿತು. ಒಂದರ್ಥದಲ್ಲಿ ಅಭಿವೃದ್ಧಿಯ ಪಥದಲ್ಲಿ ಜನತೆಯು ಸಾಗುತ್ತಿತ್ತು.

ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ 17–18 ನೇ ಶತಮಾನದಲ್ಲಿ ಬ್ರಿಟಿಷ್ ವಸಾಹತು ಕಾಲಿಟ್ಟಿತ್ತು. ಆದರೆ ಇದೇ ಕಾಲಘಟ್ಟದಲ್ಲಿ ಇಲ್ಲಿ ರಾಜಕೀಯವಾಗಿ ಆಳವಾಗಿ ನೆಲೆಯೂರಿದ್ದ ಹೈದ್ರಾಬಾದು ನಿಜಾಂ ಪ್ರಭುತ್ವ ಪಾಶ್ಚಾತ್ಯರ ಬೇರುಗಳಿಗೆ ಸೊಪ್ಪು ಹಾಕಲಿಲ್ಲ. ಮುಂದೆ 19 ನೇ ಶತಮಾನ ಹಾಗೂ 20 ನೇ ಶತಮಾನದ ಪೂರ್ವಾರ್ಧದವರೆಗೂ ತಮ್ಮ ಬಿಗಿಯಾದ ರಾಜಕೀಯ ಹಿಡಿತದಿಂದಾಗಿ ಇಂಗ್ಲಿಷ್ ಶಿಕ್ಷಣ, ಮಿಶನರಿಗಳ ಧಾರ್ಮಿಕ ಪ್ರಸಾರಗಳನ್ನು ತಡೆದರು. ಮಾತ್ರವಲ್ಲ ಇಡೀ ದೇಶದಲ್ಲಿ ಆಂಗ್ಲರ ಆಡಳಿತ ಗಾಢವಾಗಿದ್ದಾಗ ಈ ಭಾಗದಲ್ಲಿ ನಿಜಾಂ ಸರಕಾರದ ತೀವ್ರವಾದ ಆಡಳಿತವಿತ್ತು. ಶಿಕ್ಷಣದಲ್ಲಿ ಉರ್ದುಭಾಷೆಯನ್ನು ಕಡ್ಡಾಯಗೊಳಿಸಲಾಗಿತ್ತು. ಆಡಳಿತ ಭಾಷೆಯೂ ಉರ್ದುವೇ ಆಗಿತ್ತು. ಶಾಲಾ–ಕಾಲೇಜುಗಳಲ್ಲಿ ಉರ್ದು ಇತ್ತು. ನಿಜಾಂ ಸರ್ಕಾರದ ಕಾರಣದಿಂದ ಇಲ್ಲಿನ ಸಮುದಾಯಗಳಲ್ಲಿಯೂ ಧಾರ್ಮಿಕ ಸಂಘರ್ಷಗಳು ನಿರಂತರವಾಗಿದ್ದವು. ಎರಡು ಧರ್ಮಗಳ ನಡುವೆ ನಿರಂತರ ತಿಕ್ಕಾಟದಿಂದ ಜನತೆಯು ಸಾಮಾಜಿಕವಾಗಿ ವಿಚಿತ್ರ ಅನುಭವಗಳಲ್ಲಿ ಗೊಂದಲಕ್ಕೆ ಈಡಾಗಿದ್ದರು. ಧಾರ್ಮಿಕ ಕೊಡು–ಪಡೆಯಿಂದಾಗಿಯೂ ಹಿಂದೂ–ಮುಸ್ಲಿಂ ಮತಾಂತರಗಳಾದವು. ನಿಜಾಂ ಕಾಲದಲ್ಲಾದ ರಜಾಕಾರರ ತೀವ್ರ ಹಾವಳಿಯಿಂದಲೂ ಜನತೆಯು ಕಂಗಾಲಾಗಿ ಆರ್ಥಿಕ ದಿವಾಳಿತನ ಅನುಭವಿಸಿದರು. ರಾಜಕೀಯ ಅಸ್ಥಿರತೆಯುಂಟಾಗಿತ್ತು. ಸಾಮಾಜಿಕ ಕ್ಷೋಭೆಗಳೆದುರಾದವು. ಇಂತಹ ಸಂಕೀರ್ಣ ಸಂದರ್ಭದಲ್ಲಿ ಜನರನ್ನು ಸೌಹಾರ್ದ ಜೀವನಕ್ಕೆ ಕರೆತರುವ ಕೆಲಸವನ್ನು ಈ ಭಾಗದ ತತ್ವಪದಕಾರರು, ಸೂಫಿಗಳು, ಆರೂಢರು, ಅವಧೂತ ಇತ್ಯಾದಿ ಪಂಥಗಳು ನಿರಂತರ ಶ್ರಮಿಸಿದರು. ಈ ಸಂದರ್ಭದಲ್ಲಿ ಜನತೆಯು ಧರ್ಮವನ್ನು ನೋಡದೆ ಇಸ್ಲಾಂನ್ನು ಹಿಂದೂ–ಹಿಂದೂವನ್ನು ಇಸ್ಲಾಂ ಏಕೀಭವಿಸಿಕೊಂಡು ದರ್ಗಾ–ದೇವಾಲಯಗಳನ್ನು ಒಂದು ಮಾಡಿಕೊಂಡು ಬದುಕಲೆತ್ನಿಸಿದರು. ಈ ವಿಕ್ಷಿಪ್ತ ಕಾಲಘಟ್ಟದಲ್ಲಿ ಹೈದ್ರಾಬಾದ್ ಕರ್ನಾಟಕದಲ್ಲಿ 300 ಕ್ಕೂ ಹೆಚ್ಚು ತತ್ವಪದಕಾರರು ಸೂಫಿಗಳು ಪದಗಳನ್ನು ಕಟ್ಟಿ ಜನತೆಯ ಮನೋಭೂಮಿಕೆಗೆ ಬಿತ್ತಿದರು. ಈ ಬಿತ್ತುಗಳು ಹೆಚ್ಚಾಗಿ ಆಧ್ಯಾತ್ಮಿಕ–ಧಾರ್ಮಿಕ–ಭಕ್ತಿಯ–ಮುಕ್ತಿಯ ಸ್ವರೂಪವಾಗಿದ್ದವು. ಜನತೆಯನ್ನು ಮತ, ಜಾತಿ, ಧರ್ಮರಾಹಿತ್ಯರನ್ನಾಗಿ ಮಾಡಲು ಭಕ್ತಿಯ ಚೌಕಟ್ಟು ಅನಿವಾರ್ಯವಾಗಿತ್ತು. 17 ರಿಂದ 19 ನೇ ಶತಮಾನದವರೆಗೆ ದಾರ್ಶನಿಕ ಭಕ್ತಿಯ ಸಾಹಿತ್ಯ ಪದ ಸೃಜನವಾಗಿದ್ದರಿಂದ ಇಲ್ಲಿನ ಜನಸಂಸ್ಕೃತಿಗೆ ಬ್ರಿಟಿಷರ ಆಧುನಿಕತೆಯು ಬೇಗ ಒಳದಾರಿಗೆ ಬರಲಾಗಲಿಲ್ಲ. ಆದರೂ 19 ನೇ ಶತಮಾನದ ಉತ್ತರಾರ್ಧ ಮತ್ತು 20 ನೇ ಶತಮಾನದ ಪೂರ್ವಾರ್ಧದಲ್ಲಿ ಹೈದ್ರಾಬಾದ್ ಕರ್ನಾಟಕ ಪರಿಸರದಲ್ಲಿಯೂ ಆಧುನಿಕತೆಯ ಗಾಳಿಯು ಸುಳಿದಾಡಿತು. ಮಾತ್ರವಲ್ಲ ಪ್ರಗಾಢವಾಗುತ್ತಾ ಗ್ರಾಮೀಣ ರೈತರ ಬಳಿ ಸಾರಿತು. ಹಳ್ಳಿಗಾಡಿನ ರೈತಾಪಿಜನ ಮೊಘಲಾಯಿ ಮತ್ತು ನಿಜಾಂನ ರಾಜಕೀಯ ಭಾಗವಾಗಿದ್ದ ರಜಾಕಾರರ ದುರಾಕ್ರಮಣದಿಂದ ದಿವಾಳಿಯಾಗಿ ಆರ್ಥಿಕ ಸಂಕಷ್ಟದಲ್ಲಿದ್ದ ಜನಸಮುದಾಯಗಳಿಗೆ ಬ್ರಿಟಿಷರ ನೂತನ ಜೀವನಶೈಲಿಗಳು ವೆಚ್ಚದಾಯಕವೆನಿಸಿದ್ದವು. ಇದನ್ನು ಸಮದೂಗಿಸಲೆಂದೇ ಆ ಕಾಲದ ತತ್ವಪದಕಾರರು ಆಧುನಿಕತೆಯನ್ನು ಬಹುಶಃ ವಿರೋಧಿಸಿದರು. ಪಾಶ್ಚಾತ್ಯ ಜೀವನ ಶೈಲಿ,

ಆಹಾರಕ್ರಮ, ನಡೆ–ನುಡಿ ಆಚರಣೆಗಳನ್ನು ವಿರೋಧಿಸಿದ ತತ್ವಪದಕಾರರು ಕೆಲವೇ ಜನ. ಇವರು ಬ್ರಿಟಿಷ್ ಪ್ರಭುತ್ವ, ನಿಜಾಂ ಪ್ರಭುತ್ವಗಳನ್ನು ರಾಜಕೀಯವಾಗಿ ನೇರವಾಗಿ ವಿರೋಧಿಸಲಿಲ್ಲ. ಬದಲಾಗಿ ಬ್ರಿಟಿಷ್ ವಸಾಹತು ಕೊಡುಗೆಯಾಗಿ ನೀಡಿದ ಜೀವನಶೈಲಿಗಳನ್ನು ತಿರಸ್ಕರಿಸುವ ಮೂಲಕ ಗ್ರಾಮೀಣ ರೈತಾಪಿ ಜನರಿಗೆ ದುಂದುವೆಚ್ಚ, ಅನಾರೋಗ್ಯಕಾರಕ ಆಹಾರಕ್ರಮಗಳಿಂದ ದೂರವಿರುವಂತೆ ಎಚ್ಚರಿಸುವಲ್ಲಿ ನಿರತರಾದರು.

ತತ್ವಪದಕಾರರಲ್ಲಿ ಆಧುನಿಕತೆಯನ್ನು ಅದರ ಹತಾರಗಳನ್ನು ವಿರೋಧಿಸಿದ ತತ್ವಪದ ಕವಿ ವಡಕಿ ತಾತಪ್ಪಯ್ಯ ಮುಖ್ಯರಾದವರು. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ವಡಕಿಯ ಈ ಅನುಭಾವಿ ಕವಿಯು ಆಗತಾನೆ ಹಳ್ಳಿ ಜಗತ್ತನ್ನು ಪ್ರವೇಶ ಮಾಡಿದ್ದ 'Tea' (ಚಹ) ಒಂದು ವಿಧವಾದ ಆಹಾರಪೇಯ ಕ್ರಾಂತಿಯೆನ್ನಬಹುದು. ಭಾರತೀಯರು ಎಂದೂ ನೋಡದೇ ಇದ್ದ 'ಚಹ' ಮನೆಮಾತಾಯಿತು. ದಿನನಿತ್ಯದ ಜೀವಧಾತುವಿನಂತೆ ಆಕ್ರಮಿಸಿಕೊಂಡಿತು. ಬೀಗರು–ಬಿಜ್ಜರು ಬಂದಾಗ ಸಾಂಪ್ರದಾಯಿಕವಾಗಿ ಶರಭತ್ತು ಪಾನೀಯ ಕೊಡುತ್ತಿದ್ದ ಸಮುದಾಯಗಳು 'ಚಹ' ಕೊಡಲು ಆರಂಭಿಸಿದವು. ಚಹ ಆಧುನಿಕತೆಯ ಸಂಕೇತವಾಯಿತು. ಮಾತ್ರವಲ್ಲ ಆರಂಭದಲ್ಲಿ ಉಳ್ಳವರ ಮನೆಯ ಪೇಯವಾಗಿ, ಪ್ರತಿಷ್ಠೆಯ ಸಂಕೇತವೂ ಆದದ್ದೊಂದು ವಿಸ್ಮಯ. ಅವನ ಮನಿಗೆ ಹೋದ್ರ ಚಹಾಪಾನಿನೂ ಕೊಡಲಿಲ್ಲ.' ಎಂಬ ನಾಣ್ಣುಡಿಯೂ ಜನಜನಿತವಾಯಿತು. ಇಂತಹ ಚಹವನ್ನು ಅಂದಿನ ರೈತಾಪಿ ಜನರು ಬಹುವಾಗಿ ರೂಢಿಸಿಕೊಂಡರೆಂದು ತಿಳಿದು ತತ್ವಪದಕಾರ ಗಡಿ ವಡಕಿ ತಾತಪ್ಪಯ್ಯನವರು–

***ಚಹಾ ಕುಡಿಬ್ಯಾಡೋ ಮನುಜಾ***
***ಛೀ ಮಾಡುವೆ ತಿಳಿತಿಳಿತಿಳಿ***
***ಚಹಾ ಕುಡಿಬ್ಯಾಡೋ ಮನುಜಾ***
***ಚಹಾ ಕಾಫೀ ಕುಡಿಬ್ಯಾಡೋ ಮಂಗ***
***ಚಾಳಿ ಚಟದ ಮನಸಿನ ಮಂಗ***
***ಛೇ ಇಂದ್ರಿಯ ನಷ್ಟವೇ ಭಂಗ***

ಬ್ರಿಟಿಷರಿಗೆ ಪ್ರತಿಷ್ಠೆಯ ಪಾನೀಯವಾಗಿದ್ದ ಚಹ ಕ್ರಮೇಣ ಭಾರತೀಯರ ಜೀವನದ ಭಾಗವಾಯಿತು. ಇದರಿಂದ ಆರೋಗ್ಯನಾಶವೆಂದು ತಿಳಿದ ತಾತಪ್ಪಯ್ಯನವರು ಅದೊಂದು ಚಟವಾಗಿ ಪರಿಣಮಿಸಿ ದೇಹದ ಮೇಲೆ ಬೀರುವ ದುಷ್ಪರಿಣಾಮದ ಬಗೆಗೆ ಅಂದೇ ಎಚ್ಚರಿಸಿದರು. ಅಂತೆಯೇ ಚಹಾ, ಕಾಫಿಯನ್ನು ಹೀನಾಯವಾಗಿ ಬೈಯ್ದಿದ್ದಾರೆ.

***ಚಕ್ಕೆಪುಡಿ ನೀರು ಬೆರೆಸಿ***
***ಸಕ್ರಿಹಾಲು ಅದರೊಳು ಕಲಸಿಟ್ಟಿ***
***ಕಪ್ಪು ಬಸಿ ಉಪ್ಪಿಟ್ಟು ದೋಸಿ***
***ಹಚ್ಚೀಡುವುದು ಊರಾಳೂ ಹೇಸಿ.***

ಚಹಾವನ್ನು ಊರು ಹಾಳು ಮಾಡುವ ಹೇಸಿಯೆಂದು ನಿಂದಿಸಿದ್ದಾನೆ. ಹಾಗೆಯೇ ನಮ್ಮ ಗ್ರಾಮೀಣ ರೈತಾಪಿ ಜನವರ್ಗ ದೇಸೀ ಊಟವನ್ನು ಬೆಳಗ್ಗೆ ತಿಂದು ಕೃಷಿಕಾಯಕದಲ್ಲಿ ನಿರತರಾಗುತ್ತಿದ್ದರು. ಆಧುನಿಕತೆಯ ಪ್ರಭಾವದಿಂದ ಉಪ್ಪಿಟ್ಟು–ದೋಸೆಯಂತಹ ಲೈಟ್ವೈಟ್ ಉಪಹಾರಗಳ ದಾಸರಾದ ಸಂದರ್ಭದಲ್ಲಿ ಅವುಗಳನ್ನೂ ಕೂಡ ಊರು ಹಾಳು ಮಾಡುವ ಹೇಸಿ ಎಂದೇ ಕರೆದು ಆ ಪದಾರ್ಥಗಳನ್ನೂ ಜನರಿಂದ ಬಿಡಿಸುವ ಪ್ರಯತ್ನವನ್ನು ತಾತಪ್ಪನವರು ಮಾಡಿದರು. ಚಹಾ ಮತ್ತು ಉಪಹಾರಗಳು ಕೇವಲ ಮನೆಗಳಲ್ಲಿನ ಒಳಾವರಣ ತಿಂಡಿಗಳಾಗಿರದೇ ಹೊರಾವರಣದ ಹೋಟೆಲ್ ತಿಂಡಿಗಳಾಗಿ ಎಲ್ಲಾ ಜನವರ್ಗಗಳಿಗೆ ದೊರೆಯುವಂತಹ ವ್ಯವಸ್ಥೆ ಬಂದುದನ್ನು ಈ ತತ್ವಕವಿ ಟೀಕಿಸಿದ್ದಾನೆ–

***ಹೋಟೆಲ್‌ಯೆಂದು ಓಡ್ಯಾಡಿ ಹೊಕ್ಕೀ***
***ಗಳಿಸಿದ ರೊಕ್ಕ ಅದರೊಳಗಿಕ್ಕೀ***
***ಹೆಂಡರು ಮಕ್ಕಳು ಮಣ್ಣು ಮುಕ್ಕೀ***
***ಹೊಲಮನೆ ಕಳಕೊಂಡಾದಿಯೋ ಪಿಕ್ಕೀ ॥***

ಹೋಟೆಲ್ ಆ ಕಾಲಘಟ್ಟದಲ್ಲಿ ಒಂದು ಹೊಸ ವಿದ್ಯಮಾನ. ಆಹಾರವನ್ನು ಸಾರ್ವಜನಿಕವಾಗಿ ದೊರೆಯುವಂತೆ ಮಾಡಿದ್ದಲ್ಲದೇ ಪಟ್ಟಣಗಳಲ್ಲಿ ತುಸುವಾದರೂ ಜಾತಿವ್ಯವಸ್ಥೆಯನ್ನು ಮೀರಿ, ಊಟಮಾಡುವ ಪ್ರಯತ್ನದ ಭಾಗವಾಗಿಯೂ ಹೋಟೆಲ್ ಪರಿಕಲ್ಪನೆಯಲ್ಲಿತ್ತು. ಔದ್ಯೋಗಿಕ ಕ್ರಾಂತಿಯ ಫಲವಾಗಿಯೂ ನಗರಕ್ಕೆ ಬರುವ ಜನರ ಹಸಿವನ್ನು, ಹಣ ನೀಡಿ ತುಂಬಿಸಿಕೊಳ್ಳುವ ಕೇಂದ್ರವಾಗಿತ್ತು. ಆರಂಭಕಾಲದಲ್ಲಿ ಇದು ಕೇವಲ 'ಪುರುಷರ ವಲಯ'ವೂ ಆಗಿತ್ತು. ಆದ್ದರಿಂದ ವಡಕಿ ತಾತಪ್ಪಯ್ಯ ಹೇಳುವ 'ಗಳಿಸಿದರೊಕ್ಕ ಅದರೊಳಗಿಕ್ಕೀ, ಹೆಂಡರು ಮಕ್ಕಳು ಮಣ್ಣು ಮುಕ್ಕೀ' ಎಂದು ಒತ್ತಿ ಹೇಳಿದ್ದಾರೆ. ಹೊರತಿಂಡಿ–ಉಪಹಾರಗಳಿಗೆ ದಾಸನಾದ ಮನುಷ್ಯ ಆರ್ಥಿಕ ನಷ್ಟವಾದದ್ದನ್ನು ಹೊಲಮನಿ ಕಳೆದುಕೊಂಡದ್ದನ್ನು ಕವಿ ಕಂಡದ್ದಿದೆ.

ಆಧುನಿಕತೆಯ ಪ್ರಭಾವದಿಂದ ಚಹಾ–ಕಾಫಿ–ಹೋಟೆಲ್‌ಗಳು ಬಂದಾದ ಮೇಲೆ, ಶಿಕ್ಷಣವಂತರ, ಸಿರಿವಂತರ ಮತ್ತೊಂದು ಶೋಕೀ ವಸ್ತು ಸಿಗರೇಟು, ಬೀಡಿಗಳು ಬಂದವು. ದೇಸೀ ಪದ್ಧತಿಯಲ್ಲಿ ಗಾಂಜಾ, ಭಂಗಿ, ತಂಬಾಕುಗಳನ್ನು ಸೇವಿಸುತ್ತಿದ್ದವರು, ಬದಲಾದ ಸಾಮಾಜಿಕ ಸನ್ನಿವೇಶದಲ್ಲಿ ಬೀಡಿ ಸಿಗರೇಟುಗಳು ತಂಬಾಕನ್ನು ಹೂರಣವಾಗಿಟ್ಟುಕೊಂಡೇ ಬ್ರಾಂಡ್‌ಗಳಾಗಿ ಅಂಗಡಿಗಳನ್ನು ಸೇರಿಕೊಂಡು ಮಾರಾಟದ ವಸ್ತುಗಳಾದವು. ಆರಂಭದಲ್ಲಿ ಫ್ಯಾಶನ್ನಿನ ಭಾಗವಾಗಿದ್ದ ಸಿಗರೇಟು–ಬೀಡಿಗಳಿಗೆ ಯುವಸಮಾಜ–ರೈತಾಪಿಜನ ದಾಸರಾದರು. ಅದರಲ್ಲಿಯೂ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ತಂಬಾಕು–ಗಾಂಜಾ–ಸೇವನೆ ಅಧಿಕವಾಯಿತು. ಆರ್ಥಿಕ ವ್ಯಯವೂ, ದುಂದುಗಾರಿಕೆಯೂ, ಆರೋಗ್ಯನಾಶವೂ ಆದದ್ದನ್ನು ಕಂಡ ತಾತಪ್ಪಯ್ಯನವರು–

***ಶೀಕ್ರೇಟು ಸೇದಿದರೇಟೂ***
***ಕೆಮ್ಮುದಮ್ಮು ರಕ್ತದ ಪಾಟೂ***
***ನಿನ್ನ ದೇಹ ನಿನಗೆ ಚಾಟೂ***
***ಹಮ್ಮು ಅಹಂಕಾರ ಅಳಿದು ದಾಟು.***

ಎಂದು ಹಾಡುವ ಮುಖೇನ ನಾಗರೀಕತೆಯ ಹುಸಿ ಬಡಿವಾರಗಳನ್ನು ತರಾಟೆಗೆ ತೆಗೆದುಕೊಂಡರು. ಆರೋಗ್ಯದ ಕಾಳಜಿಗಾಗಿ ಪದಕಟ್ಟಿ ಪಸರಿಸಿದರು. ಇದನ್ನ ಕೊಪ್ಪಳ–ರಾಯಚೂರು–ಬಳ್ಳಾರಿ ಪರಿಸರದಲ್ಲಿ ಗುಡಿ–ಗುಂಡಾರಗಳಲ್ಲಿ ಜನರು ಭಜನೆಯ ರೂಪದಲ್ಲಿ ಹಾಡಿಕೊಂಡರು. ಆ ಮೂಲಕ ಜನಜಾಗೃತಿಯೂ ಆಯಿತು. ಇಷ್ಟಾದರೂ ಚಟದ ದಾಸರಾದ ಮಂಗಣ್ಣಗಳಿಗೆ ತಾತಪ್ಪಯ್ಯ ಆಧ್ಯಾತ್ಮ ಬೋಧೆ ಮಾಡುತ್ತಾರೆ, ಬೈಯುತ್ತಾರೆ–

***ಹಿಂಗ್ಯಾಕೆ ಮಾಡ್ತಿದೆಲೆ ಹುಚ್ಚುಲೌಡಿ***
***ಹಿಂಗ್ಯಾಕೆ ಮಾಡ್ತಿದೆಲೆ***
***ನಿನ್ನ ಬುಡ್ಡ ಬುನಾದಿ ಬಲ್ಲೆ***
***ಆ ಗಂಗ್ಯಾಕೆ ಗಂಗ್ಯಾಲೆ***
***ನಿನ್ನ ಸಂಗವೇನೆ ಮಂಗನಸೂಳೆ.***

ಎಂದು ಛಡಿಯೇಟು ಬಾರಿಸುತ್ತಾರೆ. ಆಧುನಿಕತೆಯ ಅಬ್ಬರಕ್ಕೆ ಮಾರುಹೋದ ಮುಗ್ಧರಿಗೆ ಭಿನ್ನದಾರಿ ತೋರಿಸಿ ಸಂಸಾರವನ್ನು ಹದಕ್ಕೆ ತರಬಯಸಿದ ಅನುಭಾವಿ ತಾತಪ್ಪಯ್ಯ ತಳುಕುಬಳುಕಿನ ಮಾರುಕಟ್ಟೆಯನ್ನು ನಿರಾಕರಿಸಿ, ನಮ್ಮ ಬೆಳೆಗಳ ಪರವಾಗಿ ವಾದ ಮಂಡಿಸುತ್ತಾ ಹೀಗೆ ಹಾಡುತ್ತಾರೆ–

***ಗಡಿಬಿಡಿ ಬಂಗಾಲಿ ಸಂತ್ಯಮ್ಮ***
***ತಂಗಿ ನಿಲ್ಲು ಮಾಡಿ ವ್ಯಾಪಾರಮ್ಮ***
***ಕಾಯಿಪಲ್ಲೆ ಬಾಯಿರುಚಿ ನೋಡಿರಮ್ಮ***
***ಬಿಟ್ಟು ಕಡಿಯ ಬಜಾರಕೆ ನಡಿರಮ್ಮ.***

ಇದರ ವ್ಯಾವಹಾರಿಕ ಮತ್ತು ಅನುಭಾವಿಕ ನೆಲೆಗಳನ್ನು ಸಮಾಜ ಅರಿತುಕೊಳ್ಳಬೇಕಾಗಿದೆ.

ಕನ್ನಡ ತತ್ವಪದಗಳ ಸಾರ್ವಭೌಮ, ತತ್ವಮೀಮಾಂಸೆಯನ್ನು ಜೀವನ ಮೀಮಾಂಸೆಯನ್ನಾಗಿ ರೂಪಿಸಿದ ಶಿಶುನಾಳ ಶರೀಫರು ಕೂಡ ಆಧುನಿಕತೆಯ ಅಬ್ಬರವನ್ನು ಎರಡು ಬಗೆಯಲ್ಲಿ ನೋಡಿದ್ದಾರೆ. ಆಧುನಿಕತೆಯ ಅಪಾಯವನ್ನು ಯಂತ್ರಸಂಸ್ಕೃತಿಯ ಅನಾಹುತಗಳನ್ನು ವಿಡಂಬನೆ

ಮಾಡಿ ಹಾಡಿದ್ದಾರೆ. ಮತ್ತು ಆಧುನಿಕ ಯಂತ್ರ ಪ್ರೇರೇಪಿತ ಕೆಲಸಗಳು ದೇಸೀಜನರ ದುಡಿವ ಕೈಗಳಿಗೆ ಮಾರಕವೆಂಬುದನ್ನು ಶರೀಫರು ಹೇಳಿದ್ದಾರೆ.

***ಗಿರಣಿಯ ವಿಸ್ತಾರ ನೋಡಮ್ಮ ಇದಕ್ಕೆ***
***ಪರಾಕು ಮಾಡಮ್ಮಾ***
***ಧರಣಿಪತಿ ಮಹಾರಾಣೀ ದೊರೆಗಳು***
***ಕರ್ನಾಟಕ ರಾಜ್ಯದಿ***
***ಮೆರೆಸಿದ ಮಹಾಚೋದ್ಯ ವಿದ್ಯ ಅರಿಯದಾಯಿತು***
***ನರರಿಗೆಲ್ಲಾ.***

ಎಂಬಲ್ಲಿ ಆಧುನಿಕ ಕಾಲಮಾನದಲ್ಲಿ ನಮ್ಮ ನೆಲಕ್ಕೆ ಧಾಳಿಯಿತ್ತ 'ಗಿರಣಿಯ' ಅಥವಾ ಯಂತ್ರಗಳನ್ನು ಜನ ಸ್ವೀಕರಿಸಿದ ಬಗೆಯನ್ನು ಒತ್ತಿಹೇಳಬೇಕಾಗಿದೆ. ಇದಕ್ಕೆ ಪರಾಕು ಮಾಡಮ್ಮ ಎಂಬಲ್ಲಿ ಸೂಕ್ಷ್ಮವಾದ ವಿಡಂಬನೆಯೂ ಇದೆ. ಬ್ರಿಟಿಷ್ ವಸಾಹತು ಸಂದರ್ಭವು ಅಭಿವೃದ್ಧಿಯ ಮುನ್ನೋಟಗಳನ್ನಿಟ್ಟುಕೊಂಡು ತಯಾರಿಸಿದ ತಂತ್ರಜ್ಞಾನದ ಬಗ್ಗೆ ಶರೀಫರಿಗೆ ಖೇದವಿದೆ, ಆಕ್ರೋಶವಿದೆ. ತತ್ವಪದದಲ್ಲಿ ಅವರು ಹೇಳಿರುವುದು ಹೀಗೆ–

***ಘೋರವಾಗಿ ಮಹಾ ಮುಂಬೈಯೊಳು***
***ಏರಿಗಟ್ಟಿ ಯಂತ್ರದ ಗಿರಣಿಗಳು***
***ಮಾರಿಕಾ ಆಗಿ ಮೈಬಣ್ಣದ ಗುಳ್ಳಿಗಳು***
***ಕುಳ್ಳ ಜನರು ನಷ್ಟಾದರು ಸಖಿಯೇ***

ಎನ್ನುವಲ್ಲಿ ನವನಾಗರಿಕತೆಯ ಅನಾಹುತಗಳ ಮುನ್ನೋಟವನ್ನು ಅಂದೇ ಬರೆದು ಎಚ್ಚರಿಸಿದ್ದಾರೆ. ನಗರೀಕರಣ–ಕಾಂಕ್ರಿಟ್ ಕಾಡು, ತಂತ್ರಜ್ಞಾನ, ಯಂತ್ರ ವ್ಯವಸ್ಥೆಗಳು ಮನುಷ್ಯ ಜೀವನಕ್ಕೆ ಎರವಾಗುತ್ತವೆಂಬುದು ಶರೀಫರ ಬದ್ಧತೆಯ ನಿಲುವು. ಶರೀಫರು ತಮ್ಮ ತತ್ವಪದಗಳಲ್ಲಿ ನೇರವಾಗಿಯೇ ಇಂಗ್ಲೆಂಡಿನ ಮಹಾರಾಣಿಯನ್ನು ತರಾಟೆಗೆ ತೆಗೆದುಕೊಂಡಿದ್ದಾರೆ, ಕಂಪನಿ ಸರಕಾರದಿಂದ ಆಗುವ ಅನಾಹುತಗಳನ್ನು ಎತ್ತಿ ತೋರಿಸಿದ್ದಾರೆ. ಕುಶಾಗ್ರಮತಿ ಇಂಗ್ಲೆಂಡಿನ ಜನರನ್ನೂ ಅಧಿಕಾರಿಗಳನ್ನೂ ಒಂದೆಡೆ ಕೊಂಡಾಡುತ್ತಲೇ ಟೀಕಿಸಿಯೂ ಇದ್ದಾರೆ.

ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿ ನೂರಾರು ತತ್ವಪದಕಾರರು ಬ್ರಿಟಿಷ್ ಸರಕಾರ ಮತ್ತು ನಿಜಾಂ ಪ್ರಭುತ್ವದ ಆಡಳಿತದ ಸಂದರ್ಭದಲ್ಲಿಯೇ ಜೀವಿಸಿದ್ದವರಿದ್ದಾರೆ. ಆದರೆ ಇವರಲ್ಲಿ ಕೆಲವರು ಮಾತ್ರ ಆಧುನಿಕತೆಯ ಪ್ರಭಾವ ವನ್ನು ಯಂತ್ರನಾಗರೀಕ ಜೀವನದ ಹತಾರಗಳನ್ನು ಹೇಳಲು ಸಾಧ್ಯವಾಯಿತು. ಬ್ರಿಟಿಷ್ ಸರ್ಕಾರದ ಸರ್ವಾಧಿಕಾರತನವನ್ನು ಅನುಭವಿಸಿ, ಹೈದ್ರಾಬಾದ್ ನಿಜಾಂರ ತೀವ್ರ ದುರಾಡಳಿತಕ್ಕೆ ಬಳಲಿ ಬೆಂಡಾಗಿ, ರಜಾಕಾರರ ಆಕ್ರಮಣಕ್ಕೆ ನಲುಗಿ, ಅವರು ಮಾಡಿದ ಸ್ತ್ರೀಯರ ಅತ್ಯಾಚಾರಗಳನ್ನು ಕಂಡೂ ಕೂಡ ನೇರವಾಗಿ ಪ್ರತಿಭಟಿಸಿ, ತತ್ಕಾಲೀನ ಘಟನೆಗಳನ್ನು ಕುರಿತು ಅಷ್ಟಾಗಿ ಪ್ರತಿಕ್ರಿಯೆ ನೀಡಿಲ್ಲ. ಬದಲಾಗಿ ನಲುಗಿಹೋದ ಸಮಾಜವನ್ನು, ಜನತೆಯನ್ನು ಆಧ್ಯಾತ್ಮ ಸಾಧನೆಯ ಕಡೆ ಕೊಂಡೊಯ್ದದ್ದೇ ಹೆಚ್ಚು. ಆದರೂ ಕೆಲವೇ ಜನರು ಅಪರೋಕ್ಷವಾಗಿಯಾದರೂ ಪ್ರತಿಭಟಿಸಿದ್ದಾರೆ. ಅಪಾಯಗಳನ್ನು ಎತ್ತಿತೋರುವ ಪ್ರಯತ್ನ ಮಾಡಿದ್ದಾರೆ. ಹೀಗೆ ಮಾಡಿದವರಲ್ಲಿ ಮಹಾಗಾವದ ಮೀರ್‌ಸಾಬ್‌ರು ಒಬ್ಬರು. ಆಧುನಿಕ ಶೈಲಿಯ ಜೀವನವಿಧಾನವನ್ನು ಕಂಡ ಈ ಕವಿ–

***ಹಿಪ್ಪಿಕಟಿಂಗ್ ಕೂದಲಬಿಟ್ಟು***
***ಬೆಲ್‌ಬಾಟಮ್ ಪ್ಯಾಂಟು ತೊಟ್ಟು***
***ದಂದಿ ಆಗಲದಕ ಕಳುವಿಗೆ ಹೊಂಟಿ***
***ಏರಿದ ರೇಲಗಾಡಿ.***

ಎಂಬಲ್ಲಿ ಫ್ಯಾಶನ್ ಯುಗದ ನವಯುವಕರ ಕುರಿತು ಈತನಿಗೆ ಒಳಾಕ್ರೋಶವಿದೆ. ಉಡುಗೆ–ತೊಡುಗೆಗಳು ವಿದೇಶಿಗಳಾದದ್ದರ ಬಗೆಗೆ ಅಸಮಾಧಾನವಿದೆ. ಇದೆಲ್ಲ ಫ್ಯಾಶನ್ ಮಾಡಲು ಹಣವಿಲ್ಲದಾಗ ರೈಲುಗಾಡಿ ಹತ್ತಿ ಕಳ್ಳತನ ಮಾಡುವಿರಿ ಎಂಬ ಈ ಮಾತಿನೊಳಗೆ ಸ್ಥಳೀಯ ಬದುಕನ್ನು ಕಳಚಿಕೊಂಡ ಈ ಕಾಲದ ಯುವಜನತೆಯ ನಿರ್ಧಾರಗಳು ಸರಿಯಲ್ಲವೆಂಬ ನಿಲುವು ಈ ಕವಿಯದು.

'ಶಿಲ್ಲಪ್ಪ' ಎಂಬ ಮತ್ತೊಬ್ಬ ತತ್ವಪದಕಾರ ಆಧುನಿಕತೆಯ ಬೆಡಗನ್ನು ಕಂಡು ವಿಮುಖ ಧೋರಣೆಯನ್ನು ವ್ಯಕ್ತಪಡಿಸಿದ್ದಾನೆ. ಇಡೀ ಭಾರತೀಯ ಸಮಾಜವು ಬ್ರಿಟಿಷರ–ವಿದೇಶಿಯರ ಪ್ರಭಾವ–ಪ್ರೇರಣೆಯಿಂದ ಬದಲಾಗುತ್ತಿರುವುದನ್ನು ಕಂಡು ಮಮ್ಮಲ ಮರುಗಿದ್ದಾನೆ. ಕಾಲದ–ಸಂಸ್ಕೃತಿಯ ಯಜಮಾನಿಕೆಯ ಈ ಪ್ರಭಾವ ತುಂಬ ಸಹಜವಾದದ್ದು. ಆದರೂ ವಿಲಾಸಿ ಜೀವನದ ಸಂಗತಿಗಳನ್ನು ಈ ಕವಿಯು–

***ಬಟ್ಟೆ ತೊಟ್ಟೇನಿ ಚಷ್ಟರ್ ಮಲ್‌ಮಲ್***
***ಕೋಟಕಮೀಸ ಮೈಯೊಳಗ***
***ಸೂಟ್‌ಬೂಟ್ ಪಟ್ಲೋನ ನೆಕ್‌ಟೈ***
***ಬೆಲ್ಟ್ ಕಟ್ಟಿದೇನಿ ಟೊಂಕಿನಾಗ***
**........................................**
**........................................**
***ಹಚ್ಚಿದೆ ನಾನು ಹೀನಾ ಚಮೇಲಿ***
***ಗುಲಾಬದೆಣ್ಣಿ ಕೂದಲಿಗೆ***

ಎಂದು ಬರೆಯುವ ಮೂಲಕ ಆಧುನಿಕ ಕಾಲದ ಪಾಶ್ಚಾತ್ಯ ಅನುಕರಣ ವಿಧಾನದ ನೆಲೆಗಳನ್ನು ಪದಕಟ್ಟಿ ಹಾಡಿದ್ದಾನೆ ಶಿಲ್ಲಪ್ಪ ಕವಿ.

ಹೀಗೆ ಕನ್ನಡ ತತ್ವಪದ ಸಾಹಿತ್ಯದ ಮೂಲಕವೂ ಆಧುನಿಕತೆಗೆ ವಿರೋಧ ಒಡ್ಡಿದ, ವಸಾಹತುಶಾಹಿ ನಿರಾಕರಣೆಯ ಸಂಗತಿಗಳನ್ನು ಗಮನಿಸಬಹುದು. ಸ್ವರೂಪತಃ ತತ್ವಪದಗಳ ಕೇಂದ್ರ ಆಶಯ ಭಕ್ತಿ, ಆಧ್ಯಾತ್ಮ ದರ್ಶನ. ಜಡ–ಜಂಜಡದ ಬದುಕಿಗೆ ಬೆಳಕಿನ ಮಾರ್ಗವನ್ನು ತೋರುವುದು. ಅಲ್ಲದೇ ಸದಾ ಧರ್ಮ–ಜಾತಿ–ವರ್ಗದ ಸಂಕೋಲೆಗಳಲ್ಲಿ ಮುಳುಗಿದ ಜನಸಮುದಾಯಗಳನ್ನು ಮಾನವೀಯ ಅಂತಃಕರಣಕ್ಕೆ ತಂದು ಸಮಸಮಾಜದಲ್ಲಿ ಸಮರಸದಿಂದ ಬದುಕುವಂತೆ ಮಾಡುವುದು. ಬ್ರಿಟಿಷ್ ವಸಾಹತುಶಾಹಿ ಮತ್ತು ಹೈದ್ರಾಬಾದ್ ನಿಜಾಂರ ನಿರಂಕುಶ ಆಡಳಿತಕ್ಕೆ ರೋಸಿಹೋದ ಜನತೆಯನ್ನು ಕಣ್ಣಾರೆ ಕಂಡರೂ ತತ್ವಪದಕಾರರು ಅವುಗಳನ್ನು ಅಧಿಕಾರಸ್ಥರನ್ನು ನೇರವಾಗಿ ಪ್ರತಿಭಟಿಸುವ ಗೋಜಿಗೆ ಹೋಗಿಲ್ಲ. ಆ ಕಾಲದ ಒತ್ತಡಗಳೇನಿತ್ತೋ ಮನಗಾಣಬೇಕಾಗಿದೆ. ಬಹುತೇಕ ಆಧುನಿಕತೆಯನ್ನು ವಿರೋಧಿಸಿದ ಕೆಲವೇ ತತ್ವಪದಗಳಾದರೂ ಅವು ನೇರವಾಗಿ ರಾಜಕೀಯ ಇಚ್ಛಾಶಕ್ತಿಯನ್ನು ಹೊಂದಿ ಬರೆದಂಥವುಗಳಲ್ಲ. ಪ್ರಭುತ್ವವನ್ನೂ ಅವರ ದಬ್ಬಾಳಿಕೆಯನ್ನು ನೇರವಾಗಿ ಎಲ್ಲಿಯೂ ದಾಖಲಿಸುವ ಪ್ರಯತ್ನ ಮಾಡಲಿಲ್ಲ. ಬದಲಾಗಿ ಆಧ್ಯಾತ್ಮಿಕ ಹಾದಿಯಗುಂಟ ಅವರು ನಡೆಯುತ್ತಲೇ ಆಧುನಿಕತೆ ಸ್ಥಿರೀಕರಿಸಿದ ಸಾಮಾಜಿಕ ಆಚರಣಾತ್ಮಕ ಜೀವನ ವಿಧಾನವನ್ನು ವಿರೋಧಿಸಿರುವುದು ಕಂಡುಬರುತ್ತದೆ.

**ಪರಾಮರ್ಶನ ಗ್ರಂಥಗಳು**


- ಭಾಸ್ಕರ ಟಿ.ಎಂ. (ಸಂ.) (1998). *ಮಹಾಗಾಂವ ಮೀರಸಾಬ.* ಕನ್ನಡ ಸಾಹಿತ್ಯ ಅಕಾಡೆಮಿ.
- ಜಾಜಿ ದೇವೇಂದ್ರಪ್ಪ. (2020). *ತಿಳಿದಷ್ಟೇ ಬಯಲು.* ಮರಡಿಲಿಂಗೇಶ್ವರ ಪ್ರಕಾಶನ.
- ಜಾಜಿ ದೇವೇಂದ್ರಪ್ಪ. (ಸಂ.) (2017). *ಹೊಳಲಗುಂದಿ ಸಾಯಿಬಣ್ಣತಾತನವರ ತತ್ವ ಪದಗಳು.* ರಾಷ್ಟ್ರೀಯ ಸಂತ ಕನಕದಾಸ ಅಧ್ಯಯನ ಮತ್ತು ಸಂಶೋಧನ ಕೇಂದ್ರ.
- ಮಲ್ಲಿಕಾರ್ಜುನ ಶಿ ಲಠ್ಠೆ. (1994). ಕಡಕೋಳ ಮಡಿವಾಳಪ್ಪ. ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಪ್ರಭು ಖಾನಾಪುರೆ. (1998). *ಮುಸ್ಲಿಂ ತತ್ವಪದಕಾರರು.* ಕನ್ನಡ ಸಾಹಿತ್ಯ ಅಕಾಡೆಮಿ.
- ರಹಮತ್ ತರೀಕೆರೆ. (ಸಂ.) (2017). *ತತ್ವಪದ ಪ್ರವೇಶಿಕೆ – ಸಂಪುಟ 1,* ರಾಷ್ಟ್ರೀಯ ಸಂತ ಕನಕದಾಸ ಅಧ್ಯಯನ ಮತ್ತು ಸಂಶೋಧನ ಕೇಂದ್ರ.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.101 - 106
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಮಲೆನಾಡಿನ ಕಾಫಿ ತೋಟಗಳಲ್ಲಿ ದುಡಿಯುತ್ತಿರುವ ದಲಿತ ಕಾರ್ಮಿಕರ ಸ್ಥಿತಿಗತಿಗಳು ಮತ್ತು ದಲಿತ ಚಳವಳಿ: ಒಂದು ಅಧ್ಯಯನ

**ಹರೀಶ್ ಕುಮಾರ್**

ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ, ಹಾ.ಮಾ.ನಾ ಸಂಶೋಧನಾ ಕೇಂದ್ರ (ಕನ್ನಡ ವಿಶ್ವವಿದ್ಯಾಲಯ ಸಂಶೋಧನಾ ಮಾನ್ಯತಾ ಕೇಂದ್ರ) ಉಜಿರೆ.

***Abstract:***

*ಕಾಫಿ ಬೆಳೆಯುತ್ತಿರುವ ಅನೇಕ ರಾಷ್ಟ್ರಗಳಲ್ಲಿ ಭಾರತವು ಒಂದಾಗಿದೆ. ಬ್ರೆಜಿಲ್ ಶೇ.26 ಉತ್ಪಾದನೆಯೊಂದಿಗೆ ಪ್ರಪಂಚದಲ್ಲಿ ಮೊದಲನೆ ಸ್ಥಾನವನ್ನು ಹೊಂದಿದೆ. ನಂತರದ ಸ್ಥಾನದಲ್ಲಿ ಶೇ.4ರಷ್ಟು ಉತ್ಪಾದನೆಯನ್ನು ಹೊಂದಿರುವ ಕೊಲಂಬಿಯ ಇದೆ. ಭಾರತವು ಶೇ.2 ರಷ್ಟು ಕಾಫಿ ಉತ್ಪಾದನೆ ಮಾಡುತ್ತಿದೆ. ಭಾರತದಲ್ಲಿ ಕರ್ನಾಟಕ, ತಮಿಳುನಾಡು, ಆಂಧ್ರ ಪ್ರದೇಶ್, ಅಸ್ಸಾಂ, ಕೇರಳ ಇಂತಹ ಕೆಲವೇ ರಾಜ್ಯಗಳು ಕಾಫಿಯನ್ನು ಬೆಳೆಯಲಾಗುತ್ತಿದೆ. ಕರ್ನಾಟಕದಲ್ಲಿ ಚಿಕ್ಕಮಗಳೂರು, ಕೊಡಗು, ಹಾಸನ, ಶಿವಮೊಗ್ಗ ಜಿಲ್ಲೆಗಳಲ್ಲಿ ಕಾಫಿ ಬೆಳೆಯಲಾಗುತ್ತಿದೆ. ಇದು ಮಲೆನಾಡಿನ ಪ್ರಮುಖ ಬೆಳೆಯಾಗಿದೆ. ಪ್ರಸ್ತುತ ಲೇಖನದಲ್ಲಿ ಕಾಫಿದಲ್ಲಿ ಕಾರ್ಯನಿರ್ವಹಿಸುತ್ತಿರುವ ದಲಿತ ಕಾರ್ಮಿಕರ ಸಮಸ್ಯೆಗಳು ಹಾಗೂ ಕಾರ್ಮಿಕರ ಸಮಸ್ಯೆಗಳನ್ನು ನಿವಾರಿಸುವಲ್ಲಿ ದಲಿತ ಚಳವಳಿ ಯಾವ ರೀತಿಯ ಪಾತ್ರವಹಿಸಿದೆ ಎಂಬುದನ್ನು ಅಧ್ಯಯನ ಮಾಡಲಾಗಿದೆ.*

***Keywords:*** *ಮಲೆನಾಡು, ಕಾಫಿ ತೋಟ, ದಲಿತರು, ಕಾರ್ಮಿಕರು, ಮಾಲೀಕರು.*

## ಪೀಠಿಕೆ

ಕಾಫಿ ಬೆಳೆಯನ್ನು ಭಾರತಕ್ಕೆ ಮೊದಲು ಬಾಬಾ ಬುಡನ್ ಎಂಬ ವ್ಯಕ್ತಿಯು ಅರೇಬಿಯಾದಿಂದ ತಂದರು. ಇವರು 7 ಕಾಫಿ ಬೀಜಗಳನ್ನು ತಂದು ಚಿಕ್ಕಮಗಳೂರಿನ ಮುಳ್ಳಯ್ಯನಗಿರಿ ಪಕ್ಕದ ಬೆಟ್ಟದಲ್ಲಿ ನಾಟಿ ಮಾಡಿ ಅಲ್ಲಿಯೇ ನೆಲೆಸಿದನು. ನಂತರ ಅತ್ತಿಗುಂಡಿ ಎಂಬ ಊರಿನಲ್ಲಿ ಬೆಳೆಯಲು ಆರಂಭಿಸಿ ಬೇರೆಡೆಗೆ ಹರಡಿತು. ಕಾಫಿ ಬೆಳೆಯಲ್ಲಿ ರೋಬಸ್ಟಾ ಮತ್ತು ಅರೇಬಿಕಾ ಎಂಬ ಎರಡು ವಿಧಗಳಿವೆ. ಪ್ರಸ್ತುತ ಕರ್ನಾಟಕದಲ್ಲಿ 2,04,278 ಎಕರೆ ಪ್ರದೇಶದಲ್ಲಿ ಕಾಫಿಯನ್ನು ಬೆಳೆಯಲಾಗುತ್ತಿದೆ. ಚಿಕ್ಕಮಗಳೂರಿನಲ್ಲಿ ಒಂದು ಎಕರೆಗೆ ಅರೇಬಿಕಾ ಕಾಫಿಯನ್ನು 789 ಕೆ.ಜಿ ಬೆಳೆದರೆ ಕೊಡಗಿನಲ್ಲಿ 983 ಕೆ.ಜಿ ಹಾಸನದಲ್ಲಿ 1066 ಕೆ.ಜಿ ಬೆಳೆಯುತ್ತಾರೆ. ಅರೇಬಿಕವನ್ನು ಬೆಳೆಯುವುದರಲ್ಲಿ ಚಿಕ್ಕಮಗಳೂರು ಪ್ರಥಮ ಸ್ಥಾನದಲ್ಲಿದ್ದು ರೊಬಸ್ಟಾ ಬೆಳೆಯುವುದರಲ್ಲಿ 2ನೇ ಸ್ಥಾನದಲ್ಲಿದೆ. ಕೊಡಗು ರೊಬಸ್ಟಾ ಬೆಳೆಯುವುದರಲ್ಲಿ ಪ್ರಥಮ ಸ್ಥಾನಲ್ಲಿದೆ.

## ಕಾಫಿ ಬೆಳೆಯುವ ಸ್ವರೂಪ

ಕಾಫಿ ಬೀಜವನ್ನು ಮೊಳಕೆ ಮಾಡಿ ಒಂದು ಅಥವಾ 2 ವರ್ಷಗಳ ನಂತರ ಅರೇಬಿಕಾ ಗಿಡವನ್ನು 6–7 ಅಡಿಗಳಿಗೆ ಒಂದು ಗಿಡದಂತೆ ನೆಡಲಾಗುತ್ತದೆ. ಅದೇ ರೀತಿ ರೊಬಸ್ಟಾವನ್ನು 9–0 ಅಡಿಗಳಿಗೆ

***Please cite this article as:*** ಹರೀಶ್ ಕುಮಾರ್.(2024). ಮಲೆನಾಡಿನ ಕಾಫಿ ತೋಟಗಳಲ್ಲಿ ದುಡಿಯುತ್ತಿರುವ ದಲಿತ ಕಾರ್ಮಿಕರ ಸ್ಥಿತಿಗತಿಗಳು ಮತ್ತು ದಲಿತ ಚಳವಳಿ: ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 2(6), 101–106.

ನೆಡಲಾಗುತ್ತದೆ. 3 ವರ್ಷಗಳ ನಂತರ ಮುಂಗಾರು ಮಳೆಗೆ ಹೂ ಬಿಟ್ಟು ಕಾಯಾಗಿ ಹಣ್ಣಾಗುತ್ತದೆ. ನಂತರ ಅದನ್ನು ಬಿಡಿಸಿ ಯಂತ್ರದಿಂದ ಸಿಪ್ಪೆ ತೆಗೆದು ಒಣಗಿಸಿ ಮಾರಾಟ ಮಾಡುತ್ತಾರೆ.

**ಸಾಹಿತ್ಯ ಅವಲೋಕನ**

ಕಾಫಿ ಬೆಳೆ ಉತ್ಪಾದನೆಯ ಕುರಿತು ಅನೇಕರು ಅಧ್ಯಯನ ಮಾಡಿದ್ದಾರೆ. ಅವರುಗಳಲ್ಲಿ ಅಯ್ಯಂಗಾರ್ (1956), ಸೆರ್‍ರು (1947), ಮುಟುಕು (1966), ವಾಟರಮಣಿ ಮತ್ತು ಅಜಿಜುದ್ದಿನ್ (1973), ರಾಮೇಗೌಡ (1997) ಪ್ರಮುಖರಾಗಿದ್ದಾರೆ. ಇವರುಗಳು ತಮ್ಮ ಅಧ್ಯಯನಗಳಲ್ಲಿ ಉತ್ಪಾದನೆ ಹೆಚ್ಚಿಸುವ ಬಗ್ಗೆ, ಯಂತ್ರಗಳ ಬಳಕೆ ಬಗ್ಗೆ, ರಾಸಾಯನಿಕ ಗೊಬ್ಬರಗಳಿಂದಾಗುವ ಅನಾಹುತಗಳ ಬಗ್ಗೆ ಹೀಗೆ ವಿವಿಧ ಆಯಾಮಗಳಲ್ಲಿ ಅಧ್ಯಯನ ಮಾಡಿದ್ದಾರೆ. ಆದರೆ ಕಾಫಿ ತೋಟದಲ್ಲಿ ಕಾರ್ಯನಿರ್ವಹಿಸುತ್ತಿರವ ಕಾರ್ಮಿಕರ ಬಗ್ಗೆ ಅಷ್ಟಾಗಿ ಅಧ್ಯಯನಗಳು ನಡೆದಿಲ್ಲ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನವು ಪ್ರಮುಖವಾಗುತ್ತದೆ.

**ಸಂಶೋಧನೆಯ ಉದ್ದೇಶಗಳು**

1. ಕಾಫಿ ತೋಟದಲ್ಲಿ ಕಾರ್ಯನಿರ್ವಹಿಸುತ್ತಿರುವ ದಲಿತ ಕೂಲಿ ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳನ್ನು ಅಧ್ಯಯನ ಮಾಡುವುದು.
2. ಕಾರ್ಮಿಕರ ಸಮಸ್ಯೆಗಳ ನಿವಾರಣೆಯಲ್ಲಿ ದಲಿತ ಚಳವಳಿಯ ಪಾತ್ರಗಳೇನು ಎಂಬುದನ್ನು ಅಧ್ಯಯನ ಮಾಡುವುದು.
3. ಕಾರ್ಮಿಕರ ಅಭಿವೃದ್ಧಿಗೆ ಸಲಹೆಗಳನ್ನು ನೀಡುವುದು.

**ಪ್ರಾಕಲ್ಪನೆಗಳು**

1. ದಲಿತ ಕಾರ್ಮಿಕರ ವಿವಿಧ ಬಗೆಯ ಸಾಮಾಜಿಕ ಮತ್ತು ಆರ್ಥಿಕ, ದೈಹಿಕ, ಲೈಂಗಿಕ ಶೋಷಣೆಯಂತಹ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.
2. ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗೆ ಬಡತನ ಮತ್ತು ಅನಕ್ಷರತೆಯೇ ಮೂಲ ಕಾರಣ.
3. ದಲಿತ ಕಾರ್ಮಿಕರ ಜೀವನಮಟ್ಟ ಸುಧಾರಣೆಗೆ ಯೋಜನೆಗಳನ್ನುರೂಪಿಸುವ ಅಗತ್ಯವಿದೆ.

**ಸಂಶೋಧನಾ ವಿಧಾನ**

ಪ್ರಸ್ತುತ ಅಧ್ಯಯನಕ್ಕೆ ಮಲೆನಾಡಿನ ನಾಲ್ಕು ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು ಪ್ರಾಥಮಿಕ ಮತ್ತು ಮಾಧ್ಯಮಿಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಪ್ರಾಥಮಿಕ ಮಾಹಿತಿಯನ್ನು ಸಂದರ್ಶನ ವಿಧಾನ, ಕ್ಷೇತ್ರಕಾರ್ಯ ಹಾಗೂ ಅವಲೋಕನ ವಿಧಾನಗಳ ಮೂಲಕ ಸಂಗ್ರಹಿಸಲಾಗಿದೆ. ಮಾಧ್ಯಮಿಕ ಮಾಹಿತಿಯನ್ನು ಗ್ರಂಥಗಳು, ಲೇಖನಗಳು, ಅಂತರ್ಜಾಲದ ಮೂಲಕ ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

**ಅಧ್ಯಯನ ಫಲಿತಗಳು**

ಮಾಲೀಕರು 25 ರಿಂದ 250 ಎಕರೆವರೆಗೂ ಕಾಫಿ ಬೆಳೆಯನ್ನು ಬೆಳೆಯುತ್ತಿದ್ದಾರೆ. ಇವರಲ್ಲಿ ಶೇ.95ರಷ್ಟು ಮಾಲೀಕರಿಗೆ ಕಾಫಿ ತೋಟ ಪಿತ್ರಾರ್ಜಿತವಾಗಿ ಬಂದಿದೆ. ತೋಟಗಳಲ್ಲಿ ಕೂಲಿ ಮಾಡುವ ದಲಿತ ಕಾರ್ಮಿಕರು ಬಹುಪಾಲು ಭೂ ರಹಿತರಾಗಿದ್ದಾರೆ ಹಾಗೂ ತುಂಡು ಭೂಮಿಗಳನ್ನು ಹೊಂದಿದ್ದಾರೆ. ದಲಿತ ಕಾರ್ಮಿಕರನ್ನು ಕಡಿಮೆ ಕೂಲಿಗೆ ಹೆಚ್ಚಿನ ಅವಧಿ ದುಡಿಸಿಕೊಳ್ಳುತ್ತಾರೆ. ಅರೇಬಿಕಾ ಕಾಫಿ ಬೆಳೆಯು ಪರಿಸರಕ್ಕನುಗುಣವಾಗಿ ಹೊಂದಾಣಿಕೆಯಾಗುವ ಗುಣವನ್ನು ಹೊಂದಿರುವುದ್ದರಿಂದ ಮಲೆನಾಡಿನ ಜಿಲ್ಲೆಗಳಲ್ಲಿ ಹೆಚ್ಚಾಗಿ ಅರೇಬಿಕಾ ಕಾಫಿಯನ್ನು ಹೆಚ್ಚು ಬೆಳೆಯುತ್ತಿದ್ದಾರೆ. ಒಂದು ಎಕರೆ ಪ್ರದೇಶದಲ್ಲಿ ಬೆಳೆ ಬೆಳೆಯಲು ವಾರ್ಷಿಕ 35,000 ದಿಂದ 45,000 ರೂ ವೆಚ್ಚವಾಗುತ್ತದೆ. ಕಾಫಿಯ ಜೊತೆಯಲ್ಲಿ ಏಲಕ್ಕಿ, ಕಿತ್ತಾಳೆ, ಬಾಳೆ, ಮೆಣಸನ್ನು ಬೆಳೆಯುತ್ತಾರೆ. ಮೆಣಸು ಕಡಿಮೆ ವೆಚ್ಚದಲ್ಲಿ ಹೆಚ್ಚು ಆದಾಯ ತಂದು ಕೊಡುವ

ಬೆಳೆಯಾಗಿದೆ. ಆದರೇ ಮಲೆನಾಡಿನಲ್ಲಿ ಕಾಫಿ ಅಥವಾ ಇತರೆ ಯಾವುದೇ ಬೆಳೆಯನ್ನು ಶೇಖರಣೆ ಮಾಡಲು ಉಗ್ರಾಣ ವ್ಯವಸ್ಥೆ ಇಲ್ಲ.

ಕಾಫಿ ತೋಟದಲ್ಲಿ ಹೆಚ್ಚಾಗಿ ದಲಿತ ಮಹಿಳೆಯರು ದುಡಿಯುತ್ತಿದ್ದಾರೆ ಬಾಲ ಕಾರ್ಮಿಕರು ಇದ್ದು ವಿದ್ಯಾವಂತ ಕಾರ್ಮಿಕರು ಸಹ ಇದ್ದಾರೆ ಕಾಫಿ ತೋಟದಲ್ಲಿ ದುಡಿಯುವ ಕಾರ್ಮಿಕರಿಗೆ ಔಷಧಿ ಸಿಂಪಡಿಸಲು ಮುಂಜಾಗ್ರತೆ ಸಾಮಗ್ರಿಗಳಿಲ್ಲ ಹಾಗೂ ಯಂತ್ರಗಳ ಬಳಕೆ ಕಡಿಮೆ ಇದೆ. ಕೆಲಸದ ಅವಧಿಯಲ್ಲಿ ಗಾಯಗಳಾದರೆ ಅಥವಾ ಮರಣ ಹೊಂದಿದರೆ ಪರಿಹಾರ ನೀಡುವುದು ಬೆರಳೆಣಿಕೆಯಷ್ಟು ಇಂತಹ ಸಂದರ್ಭ ಎದುರಾಗಬಹುದು ಎಂಬ ಉದ್ದೇಶದಿಂದ ಸರ್ಕಾರ ಕಾರ್ಮಿಕರಿಗೆ ಜೀವ ವಿಮೆ ಸೌಲಭ್ಯ ಕಲ್ಪಿಸಿದೆ. ಆದರೆ ಮಾಲೀಕರ ನಿರಾಸಕ್ತಿ ಮತ್ತು ಕಾರ್ಮಿಕ ತಿಳಿವಳಿಕೆ ಕೊರತೆಯಿಂದ ಜೀವೆ ಮಾಡಿಸುವವರ ಪ್ರಮಾಣ ತುಂಬಾ ಕಡಿಮೆಯಿದೆ.

ಕಾಫಿ ತೋಟದಲ್ಲಿ ದುಡಿಯುವ ಕಾರ್ಮಿಕರಿಗೆ ಸ್ವಂತ ಮನೆಯಿರುವುದಿಲ್ಲ. ಬದಲಿಗೆ ಮಾಲೀಕರ ತೋಟಗಳಲ್ಲಿನ ಲೈನ್‌ಮನೆಗಳಲ್ಲಿ ವಾಸ ಮಾಡುತ್ತಾರೆ. ಈ ಮನೆಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ಹೆಚ್ಚಿದ್ದು, ಸ್ವಚ್ಚತೆ ಎಂಬುದು ಮರೀಚಿಕೆಯಾಗಿದೆ. ಲೈನ್ ಮನೆಗಳಲ್ಲಿಲ ವಾಸಿಸುವ ಕಾರ್ಮಿಕರ ಮೇಲೆ ವಸತಿ ದೈಹಿಕ, ಮಾನಸಿಕ, ಲೈಂಗಿಕ, ಶೋಷಣೆಗಳು ಹೆಚ್ಚಾಗಿ ಕಂಡು ಬರುತ್ತವೆ.

ಲೈಂಗಿಕ ಶೋಷಣೆ ಸಾಮಾನ್ಯವಾಗಿ ಮಾಲೀಕರಿಂದಾಗುವುದು ಕಡಿಮೆ ಆದರೆ ತೋಟದ ಮ್ಯಾನೇಜರ್ ಮತ್ತು ರೈಟರ್‌ಗಳಿಂದ ಶೋಷಣೆಯಾಗುತ್ತದೆ. ಇಂತಹ ಶೋಷಣೆಗಳ ವಿರುದ್ಧ ದಲಿತ ಸಂಘಟನೆಗಳು ವಿರೋಧ ವ್ಯಕ್ತಪಡಿಸಿ ಹೋರಾಡಿವೆ. ದಲಿತರಲ್ಲಿ ಹೆಚ್ಚಿನ ಪ್ರಮಾಣದ ಅನಕ್ಷರಸ್ಥರಿದ್ದು, ರಾಜಕೀಯವಾಗಿ ಇಂದಿಗೂ ಅಪ್ರಬುದ್ಧರಾಗಿದ್ದಾರೆ.

ಮಲೆನಾಡಿನಲ್ಲಿ 5,70,000 ಕ್ಕೂ ಹೆಚ್ಚು ಕಾರ್ಮಿಕರು ಕಾಫಿ ತೋಟಗಳಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಇದರಲ್ಲಿ 60% ಮಹಿಳಾ ಕಾರ್ಮಿಕರಿದ್ದಾರೆ. ಇವರು ವರ್ಷಕ್ಕೆ 29,500 ಮೆಟ್ರಿಕ್ ಟನ್ ಕಾಫಿ ಉತ್ಪಾದಿಸುತ್ತಿದ್ದಾರೆ. ಈ ಕಾರ್ಮಿಕರ ಪೈಕಿ 80% ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ಜಮೀನು ಇಲ್ಲದ ಭೂ ರಹಿತರಾಗಿದ್ದಾರೆ. ಇವರೇ ಮಲೆನಾಡಿನ ಶ್ರಮಜೀವಿಗಳು, ಸ್ಥಳೀಯ ದಲಿತರ ಜೊತೆ ಉತ್ತರ ಕರ್ನಾಟಕ, ಉತ್ತರಭಾರತ, ಅಸ್ಸಾಂ, ಬಾಂಗ್ಲಾದೇಶ ತಮಿಳುನಾಡು, ಶ್ರೀಲಂಕದ ಬಹುದೊಡ್ಡ ಸಂಖ್ಯೆಯ ವಲಸೆ ಕಾರ್ಮಿಕರು ಇಲ್ಲಿದ್ದಾರೆ. ಶೇಕಡಾ 80 ರಷ್ಟು ದಲಿತರಿಗೆ ಯಾವುದೇ ಕಾನೂನು ರಕ್ಷಣೆ ಇಲ್ಲ. ಅಂದರೆ ಪ್ಲಾಂಟೆಷನ್ ಕಾರ್ಮಿಕರ ಕಾಯ್ದೆ–1995 ಹಾಗೂ ಕರ್ನಾಟಕ ನಿಯಮಗಳು 1956, ಕನಿಷ್ಠ ವೇತನ ಕಾಯ್ದೆ–1948 ವೇತನ ಪಾವತಿಕಾಯ್ದೆ 1936, ಅಂತರ ರಾಜ್ಯ ವಲಸೆ ಕಾರ್ಮಿಕ (ನಿಯಂತ್ರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ–1997 ಹಾಗೂ ಕರ್ನಾಟಕ ನಿಯಮಗಳು–1998 ಸೇರಿ ಬೋನಸ್, ಭವಿಷ್ಯನಿಧಿ, ಆರೋಗ್ಯ ವಿಮೆ ಮುಂತಾದ ಎಲ್ಲಾ ಕಾರ್ಮಿಕ ಕಾಯ್ದೆಗಳು ಮಲೆನಾಡಿನಲ್ಲಿ ಜಾರಿ ಇರುವುದಿಲ್ಲ. ಶೇಕಡಾ 70 ರಷ್ಟು ಕಾರ್ಮಿಕರು ಗುತ್ತಿಗೆ ಆಧಾರದ ಮೇಲೆ ಮಾಡುತ್ತಿದ್ದಾರೆ. ಕಾಫಿ ತೋಟದ ಅಪಾಯಕಾರಿ ಮರಗೆಲಸ, ಕಾಫಿಕೊಯ್ಲು, ರಾಸಾಯನಿಕಗಳ ಬಳಕೆ, ಕೊರೆಯುವ ಚಳಿ, ರಕ್ತ ಹೀರುವ ಜಿಗಣೆ ಬೆನ್ನ ಹಿಂದೆಯೆ ಹೆಡೆ ಬಿಚ್ಚಿ ನಿಂತಂತೆ ನಿಲ್ಲುವ ಪ್ಲಾಂಟರ್ ಹೀಗೆ ಹಲವಾರು ಸಮಸ್ಯೆಗಳ ನಡುವೆಯೂ ವಿಶ್ರಾಂತಿಯಿಲ್ಲದೆ ದುಡಿಯುತ್ತಾರೆ.

**ತೋಟದ ಕಾರ್ಮಿಕರು ಮತ್ತು ದಲಿತ ಚಳವಳಿ**

'ದಲಿತ' ಪದವು ಪರಿಶಿಷ್ಟ ಜಾತಿಗಳ ಶೋಷಣೆಯ ಭೂತಕಾಲವನ್ನು ಉಲ್ಲೇಖಿಸಲು ಸಮರ್ಥನೀಯ ಸಾಮರ್ಥ್ಯವನ್ನು ಪಡೆದುಕೊಂಡಿದೆ. ಈ ಪದವು ಆದಿವಾಸಿಗಳು, ಅಲ್ಪಸಂಖ್ಯಾತರು ಮತ್ತು

ಮಹಿಳೆಯರು ಸೇರಿದಂತೆ ಸಮಾಜದ ಎಲ್ಲಾ ತುಳಿತಕ್ಕೊಳಗಾದ ಮತ್ತು ಶೋಷಿತ ವರ್ಗಗಳನ್ನು ತನ್ನೊಳಗೆ ಒಳಗೊಳ್ಳುವ ಆಂತರಿಕ ಸಾಮರ್ಥ್ಯವನ್ನು ಹೊಂದಿದೆ. ದಲಿತ ವರ್ಗವು ಉದ್ದೇಶಪೂರ್ವಕವಾಗಿ ತಮ್ಮ ಮೇಲಿನ ಸಾಮಾಜಿಕ ಗುಂಪುಗಳಿಂದ ಶೋಷಣೆಗೆ ಒಳಗಾಗುವವರನ್ನು ಪ್ರತಿನಿಧಿಸುವುದರಿಂದ, ಇದು ಘನತೆಯ ನಿರಾಕರಣೆ ಮತ್ತು ಅಸ್ಪೃಶ್ಯತೆ ಆಚರಣೆಯ ವಿರುದ್ಧದ ಪ್ರತಿಭಟನೆಯ ಅಂಶವನ್ನೂ ಒಳಗೊಂಡಿದೆ.

ಪ್ರಕರಣವೊಂದರಲ್ಲಿ ಮೂಡಿಗೆರೆ ತಾಲೂಕಿನ ತೋಟವೊಂದರ ಲೈನ್‌ಮನೆಯಲ್ಲಿ 2 ಕುಟುಂಬಗಳು ಕೂಲಿಮಾಡಿಕೊಂಡು ಜೀವನ ನಡೆಸುತ್ತಿರುತ್ತಾರೆ. ತಮ್ಮ ಮಕ್ಕಳು ತಮ್ಮಂತಾಗದೆ ಅಕ್ಷರ ಕಲಿತು ಬದುಕು ಕಟ್ಟಿಕೊಳ್ಳಲಿ ಎಂಬ ಉದ್ದೇಶದಿಂದ ಶಾಲೆಗೆ ಕಳುಹಿಸುತ್ತಿದ್ದರು. ಪ್ರಾಥಮಿಕ ಶಿಕ್ಷಣದ ನಂತರ ಪ್ರೌಢ ಶಾಲೆಗೆ ದಾಖಲಾಗಬೇಕು ಎನ್ನುವಷ್ಟರಲ್ಲಿ ತೋಟದ ಮಾಲೀಕ ಮಕ್ಕಳ ಶಾಲಾ ದಾಖಲಾತಿಯನ್ನು ಪಡೆದುಕೊಂಡು ತನ್ನ ತೋಟದಲ್ಲಿ ದುಡಿಯುವಂತೆ ತಾಕೀತು ಮಾಡುತ್ತಾನೆ.

ಮಾಲೀಕ ಮೂಲತಃ ಹೆಸ್ಗಲ್ ಗ್ರಾಮದ ಹಳ್ಳದಗಂಡಿಯವರು. ಇವರು ಐವತ್ತು ಎಕರೆ ಕಾಫಿ ತೋಟವನ್ನು ಹೊಂದಿದ್ದು, ಈತನ ತೋಟದಲ್ಲಿ ಮಂಗಳೂರು ಮೂಲದ ಪರಿಶಿಷ್ಟ ಸಮುದಾಯಗಳು ಕೂಲಿ ಕೆಲಸಮಾಡಿಕೊಂಡಿವೆ. ಈ ಸಮುದಾಯದವರು ಲೈನ್‌ಮನೆಗಳಲ್ಲಿ ವಾಸಮಾಡುತ್ತಿದ್ದು, ಕನಿಷ್ಠ ಮೂಲಭೂತ ಸೌಲಭ್ಯಗಳು ಕೂಡ ಇರಲಿಲ್ಲ. ಈ ಕಾರ್ಮಿಕರ ಮಕ್ಕಳು ಪ್ರಾಥಮಿಕ ಶಿಕ್ಷಣದ ನಂತರ ಪ್ರೌಢಶಾಲೆಗೆ ಸೇರಿಸುವ ಹೊತ್ತಿಗೆ ಮಾಲೀಕ ಕಿರುಕುಳ ನೀಡಿ ಶಾಲೆಗೆ ಕಳುಹಿಸದಂತೆ ತಾಕೀತು ಮಾಡುತ್ತಾನೆ. ಇದನ್ನು ವಿರೋಧಿಸಿದರೆ ಅಂತಹ ಕಾರ್ಮಿಕ ಕುಟುಂಬಕ್ಕೆ ಬಾಕಿ ಕೂಲಿ ಅಥವಾ ಆಹಾರ ಪದಾರ್ಥಗಳನ್ನು ನೀಡದೆ ಏಕಾಏಕಿ ಹೊರಗಾಕುತ್ತಾನೆ. ದಿಕ್ಕು ತೋಚದ ಕಾರ್ಮಿಕ ಕುಟುಂಬ ಮೂಡಿಗೆರೆ ಪಟ್ಟಣದ ಪ್ರವಾಸಿ ಮಂದಿರದ ಪಕ್ಕದ ಮೂಲೆಯೊಂದರಲ್ಲಿ ಅಳುತ್ತಾ ಮಲಗಿರುವುದನ್ನು ಗಮನಿಸಿದ ದಲಿತ ಸಂಘರ್ಷ ಸಮಿತಿ ಸಂಯೋಜಕ ಕೃಷ್ಣಪ್ಪನವರು ಅವರನ್ನು ವಿಚಾರಿಸಿ ಅದೇ ದಿನ ದಲಿತ ಸಂಘಟನೆಗೆ ತಿಳಿಸಿ ಹೋರಾಟದ ಮೂಲಕ ಮಾಲೀಕನ ವಿರುದ್ಧ ಪೋಲಿಸ್ ಠಾಣೆಯಲ್ಲಿ ದೂರು ದಾಖಲಿಸುತ್ತಾರೆ. ನಂತರ ಪೋಲಿಸ್ ಠಾಣೆಗೆ ಬಂದ ಮಾಲೀಕ ತನ್ನ ತೋಟದಲ್ಲಿ ಕೆಲಸ ಮಾಡುವವರು ಶಾಲೆಗೆ ಹೋಗಬಾರದು ಎಂದು ಕೂಗಾಡುತ್ತಾನೆ. ಇದರ ನಂತರ ದಲಿತ ಸಂಘಟನೆಯವರು ಕಾರ್ಮಿಕರ ಕಾನೂನುಗಳು, ಮಕ್ಕಳ ಹಕ್ಕುಗಳು ಹಾಗೂ ಶಿಕ್ಷಣ ಮಹತ್ವ ಹಾಗೂ ಪ್ರಕರಣ ದಾಖಲಾದರೆ ಎದುರಾಗಬಹುದಾದ ಸಮಸ್ಯೆಗಳ ಬಗ್ಗೆ ತಿಳಿಸಿದಾಗ ಕಾನೂನಿಗೆ ತಲೆಬಾಗಿದ ಮಾಲೀಕ ಕೂಲಿಯ ಬಾಕಿ ಹಣ 24 ಸಾವಿರ ರೂಗಳನ್ನು ನೀಡುತ್ತಾರೆ. ಹಾಗೂ ಮಕ್ಕಳಿಗೆ ಸಮವಸ್ತ್ರ , ಪುಸ್ತಕಗಳು ಹಾಗೂ ಬ್ಯಾಗ್‌ಗಳನ್ನು ಕೊಡಿಸಿ ಶಾಲೆಯ ಹತ್ತಿರದಲ್ಲಿದ್ದ ಮತ್ತೊಂದು ಎಸ್ಟೇಟ್‌ಗೆ ಕಳಹಿಸಿಕೊಡುತ್ತಾರೆ. ನಂತರ ಮಾಲೀಕರಾದ ಮಂಚೇಗೌಡರು ದಲಿತ ಸಂಘಟನೆಯ ಒಡನಾಟವಿಟ್ಟುಕೊಂಡು ತನ್ನ ತೋಟದಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಯಾವುದೇ ತೊಂದರೆ ನೀಡದರೆ ಶಾಲೆಗೆ ಹೋಗುವ ಮಕ್ಕಳಿಗೆ ಸಹಾಯ ಮಾಡುತ್ತಿದ್ದಾರೆ.

ಮತ್ತೊಂದು ಪ್ರಕರಣದಲ್ಲಿ 2011 ಚಿಕ್ಕಮಗಳೂರು ಜಿಲ್ಲೆಯ ಕೈಮರದ ಎಸ್ಟೇಟ್‌ವೊಂದರ ಲೈನ್‌ಮನೆಯಲ್ಲಿ ಸುಮಾರು 40 ದಲಿತ ಕುಟುಂಬಗಳು ಕೂಲಿ ಮಾಡಿಕೊಂಡು ವಾಸ ಮಾಡುತ್ತಿದ್ದಾರೆ. ಈ ಲೈನ್‌ಮನೆಗಳು ಮೂಲಭೂತ ಸೌಲಭ್ಯಗಳಿರಲಿಲ್ಲ ಕನಿಷ್ಟ ಶೌಚಾಯಲಗಳನ್ನು ಕೂಡ ನಿರ್ಮಿಸಿರಲಿಲ್ಲ. ತೋಟದಲ್ಲಿ ಮಲ ವಿಸರ್ಜನೆ ಮಾಡುವಂತೆಯೂ ಇರಲಿಲ್ಲ. ಕಾರ್ಮಿಕರು ಪಟ್ಟಣ ಪ್ರದೇಶಗಳಿಗೆ ಹೋಗದಂತೆಯೂ ನಿರ್ಬಂಧ ಹೇರಲಾಗಿತ್ತು. ತೋಟದ ಹತ್ತಿರದಲ್ಲಿದ್ದ

ಅಂಗಡಿಯಲ್ಲಿಯೇ ಅಗತ್ಯ ವಸ್ತುಗಳನ್ನು ಖರೀದಿಸಬೇಕಿತ್ತು. ಕಾರ್ಮಿಕರು ಹೊರಗಿನವ ರೊಂದಿಗೆ ಸಂಪರ್ಕವಿಟ್ಟುಕೊಳ್ಳುವಂತಿರಲಿಲ್ಲ. ಹೊರಗಿನವರು ಕೂಡ ಈ ಲೈನ್‌ಮನೆಗಳಿಗೆ ಬಾರದಂತೆ ನಿರ್ಬಂಧಿಸಲಾಗಿತ್ತು. ಕನಿಷ್ಠ ಕೂಲಿಯನ್ನು ನೀಡದೆ ಶೋಷಣೆ ಮಾಡಲಾಗುತಿತ್ತು. ದಲಿತ ಸಂಘರ್ಷ ಸಮಿತಿ ಗಮನಕ್ಕೆ ಬಂದ ನಂತರ ಇವರ ವಿರುದ್ಧ ಹೋರಾಟ ರೂಪಿಸಿ ಮಾಲೀಕನ ವಿರುದ್ಧ ಕ್ರಮಕ್ಕೆ ಆಗ್ರಹಿಸಿದೆ.

ಇದಲ್ಲದೆ ಚಿಕ್ಕಮಗಳೂರಿನ 'ಬೆಟ್ಟದ ಮರಳಿ' ಎಂಬ ಗ್ರಾಮದ ತೋಟವೊಂದರಲ್ಲಿ ವಾಸವಿದ್ದ ಹರಪ್ಪನಹಳ್ಳಿ ದಲಿತ ಕೂಲಿ ಕಾರ್ಮಿಕ ಕುಟುಂಬವೊಂದರ 14 ವರ್ಷದ ಬಾಲಕಿ ಕೂಲಿ ಮಾಡುತ್ತಿದ್ದ ಸಂದರ್ಭದಲ್ಲಿ ಬಿದ್ದು, ಆಸ್ಪತ್ರೆಯಲ್ಲಿ ಮರಣ ಹೊಂದಿತು. ಈ ಪ್ರಕರಣವನ್ನು ಮುಚ್ಚಿ ಹಾಕಲು ಪ್ರಯತ್ನಿಸಿದ ಮಾಲೀಕನ ವಿರುದ್ಧ ದಲಿತ ಸಂಘರ್ಷ ಸಮಿತಿ ಹಾಗೂ ಜಾತಿ ವಿನಾಶ ವೇದಿಕೆ ಹೋರಾಟ ರೂಪಿಸಿ ತನಿಖೆಗೆ ಒತ್ತಾಯಿಸಿತು.

ಹೀಗೆ ಹಲವಾರು ಸಂದರ್ಭಗಳಲ್ಲಿ ದಲಿತ ಸಂಘರ್ಷ ಸಮಿತಿ ಮತ್ತು ಇತರೆ ಪ್ರಗತಿಪರ ಸಂಘಟನೆಗಳು ಕಾರ್ಮಿಕರಿಗೆ ಸಮಸ್ಯೆಗಳಾದಾಗ ಹೋರಾಟವನ್ನು ರೂಪಿಸಿ ನ್ಯಾಯ ಕೊಡಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ.

**ದಲಿತ ಕಾರ್ಮಿಕರ ಅಭಿವೃದ್ಧಿಗೆ ಸಲಹೆಗಳು**

1. ಕಾಫಿ ತೋಟದಲ್ಲಿ ಕೆಲಸ ಮಾಡುವ ದಲಿತರು ಹಾಗೂ ಇತರೆ ಸಮುದಾಯದ ಕಾರ್ಮಿಕರ ಹಕ್ಕು ರಕ್ಷಣೆಗಾಗಿ ಪ್ರತ್ಯೇಕ ಕಾರ್ಯಪಡೆ ರಚಿಸಬೇಕು.
2. ಮಲೆನಾಡಿನ ಕಾಫಿ ತೋಟಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರ ಸಮೀಕ್ಷೆ ನಡೆಸಿ ಅವರ ಅಭಿವೃದ್ಧಿಗೆ ಯೋಜನೆಗಳನ್ನು ರೂಪಿಸಬೇಕು.
3. ಕೂಲಿಯನ್ನು ಹೆಚ್ಚಿಸಬೇಕು ಹಾಗೂ ಸಮಾನ ವೇತನ ನೀಡಬೇಕು ಹಾಗೂ ಪ್ಲಾಂಟಿಷನ್ ಕಾರ್ಮಿಕ ಕಾಯ್ದೆಯನ್ನು ಸಂಪೂರ್ಣವಾಗಿ ಜಾರಿ ಮಾಡಬೇಕು.
4. ತೋಟಗಳಲ್ಲಿ ನಡೆದಿರುವ ಕೊಲೆ, ಅತ್ಯಾಚಾರ ಹಾಗೂ ಅಪಘಾತ ಪ್ರಕರಣಗಳ ತನಿಖೆಗೆ ವಿಶೇಷ ತಂಡ ರಚಿಸಬೇಕು.
5. ತೋಟ ಕಾರ್ಮಿಕರಿಗಾಗಿ ಸೂಕ್ತ ವಸತಿ ಸೌಲಭ್ಯ ಕಲ್ಪಿಸಬೇಕು, ಹಾಗೂ ಕಾರ್ಮಿಕರು ಕೇಂದ್ರೀಕೃತವಾಗಿರುವ ಪ್ರದೇಶಗಳಲ್ಲಿ ಶಾಲೆ ಹಾಗೂ ಆಸ್ಪತ್ರೆಗಳನ್ನು ಕಟ್ಟಿಸಬೇಕು.
6. ಕಾರ್ಮಿಕರ ಸುರಕ್ಷತೆಯ ಬಗ್ಗೆ ಕ್ರಮಕೈಗೊಳ್ಳಬೇಕು.

**ಉಪಸಂಹಾರ**

ಒಟ್ಟಾರೆಯಾಗಿ ಮಲೆನಾಡಿನ ವಿವಿಧ ಪ್ರದೇಶಗಳಲ್ಲಿ ತೋಟದ ಕಾರ್ಮಿಕರಾಗಿ ಕಾರ್ಯ ನಿರ್ವಹಿಸುತ್ತಿರುವ ದಲಿತರು ಇಂದಿಗೂ ಶೋಷಣೆಗೆ ಒಳಗಾಗುತ್ತಿರುವುದು ನೋವಿನ ಸಂಗತಿ. ಇಂದಿಗೂ ಕಾರ್ಮಿಕರನ್ನು ಬಡತನ, ಅನಕ್ಷರತೆ, ಅಪೌಷ್ಟಿಕತೆ, ಅನಾರೋಗ್ಯಗಳು ಕಾಡುತ್ತಿವೆ. ಆದರೆ ಇತ್ತೀಚಿನ ದಿನಗಳಲ್ಲಿ ತಮ್ಮ ಮಕ್ಕಳು ತಮ್ಮಂತಾಗಬಾರದು ಎಂಬ ಉದ್ದೇಶದಿಂದ ಶಾಲೆಗೆ ಕಳುಹಿಸುತ್ತಿದ್ದಾರೆ. ಇದರ ಪರಿಣಾಮ ದಲಿತರಲ್ಲಿ ಶೈಕ್ಷಣಿಕ ಅರಿವು ಹೆಚ್ಚುತ್ತಿದೆ. ಇದರಿಂದಾಗಿ ತೋಟದ ಮಾಲೀಕರಿಗೆ ಕಾರ್ಮಿಕರ ಕೊರತೆ ಎದುರಾಗುತ್ತಿದೆ.

**ಪರಾಮರ್ಶನ ಗ್ರಂಥಗಳು**


- ಬೆಳವಾಡಿ ಮಂಜುನಾಥ. (2007). ಹೊಯ್ಸಳಸಿರಿ. ನಾಗೇಂದ್ರ ಪ್ರೆಸ್.
- ಚಿಕ್ಕಮಗಳೂರು ಜಿಲ್ಲಾ ದರ್ಶನ, ಪಾರ್ಥಸಾರಥಿ ಮತ್ತು ರಾಮನಾಯಕ್,
- ಕರ್ನಾಟಕ ಭೂ ಸುಧಾರಣೆ ಅಧಿ ನಿಯಮ–1956 ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 2014, ಚೈತನ್ಯ ಪ್ರಕಾಶನ.

- ಕಾಫಿ ತೋಟ ಕಾರ್ಮಿಕರ ಸಮಾವೇಶದ ಕರಪತ್ರ ಮತ್ತು ಮಾಹಿತಿ (2023, ಸೆಪ್ಟೆಂಬರ್ 25)
- ಕಾಫಿ ತೋಟದ ಕೈಪಿಡಿ, ಕೇಂದ್ರಿಯ ನಿರ್ದೇಶನಾಲಯ ಘಟಕ.
- ಪುಟ್ಟಯ್ಯ ಬಿ ಎಂ. (2008). *ದಲಿತರು ಮತ್ತು ಭೂಮಿಯ ಪ್ರಶ್ನೆ*. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.
- ಸುಧಾ ಮಾಸ ಪತ್ರಿಕೆಯ ಸಂಕಲನ (2010)
- ಶಿವಸುಂದರ. (2008). ರೈತರ ಆತ್ಮಹತ್ಯೆ–ಜಾಗತೀಕರಣದ ಉರುಳಿಗೆ ರೈತರ ಕೊರಳು, ಲಂಕೇಶ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.107 - 110
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ರಾಣಿ ತಿಮ್ಮಿಯ ಸಿಂಹಾಸನ

**ಡಾ. ತ್ರಿವೇಣಿ**

ಸಹ ಪ್ರಾಧ್ಯಾಪಕರು, ಶ್ರೀ ಡಿ.ದೇವರಾಜ ಅರಸು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುಣಸೂರು.

***Abstract:***

*ಸ್ತ್ರೀವಾದಿ ಆಲೋಚನಾಕ್ರಮವು ಕನ್ನಡದ ಸಂದರ್ಭದಲ್ಲಿ ಚಿಗುರೊಡೆಯುತ್ತಿದ್ದ ಕಾಲಘಟ್ಟದಲ್ಲಿ, ತಮ್ಮ ಬದುಕು ಮತ್ತು ಬರಹಗಳ ಮೂಲಕ ಸ್ತ್ರೀವಾದಕ್ಕೆ ಬುನಾದಿಯನ್ನು ಹಾಕಿದವರು ಡಾ. ವಿಜಯಾ ದಬ್ಬೆ ಅವರು. ಲಿಂಗ ಅಸಮಾನತೆಯ ವಿರುದ್ಧ ದಿಟ್ಟವಾಗಿ ದನಿ ಎತ್ತಿದ ಇವರು ಲಿಂಗಸಂಬಂಧೀ ತರತಮಗಳಿಂದ ಮಹಿಳೆಯು ಹೊರಬರುವ ದಾರಿಯನ್ನು ಕುರಿತಾಗಿ ಖಚಿತ ನಿಲುವು ಹಾಗೂ ವೈಜ್ಞಾನಿಕ ದೃಷ್ಟಿಕೋನವನ್ನು ಒದಗಿಸಿದರು. ಡಾ.ವಿಜಯಾ ದಬ್ಬೆಯವರು ಕಾವ್ಯ, ಸಂಶೋಧನೆ, ವಿಮರ್ಶೆ, ಅಂಕಣ ಬರಹ, ಪ್ರವಾಸ ಕಥನ ಮುಂತಾದ ಪ್ರಕಾರಗಳಲ್ಲಿ ಇಪ್ಪತ್ತಕ್ಕಿಂತಲೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇವರ ಅತ್ಯಂತ ಪ್ರಮುಖವಾದ ಕವಿತೆಗಳಲ್ಲಿ "ರಾಣಿ ತಿಮ್ಮಿಯ ಸಿಂಹಾಸನ"ವೂ ಒಂದಾಗಿದೆ.*

***Keywords:*** *ಸ್ತ್ರೀವಾದಿ, ವಿಜಯಾ ದಬ್ಬೆ, ರಾಣಿ ತಿಮ್ಮಿಯ ಸಿಂಹಾಸನ.*

## ಪೀಠಿಕೆ

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದು, ಅಧ್ಯಾಪನದೊಟ್ಟಿಗೆ ಸಮಾನಮನಸ್ಕರೊಂದಿಗೆ ಸೇರಿ ಸಮತಾ ವೇದಿಕೆ, ಸಮತಾ ಅಧ್ಯಯನ ಕೇಂದ್ರಗಳನ್ನು ಕಟ್ಟುವ ಮೂಲಕ ಅಕಡೆಮಿಕ್ ವಲಯದಲ್ಲಿ ಸ್ತ್ರೀವಾದಿ ಚಿಂತನಾಕ್ರಮಕ್ಕೆ ಚಾಲನೆ ನೀಡಿದವರು. "ಎಪ್ಪತ್ತರ ದಶಕದಲ್ಲಿ ಕನ್ನಡ–ಕರ್ನಾಟಕಗಳಲ್ಲಿ ಮಹಿಳಾವಾದವನ್ನು ರೂಪಿಸಿದ, ಹರಡಿದ ಸ್ಮರಣೀಯ ಹೆಸರು ವಿಜಯಾದಬ್ಬೆ. ಅವರು ಮಾತಾಡಿದರು,ಬರೆದರು, ಹೋರಾಡಿದರು, ಗೆದ್ದರು!"

ಕಾವ್ಯ, ಸಂಶೋಧನೆ, ವಿಮರ್ಶೆ, ಅಂಕಣ ಬರಹ, ಪ್ರವಾಸ ಕಥನ ಮುಂತಾದ ಪ್ರಕಾರಗಳಲ್ಲಿ ಇಪ್ಪತ್ತಕ್ಕಿಂತಲೂ ಹೆಚ್ಚು ಕೃತಿಗಳನ್ನು ಡಾ.ವಿಜಯಾ ದಬ್ಬೆಯವರು ರಚಿಸಿದ್ದಾರೆ. ಇವರ ಅತ್ಯಂತ ಪ್ರಮುಖವಾದ ಕವಿತೆಗಳಲ್ಲಿ "ರಾಣಿ ತಿಮ್ಮಿಯ ಸಿಂಹಾಸನ"ವೂ ಒಂದು. ಈ ಕವಿತೆಯು 1985ರಲ್ಲಿ ಪ್ರಕಟವಾದ ಅವರ ಎರಡನೇ ಕವನ ಸಂಕಲನ ನೀರುಲೋಹದ ಚಿಂತೆಯಿಂದ ಆಯ್ಕೆ ಮಾಡಿರುವಂಥದ್ದು.ಕಥನ ಕವನದ ಸ್ವರೂಪದಲ್ಲಿರುವ ಈ ಕವಿತೆಯಿದು.

"ಭಾಷೆಯೊಳಗಿನ ಪರಿಕಲ್ಪನೆಗಳು, ಪ್ರತಿಮೆಗಳು, ಶಬ್ದಗಳು ಹೊಂದಿರುವ ಸಂಬಂಧವು ಅದಕ್ಕೆ ಹೊರಗಿನ ಏಜೆನ್ಸಿಯಾದ ಅವಳ ಮೂಲಕ ಅರ್ಥ ಹೊಂದುವುದಿಲ್ಲ. ಸ್ಥಾಪಿತ ಭಾಷಾ ವ್ಯವಸ್ಥೆಯೊಳಗೇ ಮಹಿಳೆಯು ಇರುತ್ತಾಳೆ. ಆ ಭಾಷೆಯನ್ನೇ ತನ್ನನ್ನು, ತನ್ನ ನಿಜವನ್ನು ವ್ಯಕ್ತಗೊಳಿಸಲು ಮುರಿದು ಕಟ್ಟುವುದೇ ಆಕೆಗೆ ಇರುವ ದಾರಿ." ಪುರುಷ ಪ್ರಜ್ಞೆ ಸದಾ ಹೆಣ್ಣಿನ ಸ್ವಭಾವ, ನಡವಳಿಕೆ, ಶಕ್ತಿ ಮತ್ತು

***Please cite this article as:*** ತ್ರಿವೇಣಿ. (2024). ರಾಣಿ ತಿಮ್ಮಿಯ ಸಿಂಹಾಸನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 2(6), 107–110.

ಪಾತ್ರಗಳನ್ನು ತನ್ನ ನೆಲೆಯಿಂದ ನಿರ್ಣಯಿಸಿ, ಅದಕ್ಕನುಗುಣವಾಗಿ ಅವಳ ಬದುಕು ರೂಪಿತವಾಗಬೇಕೆಂದೇ ಬಯಸುತ್ತದೆ ಮತ್ತು ಒತ್ತಾಯಿಸುತ್ತದೆ. ಇಂತಹ ಮನೋಧರ್ಮದ ಹಿಂದಿರುವ ಪುರುಷಶಾಹೀ ಧೋರಣೆಯನ್ನು ಈ ಕವಿತೆ ಸಮರ್ಥವಾಗಿ ತೆರೆದಿಡುತ್ತದೆ.

*ನಮ್ಮೂರ*
*ಬಂಡೆ ಬಂಡೆಯ ಮೇಲೆ*
*ಪ್ರಗತಿಪಂಥದ ಹಾಡು.*
*ಇಲ್ಲಿಯ ನಾಯಿ ನರಿಗಳೂ*
*ಸಮಾನತೆಯಿಂದ ಬೊಗಳುತ್ತವೆ.*
*ಹೀಗೆ ಕವಿತೆ ಆರಂಭವಾಗುತ್ತದೆ.*

ಊರಿನ ಬಂಡೆ ಬಂಡೆಯ ಮೇಲೂ ಪ್ರಗತಿಪಂಥದ ಹಾಡು ಕೆತ್ತಲ್ಪಟ್ಟಿವೆ. ಇಲ್ಲಿ ನಾಯಿ ನರಿಗಳೆಲ್ಲ ಸಮಾನತೆಯ ಹೆಸರು ಹೇಳಿಕೊಂಡು ಕಿರುಚುತ್ತಿವೆ ಅಷ್ಟೇ. ನಿಜವಾದ ಕಾಳಜಿ ಇಲ್ಲದ ಬರೀ ತೋರಿಕೆಯ ಮಾತುಗಳು ವಿಜೃಂಭಿಸುತ್ತಿರುವ ಪರಿಯನ್ನು ಕವಯತ್ರಿ ಇಲ್ಲಿ ಮೊನಚಾದ ವಿಡಂಬನೆಯಲ್ಲಿ ಕಟ್ಟಿಕೊಡುತ್ತಾರೆ.

*ಎಲ್ಲ ಕ್ರಾಂತಿಯನ್ನೂ*
*ಹೊದ್ದು ಮಲಗಿದ*
*ಈ ಊರಿನಲ್ಲಿ*
*ನಾಟಕಕ್ಕೆ ಬೇರೆ ವೇದಿಕೆಯೇ?*

ಎನ್ನುವ ಸಾಲುಗಳು ಕ್ರಾಂತಿ ಕೇವಲ ಮಾತಾಗಬಾರದು, ಅದು ಕ್ರಿಯೆಯಾಗಬೇಕೆನ್ನುವುದನ್ನು ಒತ್ತಾಯಿಸುತ್ತವೆ. ಆದರೆ ಇಲ್ಲಿ ಕ್ರಾಂತಿ ಕ್ರಿಯಾತ್ಮಕವಾಗಿಲ್ಲ, ಹೊದ್ದುಕೊಂಡು ಮಲಗಿಬಿಟ್ಟಿದೆ. ಇಡೀ ಊರೇ ಹೀಗೆ ಪ್ರಗತಿ, ಕ್ರಾಂತಿ ಎಂಬ ಸೋಗಲಾಡಿತನದ ನಾಟಕವಾಡುತ್ತಿರುವಾಗ ಮತ್ತೊಂದು ನಾಟಕವಾಡಲು ವೇದಿಕೆ ಬೇಕೇ? ಎಂಬಲ್ಲಿ ಕವಯತ್ರಿಯ ವ್ಯಂಗ್ಯದ ಮೊನಚು ತಿವಿಯುತ್ತದೆ.

*ಇಂಥ ಊರಲ್ಲಿ*
*'ಬಾಳ ಪ್ರಣತಿ' ನಾಟಕದ ತಯಾರಿ*
*ಹುಡುಗರೂ ಮುದುಕರೂ ಸೇರಿ*

ಇಂತಹ ಊರಲ್ಲಿ ಆಡ ಹೊರಟಿರುವ ನಾಟಕವಾದರೂ ಎಂಥದ್ದು? ಬಾಳ ದೀವಿಗೆ ನಾಟಕ. ಹುಡುಗರಾದಿಯಾಗಿ ಮುದುಕರೆಲ್ಲರೂ .. ಇಲ್ಲಿನ ಪ್ರತಿಯೊಂದು ಪದವೂ ವಾಸ್ತವಕ್ಕೂ ನಡತೆಗೂ ಇರುವ ವೈರುದ್ಯವನ್ನು ಎತ್ತಿ ತೋರುತ್ತವೆ.

*ಈ ನಾಟಕದೊಳಗಿನ ಪ್ರಣತಿಗೆ*
*ಮನೆ ಮನೆಗೆ ಹೊಕ್ಕು ತಲಾಶ್ ಮಾಡಿದ್ರು*
*ರಾತ್ರಿ ಬೆಳಗು ಹುಡುಕಿದ್ರು*
*ನಾಟಕದ ರಾಣಿ ನೀನೇ ಬಾ ಅಂದು*
*ತಿಮ್ಮಿ ಒಪ್ಸಿದ್ರು.*

ಅವರ ಆ ನಾಟಕದ ರಾಣಿಗೆ ಸರಿಯಾಗಿ ಹೊಂದಿಕೊಳ್ಳುವವಳು ತಿಮ್ಮಿಯೇ ಎಂಬುದು ನಮಗೆ ಹಲವು ಅರ್ಥಗಳನ್ನು ಹೊಳೆಯಿಸುತ್ತದೆ.

*ತಿಮ್ಮೀಗೆ*
*ಇಂಥ ಖಯಾಲಿ ಬಾಳ.*
*ಯಾರಾರು ಗಾಳಿ ಹಾಕಿದ್ರಂತೂ*
*ತೀರೇ ಹೋಯ್ತು*

ಎಲ್ಲರೂ ಉಬ್ಬಿಸಿದ್ದಕ್ಕೆ ಸಂತೋಷಗೊಂಡ ತಿಮ್ಮಿ ಮುಗ್ಧ ಹೆಣ್ಣಿನ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಂತಿದ್ದಾಳೆ. ತಾನು ಹೊರಬರುವ, ತನ್ನತನವನ್ನು ತೆರೆದಿಡುವ ಸಣ್ಣ ಅವಕಾಶ ಸಿಕ್ಕರೂ ಸಮರ್ಥವಾಗಿ ಬಳಸಿಕೊಳ್ಳಬಲ್ಲಳು.

*ನಾಟಕದಾಗೆ*
*ನೀನೆ ಜೀವ ಅಂತ*
*ಹತ್ತು ಮಂದಿ ಹೇಳಿದ್ರೆ*
*ರಾಜಾಪಾರ್ಟೂ ಕಾಲಿಗೆ ಬಿದ್ರೆ*
*ಯಾರಿಗೆ ಮೋಜಲ್ಲ?*

ತನ್ನ ನಿಜ ಬದುಕಲ್ಲಿ ತಾನು ಕಾಣಲು ಸಾಧ್ಯವಾಗದ ಬೆಲೆ ಅವಳಿಗೆ ದೊರೆತರೆ ಕೇಳಬೇಕೆ? ಅವಳ ಅಸ್ಥಿತ್ವಕ್ಕೆ ಬೆಲೆ ದೊರೆತಿದ್ದಕ್ಕೆ ತಿಮ್ಮಿ ಹಿಗ್ಗಿ ಹೀರೆಯಾದಳು. ಅದರಲ್ಲೂ ಒಬ್ಬ ಗಂಡಸು ತನ್ನನ್ನು

ಓಲೈಸುತ್ತಾನೆಂಬುದ ತಿಳಿದ ಅವಳ ಆನಂದಕ್ಕೆ ಪಾರವೇ ಇಲ್ಲ.

*ಈ ರಾಣಿಗೆ*
*ಸಿಂಹಾಸನ ಕಿರೀಟ*
*ಎಲ್ಲಾ ಆಯ್ತು.*
*ತಾಲಿಂ ಮಾಡ್ತಾ ಮಾಡ್ತಾ*
*ತಾನೇ ರಾಣಿ ಅನ್ನುಸ್ತು,*
*ಪ್ರೀತಿ ಉಕ್ಕಿಸಿದ್ಹಂಗೆ*
*ನಾಟಕದ ರಾಜ*
*ಹಾಡ್ತಾ ಹಾಡ್ತಾ ಇದ್ರೆ*
*ಗಾಳೀಲಿ ತೇಲಿದ್ಹಂಗಾಯ್ತು*

ಎಂದೂ ದೊರೆಯದ ಮಹತ್ವ ಅವಳಿಗೆ ದೊರೆತದ್ದು, ನಾಟಕವಾದರೂ ತಾನು ಕಂಡುಣ್ಣದ ಪ್ರೀತಿಯ ಸೆಲೆ ಸಿಕ್ಕಿದ್ದು ಅವಳಿಗೆ ಹೊಸ ಲೋಕವೇ ಕಂಡಂತಾಯ್ತು. ಇಲ್ಲಿರುವುದೂ ಸಾಚಾ ಪ್ರೀತಿಯಲ್ಲದೇ ಹೋದರೂ ಇಂತದ್ದನ್ನು ಕಾಣದ ಹೃದಯ ಅತೀವ ಆನಂದವನ್ನೇ ಪಡೆಯಿತು.

*ಹಿಟ್ಟು ತಿರುವಿ*
*ಮಕ್ಳನ್ ಮಲಗ್ಸಿ*
*ಗಂಡನ್ನೊಪ್ಸಿ*
*ಹರಿದಿದ್ ಸೀರೆ ಗಂಟು ಬಿಕ್ಕಂಡು*
*ತಾಲೀಮಿಗೆ ಬಂದದ್ದೇ*
*ಕನಸಾಗ್ಹೋಯ್ತು*

ಮನೆಗೆಲಸವನ್ನೂ ಸಂಬಾಳಿಸುತ್ತಲೇ ಅನಂತ ಕನಸುಗಾರಿಕೆಯೊಂದಿಗೆ ತಿಮ್ಮಿ ತಾಲೀಮಿಗೆ ಹೊರಡುತ್ತಾಳೆ. ತನಗೆ ದಕ್ಕಿದ ಅವಕಾಶವನ್ನು ಸದ್ಬಳಕೆ ಮಾಡಿಕೊಳ್ಳಬಲ್ಲ ಛಾತಿಯವಳು ಈಕೆ.

*ನಾಟಕ ಮಾಡೋ ದಿನ ಬಂತು*
*ನಾಡಕದ ರಾಜನ್ನ ಕಣ್ಣಾಗ್ ನುಂಗಿ*
*ನಾಟಕದಾಗೆ ಮಾಡಿದ್ರೆ ಇಕಾ ನೋಡು*
*ಅಂದ ತಿಮ್ಮೀಗೆ ಅವಳ್ಹಂಡ*

ಹೆಣ್ಣನ್ನು ನೋಡುವ ಪುರುಷ ಕ್ರಮವನ್ನು ಈ ಸಾಲುಗಳು ಚಿತ್ರಿಸುತ್ತವೆ. ಪುರುಷ ಪ್ರಜ್ಞೆ ಸದಾ ಅವಳ ದೇಹ– ಸ್ವಭಾವ– ಶಕ್ತಿ ಮತ್ತು ಪಾತ್ರಗಳನ್ನು ತಾನೇ ನಿರ್ಣಯಿಸಿ ಅದಕ್ಕನುಗುಣವಾಗಿಯೇ ಅವಳ ಬದುಕು ರೂಪಿತವಾಗಬೇಕೆನ್ನುವುದನ್ನು ಒತ್ತಾಯಿಸುತ್ತದೆ. ಇಲ್ಲಿ ತಿಮ್ಮಿಯ ಗಂಡನಿಗೆ ಇಷ್ಟೂ ದಿನ ಅವಳು ಪಟ್ಟ ಶ್ರಮ, ಅವಳ ಆಸೆಗಣ್ಣು, ಹರಿದು ಗಂಟು ಬಿಗಿದ ಸೀರೆ ಇದಾವುದೂ ಕಾಣುವುದೇ ಇಲ್ಲ. ಅವಳ ದೇಹದ ಮೇಲೇ ತನ್ನದೇ ಸ್ವಾಮ್ಯವಿರಬೇಕೆಂಬ ಧೋರಣೆಯೇ ಪ್ರಬಲವಾಗುತ್ತದೆ. ತನ್ನ ಹೆಂಡತಿ ಪರ ಪುರುಷನೊಟ್ಟಿಗೆ ನಾಟಕದಲ್ಲೂ ಕಾಣಿಸಿಕೊಳ್ಳುವುದ ಆತ ಸಹಿಸಲಾರ. ನಾಟಕದಾಗೆ ಮಾಡಿದ್ರೆ ಇಕಾ ನೋಡು – ಎಂಬಷ್ಟೇ ಮಾತು ಸಾಕು ಅವಳನ್ನು ಹತೋಟಿಯಲ್ಲಡಲು. ಅದರಾಚೆಗೆ ಚಿಂತಿಸಿದರೆ ಅವಳಿಗೆ ಬದುಕೇ ಇಲ್ಲ.

*ಕಿರೀಟ ಬಿದ್ಹೋಗಿ*
*ಬಣ್ಣ ಕರಗ್ಹೋಗಿ*
*ಕನಸು ಒಡೆದ್ಹೋಗಿ*
*ಇಲ್ಲ ಮಾಡ್ತೀನಿ ಅಂದ್ಲು*
*ನಾನು ರಾಣಿಯಾಗ್ತೀನಿ ಅಂದ್ಲು*

ನಾಟಕದ ಪಾರ್ಟು ಮಾಡ್ತಾ ತಾನೇ ರಾಣಿ ಎಂಬಂತಿದ್ದ ತಿಮ್ಮಿಗೆ ಕನಸೆಲ್ಲಾ ಒಡೆದು ಹೋಯ್ತು. ಎಲ್ಲವೂ ಕರಗಿಹೋಯ್ತು. ತನ್ನ ಅಧಿನವೇ ಅವಳ ಬದುಕು ಎಂದುಕೊಂಡ ಪುರುಷನಿಂದ ಹೆಣ್ಣಿನ ಅಸ್ಮಿತೆಯೇ ಕರಗಿಹೋಗುವುದು ಇಲ್ಲಿನ ವ್ಯಂಗ್ಯವಾಗಿದೆ. ಮಾಡ್ತೀನಿ ಅಂತ ಬಾಯಲ್ಲಿ ಹೇಳಿದರೂ ಅದು ಆಗಿಹೋಗದ್ದೆಂಬ ಅರಿವು ಆಕೆಗೆ ಇದ್ದೇ ಇದೆ. ಆ ಅಸಹಾಯಕತೆಯಿಂದ ನಾಟಕಕ್ಕೆ ಪ್ರಣತಿಯಾಗಿದ್ದ ತಿಮ್ಮಿ

*ಬೋರ್ಲಾಗಿ ಬಿದ್ಗಂಡು*
*ಅಳ್ತಾ ಅಳ್ತಾ ನಿದ್ದೆ ಹೋದ್ಲು*

ಆದರೆ ಅವಳ ಅಂತರಂಗದಲ್ಲಿನ ತುಡಿತಕ್ಕೆ ಬೇಲಿ ಹಾಕಲಾಗದು. ಕನಸಿನಲ್ಲೇ ಎಲ್ಲವನ್ನೂ ಸಾಧಿಸಿಕೊಂಡಳು.

*ಕನಸಾಗೆ*

*ನಾಟಕದ ಮೋಜೇನ್ ಹೇಳ್ಳಿ*
*ಜನರೆಲ್ಲ ರಾಣೀನೇ ನೋಡ್ತಿದಾರೆ*
*ಕೈ ಮುಗಿದು ನಿಂತಿದಾರೆ*
*ರಾಣಿ ತಿಮ್ಮಿಯ ಸಿಂಹಾಸನ*
*ಫಳಾ ಫಳಾ ಅಂತಿತ್ತು*

ಎಂದೂ ಸಿಗದ ಗೌರವ, ಮಹತ್ವ ಎಲ್ಲವೂ ತಿಮ್ಮಿಗೆ ಕನಸಿನಲ್ಲಿ ದಕ್ಕಿತು. ಅವಳ ಅಷ್ಟೂ ದಿನದ ಶ್ರಮಕ್ಕೆ ದೊರೆವ ಅಮಾನ್ಯತೆ ಅವಳನ್ನು ಕುಗ್ಗಿಸಲಿಲ್ಲ. ಆ ತಳಮಳವನ್ನು ಆಕೆ ಕನಸುಗಾರಿಕೆಯ ಮೂಲಕವೇ ಜೀವಂತವಾಗಿಟ್ಟುಕೊಳ್ಳುತ್ತಾಳೆ. ತಿಮ್ಮಿಯ ಈ ಕನಸನ್ನು, ಕನಸಿನ ಪರಿಧಿಯಲ್ಲೇ ಮುಕ್ತಾಯವಾಗಲು ಬಿಡದೆ ನನಸಾಗಿಸುವತ್ತ ಇಂದಿನ ಹೆಣ್ಣು ಮುನ್ನುಗ್ಗಬೇಕೆಂಬ ಮುಂದಿನ ಹಾದಿಯನ್ನು ಈ ಕವಿತೆ ನಮಗೆ ಮನಗಾಣಿಸುತ್ತದೆ. ಗಂಡು ಸಬಲ ಪ್ರಬಲ ಎನ್ನುವ ನಂಬಿಕೆಯ ವಿರುದ್ಧ ನಿಂತ ಪ್ರತಿರೋಧದ ಅಲೆಯಿದು. ಇಲ್ಲಿ ಅಧಿಕಾರದ ರಾಜಕಾರಣವಿದೆ. ವ್ಯಕ್ತಿ ವ್ಯಕ್ತಿಗಳ ನಡುವೆ ಇರಬೇಕಾದ ಸಮನ್ವಯವನ್ನು ಪ್ರತಿನಿಧಿಸುತ್ತಲೇ, ಹೆಣ್ಣನ್ನು ನೋಡುವ ಕ್ರಮ ಬದಲಾಗಬೇಕೆಂಬುದನ್ನು ಕವಿತೆ ಒತ್ತಾಯಿಸುತ್ತದೆ. ದೇಹದ ಮೇಲಿನ ನಿಯಂತ್ರಣದಿಂದಲೇ ಹೆಣ್ಣನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವ ವ್ಯವಸ್ಥೆಯ ವಾಸ್ತವವನ್ನು ನಮ್ಮೆದುರು ಈ ಕವಿತೆ ತೆರೆದಿಡುತ್ತದೆ. ಗಂಡಿನ ಯಜಮಾನತ್ವದ ಸ್ವರೂಪವನ್ನು ಹೇಳುತ್ತಾ ಹೆಣ್ಣು ಬದುಕಿನ ಪ್ರತಿ ತಿರುವಿನಲ್ಲೂ ನಿರ್ಧಾರ ತೆಗೆದುಕೊಳ್ಳುವ ಅಧಿಕಾರ ಚಲಾಯಿಸುವ ಗಂಡಿನ ಆಕ್ರಮಣಕಾರಿ ಮನೋಧರ್ಮವನ್ನು ಸೂಕ್ಷ್ಮವಾಗಿ ಖಂಡಿಸುತ್ತದೆ

**ಕೊನೆಟಿಪ್ಪಣಿ**

1. ತಾರಾನಾಥ, ಎನ್. ಎಸ್. (2022). ಬೆನ್ನುಡಿ, ವಿಜಯಾದಬ್ಬೆ ಸಮಗ್ರ ಸಾಹಿತ್ಯ,
2. ಸುಮಿತ್ರಾಬಾಯಿ ಬಿ. ಎನ್. (2018). ಸ್ತ್ರೀವಾದ ಒಂದು ಅವಲೋಕನಾ. ಪು. 123.

**ಪರಾಮರ್ಶನ ಗ್ರಂಥಗಳು**


- ಸಬಿಹ ಭೂಮಿ ಗೌಡ. (2006). ಮಹಿಳಾ ಸಾಹಿತ್ಯ. ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ. (1993). ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಶಶಿಕಲಾ ಎಸ್ ಡಿ. (ಸಂ.) (2012). ವಿಜಯದಬ್ಬೆ ಸಮಗ್ರ ಸಾಹಿತ್ಯ. ಅಪರಂಜಿ ಪ್ರಕಾಶನ.
- ಸುಮಿತ್ರಾ ಬಾಯಿ ಬಿ ಎನ್. (2018). ಸ್ತ್ರೀವಾದ ಒಂದು ಅವಲೋಕನ. ಅಹರ್ನಿಸಿ ಪ್ರಕಾಶನ.
- ತೇಜಸ್ವಿನಿ ನಿರಂಜನ. (ಸಂ.) (2014). ಸೀಮಂತಿನಿ ನಿರಂಜನ – ಸ್ತ್ರೀವಾದಿ ಸಾಹಿತ್ಯ ವಿಮರ್ಶೆ. ಅಭಿನವ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp.111 - 116
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ತಳವರ್ಗದ ಪ್ರಾತಿನಿಧಿಕ ಶರಣೆಯರ ವಚನಗಳಲ್ಲಿ ವ್ರತಾಚರಣೆಯ ಮಹತ್ವ

**ಡಾ.ರಾಶಿ ಎಂ.ಆರ್.**
ಸಹಾಯಕ ಪ್ರಾಧ್ಯಾಪಕರು, ಶ್ರೀ ಡಿ.ದೇವರಾಜ ಅರಸು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುಣಸೂರು.

***Abstract:***
*ಆರಂಭದಲ್ಲಿ ಸಂಸ್ಕೃತ, ಪ್ರಾಕೃತ ಭಾಷೆಗಳ ಪ್ರಭಾವದಿಂದ ಬಳಕೆಯಾಗುತ್ತಿದ್ದ ಕನ್ನಡ ಭಾಷೆಯಲ್ಲಿ ಹಲವು ಅವಸ್ಥಾಭೇದಗಳು ಉಂಟಾಗಿವೆ. ಅವುಗಳೆಂದರೆ, ಪೂರ್ವದ ಹಳೆಗನ್ನಡ, ಹಳೆಗನ್ನಡ, ಮಧ್ಯಕಾಲೀನ ಕನ್ನಡ, ಆಧುನಿಕ ಕನ್ನಡ. ಮಧ್ಯಕಾಲೀನ ಕನ್ನಡದ ಕಾಲಘಟ್ಟದಲ್ಲಿ ಭಾಷಿಕವಾಗಿ ಹೊಸಯುಗವೇ ತೆರೆದುಕೊಂಡಿತು. ಅಲ್ಲದೇ ಹೆಚ್ಚು ಗದ್ಯವೂ ಅಲ್ಲದ, ಪದ್ಯವೂ ಅಲ್ಲದ ಭಾಷೆಯಲ್ಲಿ ವಚನಗಳು ರೂಪುಗೊಂಡವು. 12ನೇ ಶತಮಾನದಲ್ಲಿ ಶಿವಶರಣರು/ಶರಣೆಯರು ವೃತ್ತಿ, ಜಾತಿ, ಮಹಿಳೆ–ಪುರುಷ, ಮೇಲು, ಕೀಳು ಎಂಬ ಭೇದವಿಲ್ಲದೆ ವಚನಗಳನ್ನು ರಚಿಸಿದರು. ಈ ಹಿನ್ನೆಲೆಯಲ್ಲಿ ತಳವರ್ಗದ ಶಿವಶರಣೆಯರ ಜೀವನಕ್ರಮ ಹಾಗೂ ಅವರ ವಚನಗಳಲ್ಲಿ ವ್ರತ ನಿಷ್ಠೆಯ ಮಹತ್ವವನ್ನು ತಿಳಿಸುವುದು ಈ ಲೇಖನದ ಉದ್ದೇಶವಾಗಿದೆ.*

***Keywords:*** *ವಚನ ಸಾಹಿತ್ಯ, 12 ನೇ ಶತಮಾನ, ಶಿವಶರಣೆಯರು, ತಳವರ್ಗದ ಶರಣೆಯರು, ವ್ರತನಿಷ್ಠೆ.*

**ಪೀಠಿಕೆ**

ವಚನ ಎಂದರೆ ಮಾತು ಎಂದರ್ಥ. ವಚನ ಎಂಬ 'ಶಬ್ಧ' 'ಭಾಷೆ', 'ಪ್ರಮಾಣ' ಎನ್ನುವ ಸಾಮಾನ್ಯ ಅರ್ಥದಿಂದ ಹಿಡಿದು 'ಗದ್ಯಗೀತ' ಎಂಬ ವಿಶಾಲ ಅರ್ಥವನ್ನು ಪಡೆದುಕೊಂಡಿದೆ. ಈ ಕಾಲ ಘಟ್ಟದಲ್ಲಿ ಅಕ್ಷರ ಬಲ್ಲವರು ಮತ್ತು ಅಕ್ಷರ ಕಲಿಯದೇ ಇದ್ದವರೆಲ್ಲರೂ ಒಂದೇ ವೇದಿಕೆಯಲ್ಲಿ ಮುಖ್ಯವಾಹಿನಿಗೆ ಬಂದರು. 12ನೇ ಶತಮಾನದಲ್ಲಿ ಶಿವಶರಣರು/ಶರಣೆಯರು ವೃತ್ತಿ, ಜಾತಿ, ಮಹಿಳೆ–ಪುರುಷ, ಮೇಲು, ಕೀಳು ಎಂಬ ಭೇದವಿಲ್ಲದೆ ವಚನಗಳನ್ನು ರಚಿಸಿದರು. ವಚನಕಾರರನ್ನು ಹೆಸರಿಸಿ ಎಂದರೆ ಮೊದಲಿಗೆ ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮಯ್ಯ ಹೀಗೆ ಆರಂಭಿಸುವರೆ ವಿನಹ ಸೂಳೆ ಸಂಕವ್ವೆ, ದಸರಯ್ಯಗಳ ಪುಣ್ಯಸ್ತ್ರೀ ವೀರಮ್ಮ, ಕದಿರ ಕಾಯಕದ ಕಾಳವ್ವೆ, ಕೊಟ್ಟಣದ ಸೋಮಮ್ಮ ಇನ್ನು ಮುಂತದವರಿಂದ ಗುರುತಿಸುವುದು ಅಪರೂಪವೇ ಸರಿ. ಮಹಿಳಾ ವಚನಕಾರ್ತಿಯರ ಪಟ್ಟಿಯಲ್ಲಿ ಅಕ್ಕಮಹಾದೇವಿಗೆ ಅಗ್ರಸ್ಥಾನ. ಗಂಗಾಂಬಿಕೆ, ನಾಗಂಬಿಕೆ, ಅಕ್ಕಮ್ಮ, ಮುಕ್ತಾಯಕ್ಕ ಹೀಗೆ ಹೇಳುವಷ್ಟರಲ್ಲಿ ಇತ್ಯಾದಿಯಲ್ಲಿಗೆ ಬಂದು ತಲುಪುವುದನ್ನು ಕಾಣುತ್ತೇವೆ. ಆ ಸಂದರ್ಭದಲ್ಲಿ ಸುಲಭವಾಗಿ ತಳವರ್ಗದ ಶರಣೆಯರ ನಾಮಾಂಕಿತ ನೆನಪಿಗೆ ಬರುವುದಿಲ್ಲ. ಆದುದರಿಂದ ಈ ಹಿನ್ನೆಲೆಯಲ್ಲಿ ತಳವರ್ಗದ ಶಿವಶರಣೆಯರ ಜೀವನಕ್ರಮ ಹಾಗೂ ಅವರ ವಚನಗಳಲ್ಲಿ ವ್ರತ ನಿಷ್ಠೆಯ ಮಹತ್ವವನ್ನು ತಿಳಿಸುವುದೇ ನನ್ನ ಈ ಲೇಖನದ ಉದ್ದೇಶವಾಗಿದೆ.

**ಉನ್ನತ ವರ್ಗಕ್ಕೆ ಸೇರಿದ ಮಹಿಳಾ ವಚನಕಾರ್ತಿಯರು:** ಅಕ್ಕಮಹಾದೇವಿ, ಗಂಗಾಂಬಿಕೆ,

***Please cite this article as:*** ರಾಶಿ. ಎಂ. ಆರ್. (2024). ತಳವರ್ಗದ ಪ್ರಾತಿನಿಧಿಕ ಶರಣೆಯರ ವಚನಗಳಲ್ಲಿ ವ್ರತಾಚರಣೆಯ ಮಹತ್ವ: ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 2(6), 111–116.

ನೀಲಮ್ಮ, ಲಕ್ಷ್ಮಮ್ಮ, ಸತ್ಯಕ್ಕ, ಗಜೇಶಮಸಣಯ್ಯಗಳ ಪುಣ್ಯಸ್ತ್ರೀ, ಮುಕ್ತಾಯಕ್ಕ, ಮೋಳಿಗೆ ಮಹಾದೇವಿ ಇನ್ನು ಮುಂತಾದವರು.

**ಕೆಳವರ್ಗ ಹಾಗೂ ಕಾಯಕಕ್ಕೆ ಸೇರಿದ ವಚನಕಾರ್ತಿಯರು:**

ಸೂಳೆ ಸಂಕವ್ವೆ, ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ, ಬಾಚಿಕಾಯಕದ ಬಸವಗಳ ಪುಣ್ಯಸ್ತ್ರೀ ಕಾಳವ್ವೆ, ಸಿದ್ಧಬುದ್ಧಿಯ್ಯಗಳ ಪುಣ್ಯಸ್ತ್ರೀ ಕಾಳವ್ವೆ, ಕದಿರ ಕಾಯಕದ ಕಾಳವ್ವೆ, ದಸರಯ್ಯಗಳ ಪುಣ್ಯಸ್ತ್ರೀ ವೀರಮ್ಮ , ಎಡೆಮಠದ ನಾಗಿದೇವಯ್ಯಗಳ ಪುಣ್ಯಸ್ತ್ರೀ ಮಸಣಮ್ಮ, ಪಾಠಕೂಟಯ್ಯಗಳ ಪುಣ್ಯಸ್ತ್ರೀ ರೇಚವ್ವೆ, ಕಾಲಕಣ್ಣಿಯ ಕಾಯಮ್ಮ, ಕೊಂಡೆಮಂಚಣ್ಣಗಳ ಪುಣ್ಯಸ್ತ್ರೀ ಲಕ್ಷ್ಮಮ್ಮ, ಕೊಟ್ಟಣದ ಸೋಮಮ್ಮ, ಕೇತಲಾದೇವಿ, ಆಯ್ದಕ್ಕಿ ಲಕ್ಕಮ್ಮ ಇನ್ನು ಮುಂತಾದವರು.

ವ್ರತಾಚರಣೆಯ ನೆಲೆಯಲ್ಲಿ ಪ್ರಾತಿನಿಧಿಕ ಮಹಿಳಾ ವಚನಕಾರ್ತಿಯರ ವಚನಗಳನ್ನು ನೋಡುವುದಾದರೆ, 12ನೇ ಶತಮಾನ ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಸ್ಥಿತ್ಯಂತರಗೊಂಡ ಕಾಲಘಟ್ಟವಾಗಿದೆ. ಅಲ್ಲದೇ ಅನಕ್ಷರಸ್ಥರಾದ ಕೆಳವರ್ಗದ ಮಹಿಳೆಯರು ಅಕ್ಷರ ರೂಪದಲ್ಲಿ ಮುನ್ನಡೆಗೆ ಬಂದ ಹಾಗೂ ಭಾಷೆಯ ಪ್ರಯೋಗದಲ್ಲಿ ಭಿನ್ನತೆಯನ್ನು ಸಾಧಿಸಿದ ಕಾಲವಾಗಿದೆ. ವಿಶೇಷವೆಂದರೆ ಇವರು ರಚಿಸಿದ ವಚನಗಳಲ್ಲಿ ಪುರುಷ ವಚನಕಾರರ ಉಲ್ಲೇಖವನ್ನು ಮಾಡಿದ್ದಾರೆ ವಿನಹ ಸಮಕಾಲೀನವಾಗಿಯಾಗಲೀ ತಮಗಿಂತ ಹಿಂದಿನ ಮಹಿಳಾ ವಚನಕಾರರನ್ನಾಗಲೀ ಸ್ಮರಿಸಿಲ್ಲದಿರುವುದು ಗಮನಾರ್ಹ ಸಂಗತಿಯಾಗಿದೆ.

"ಜಾತಿ ಮತ್ತು ಕಾಯಕಗಳು ಮೇಲ್ವರ್ಗದವರಿಗೆ ಎದುರಿಸಬೇಕಾದ ಸಾಂಸ್ಕೃತಿಕ ಬಿಕ್ಕಟ್ಟುಗಳಲ್ಲಿ ಭಾಷೆ ಹಾಗೂ ಭಾಷಿಕ ಪರಿಕರಗಳ ಬಳಕೆ ಸಲೀಸಾಗಿದ್ದು ಅವು ಸವಾಲಲ್ಲ. ಇಂತಹ ಸವಾಲುಗಳಲ್ಲದ ಹಿನ್ನೆಲೆಯಲ್ಲಿ ಬಂದ ಶರಣೆಯರಿಗೂ ಕೆಳ ಜಾತಿ, ಕೆಳವರ್ಗದಿಂದ ಬಂದ ಶರಣೆಯರಿಗೂ ಅಗಾಧವಾದ ವ್ಯತ್ಯಾಸವಿದೆ. ನೀಲಮ್ಮ, ನಾಗಲಾಂಬಿಕೆ, ಅಕ್ಕನಾಗಮ್ಮನವರಿಗೆ ವ್ರತಾಚಾರಣೆ ಹೊಸದಾಗಿ ರೂಪುಗೊಳ್ಳಬೇಕಾಗಿಲ್ಲ. ಅವು ಅವರ ಜೀವನ ವಿಧಾನದಿಂದಲೇ ಬಂದವು ಆಗಿರುತ್ತವೆ. ಹೀಗಾಗಿ ಈ ಎರಡು ವರ್ಗದ ವಚನಕಾರ್ತಿಯರು ಬಳಸುವ ಭಾಷೆ ಕಾಯಕದ ವಿವರಗಳು ,ರೂಪಕಗಳು, ವ್ರತಾಚಾರಗಳನ್ನು ಕುರಿತ ನಿಲುವುಗಳು ಸ್ವಾಭಾವಿಕವಾಗಿಯೇ ಭಿನ್ನವಾಗಿರುತ್ತವೆ."[1]

"ವಚನಯುಗ ಮುಖ್ಯವಾಗಿ ಸಂಕ್ರಮಣದ ಕಾಲಘಟ್ಟವಾಗಿದ್ದು ದೇವರು, ಧರ್ಮ ,ಜೀವನ ,ಸಾಹಿತ್ಯ, ಭಾಷೆ ಎಲ್ಲವೂ ಕೂಡ ಜನತೆಯತ್ತ, ಸಾಮಾನ್ಯರ ಬದುಕಿನತ್ತ ಚಲಿಸುವ ಆಶಯವನ್ನು ಇರಿಸಿಕೊಂಡಿದ್ದವು."[2]

ಈ ಹಿನ್ನೆಲೆಯಲ್ಲಿ ಪ್ರಾತಿನಿಧಿಕ ತಳವರ್ಗದ ಶಿವಶರಣೆಯರ ವಚನಗಳಲ್ಲಿ ಬಿಂಬಿತವಾಗಿರುವ ವ್ರತಾಚಾರದ ಮಹತ್ವವನ್ನು ತಿಳಿಯೋಣಾ.

**ಸೂಳೆಸಂಕವ್ವೆ:**

ಒಂದೇ ವಚನದ ಮೂಲಕ ಪ್ರಸಿದ್ಧಳಾದ ಸೂಳೆ ಸಂಕವ್ವೆಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ನಿರ್ಲಜ್ಜೇಶ್ವರಾ ಎನ್ನುವ ಅಂಕಿತದೊಂದಿಗೆ ಆಕೆಯ ಒಂದು ವಚನ ದೊರೆತಿದೆ. ಅದು ಕಾಯಕ, ವ್ರತಾಚಾರಣೆಯ ಮಹತ್ವ ಆ ಕಾಲಘಟ್ಟದ ಸಾಮಾಜಿಕ ಸ್ಥಿತಿಗತಿಯನ್ನು ಅರಿಯಲು ಸಹಾಯವನ್ನು ಮಾಡುತ್ತದೆ.

***"ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ***
***ಹಿಡಿದರೆ ಬತ್ತಲೆ ನಿಲ್ಲಿಸಿ ಕೊಲುವರಯ್ಯಾ***
***ವ್ರತಹೀನನನರಿದು ಬೆರೆದಡೆ ಕಾದಕತ್ತಿಯಲಿ ಕೈ***
***ಕಿವಿ ಮೂಗ ಕೊಯ್ವರಯ್ಯಾ***
***ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ"[3]***

[1] ಪುಷ್ಪ ಎಚ್.ಎಲ್., ಅಕ್ಕಮ್ಮ, ಪು.ಸಂ.–71
[2] ಅದೇ. ಪು.ಸಂ.–76
[3] ರಂಜಾನ್ ದರ್ಗಾ. ವಚನ ಬೆಳಕು–ನೂರೊಂದು ವಚನ ವಿಶ್ಲೇಷಣೆ. ಪು.ಸಂ. 40

ಈ ವಚನದಲ್ಲಿ ಸಂಕವ್ವೆಯ ನೇರನುಡಿಗಳನ್ನು ಕಾಣಬಹುದು. ನಿರ್ಲಜ್ಜೇಶ್ವರನ ಒತ್ತೆ ಹಿಡಿದಿರುವ ಸಂಕವ್ವೆ ಪರರನ್ನ ಬಯಸಳು. ಇಷ್ಟಲಿಂಗಕ್ಕೆ ಶರಣಾದ ಬಳಿಕ ಮತ್ತೆ ವೇಶ್ಯಾವೃತ್ತಿಯನ್ನು ಹಿಡಿದರೆ ಇತರ ಶಿವಶರಣರ ದೃಷ್ಟಿಯಲ್ಲಿ ಕೀಳಾಗುತ್ತೇನೆಂದು ಅರಿತವಳು. ಹೆಸರೇ ಸೂಚಿಸುವಂತೆ ಈಕೆಯದು ವೇಶ್ಯವಾಟಿಕೆಯ ವೃತ್ತಿ. ಆ ಕಾಯಕದಿಂದಲೇ ತನ್ನ ಬದುಕನ್ನು ರೂಪಿಸಿಕೊಂಡವಳೆಂದು ಆಕೆಯ ವಚನದಿಂದಲೇ ನಾವು ಅರಿಯಬಹುದು. ತನ್ನ ವೃತ್ತಿಯಲ್ಲಿ ಅನುಸರಿಸುತ್ತಿದ್ದ ನಿಯಮಗಳೆಂದರೆ,

- ವ್ರತನಿಷ್ಠರ ಬಳಿ ಹಣವನ್ನ ಪಡೆಯಬೇಕು.
- ವ್ರತಹೀನರಿಂದ ದೂರ ಇರುವುದು.
- ಒತ್ತೆಯ ಬಯಸುವ ಆಸೆಯಿಂದ ದೂರ ಇರುವುದು.

(ಒತ್ತೆ ಭಾಷಿಕ ನಹಿನ್ನೆಲೆಯಲ್ಲಿ ಈ ಪದವನ್ನು ಮುಖ್ಯವಾಗಿ ಗಮನಿಸುವುದು. ಒತ್ತೆ ಎಂದರೆ ಸಂಕವ್ವೆ ವೇಶ್ಯೆಗೆ ತೆರುವ ಹಣ ಎಂಬರ್ಥದಲ್ಲಿ ಪ್ರಯೋಗಿಸಿದ್ದಾಳೆ. ಈ ರೀತಿಯ ನವೀನ ಪದ ಪ್ರಯೋಗವನ್ನು ಇನ್ನಿತರ ವಚನಕಾರ್ತಿಯರ ವಚನಗಳಲ್ಲೂ ಕಾಣಬಹುದು.

12ನೇ ಶತಮಾನದಲ್ಲಿ ವೇಶ್ಯಾವೃತ್ತಿ ಸಾಮಾಜಿಕವಾಗಿ ಮನ್ನಣೆ ಪಡೆದುದಾಗಿತ್ತು. ಹಾಗೂ ವ್ರತನೇಮ ನಿಯಮಗಳ ಚೌಕಟ್ಟಿಗೆ ಅದು ಒಳಗಾಗಿತ್ತು ಎಂಬುದನ್ನು ನಾವು ಮನಗಾಣಬಹುದು. ಸಂಕವ್ವೆಯ ಈ ವಚನದಲ್ಲಿ ವ್ರತ ನಿಷ್ಠತೆಯನ್ನು, ಕಾಯಕನಿಷ್ಠೆಯನ್ನು ಗುರುತಿಸಬಹುದು.

ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿ:

***"ಹದಮಣ್ಣಲ್ಲದೆ ಮಡಕೆಯಾಗಲಾರದು***
***ವ್ರತಹೀನನ ಬೆರೆಯಲಾಗದು***
***ಬೆರೆದಡೆ ನರಕ ತಪ್ಪದು***
***ನಾನೊಲ್ಲೆ ಬಲ್ಲೆನಾಗಿ ಕುಂಭೇಶ್ವರಾ"*** [4]

ಬಸವಣ್ಣನವರ ಸಮಕಾಲೀನಳಾದ ಕೇತಲದೇವಿ ಕುಂಬಾರಗುಂಡಯ್ಯನ ಪತ್ನಿ . ಈಕೆ ತನ್ನ ವೃತ್ತಿ ಪರಿಭಾಷೆಯನ್ನು ಅಂಕಿತವನ್ನಾಗಿಸಿ ವಚನ ರಚನೆ ಮಾಡಿದ್ದಾಳೆ. ವ್ರತಹೀನರೊಟ್ಟಿಗೆ ಬೆರೆತರೆ ನರಕ ಪ್ರಾಪ್ತಿಯಾಗುತ್ತದೆ ಎನ್ನುವ ಕೇತಲದೇವಿ ಹದವಾದ ಮಣ್ಣಿನಿಂದ ಮಾತ್ರವೇ ಮಡಕೆಯ ತಯಾರಿಕೆಯಾಗುತ್ತದೆ. ಹದವಿಲ್ಲದೇ ಹೋದರೆ ಅದು ಮಡಕೆಯಾಗಲಾರದು. ಇದನ್ನು ಅರಿತ ಈಕೆ ನಾನು ವ್ರತಹೀನರೊಡನೆ ಸೇರುವುದಿಲ್ಲವೆನ್ನುತ್ತಾಳೆ. ಇದೆ ರೀತಿಯಾಗಿ ಕೊಟ್ಟಣದ ಸೋಮಮ್ಮ ತನ್ನ ವಚನದಲ್ಲಿ ಹೇಳುವುದನ್ನು ಗಮನಿಸಬಹುದು.

'ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ ವ್ರತಹೀನನನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ' ಎನ್ನುವ ಸೋಮಮ್ಮಳ ಈ ವಚನ ಕೇತಲದೇವಿಯ ಮೇಲಿನ ವಚನವನ್ನು ಹೋಲುತ್ತದೆ ಹಾಗೂ ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ ಕೂಡ ವ್ರತಹೀನ ನೆರೆಯಲು ನರಕಕ್ಕೆ ಮೂಲ ಎನ್ನುತ್ತಾಳೆ.

**ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ**

***"ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ***
***ಮಾತು ತಪ್ಪಿ ನಡೆಯಲು ಬಾಯಿಗೆ ಮೂಲ***
***ವ್ರತಹೀನನನೆರೆಯಲು ನರಕಕ್ಕೆ ಮೂಲ***
***ಕರ್ಮ ಹರ ಕಾಳೇಶ್ವರಾ"*** [5]

ವ್ರತನಿಷ್ಠತೆಯ ಬಗ್ಗೆ ಹೇಳುವ ಮೇಲಿನ ವಚನ ವ್ರತಹೀನರೊಟ್ಟಿಗಿನ ಸಂಗವು ಸಲ್ಲದು ಎನ್ನುತ್ತ ವ್ರತನಿಷ್ಠರ ಸಂಗಡ ಸಂಬಂಧವಿರಿಸಿಕೊಳ್ಳುವುದು ಸ್ವರ್ಗ ಸುಖಕ್ಕೆ ಸಮಾನವೆಂಬುದು ಆಕೆಯ ಅರಿವಿಗೆ ಬಂದಿತು ಎಂಬುದನ್ನು ತಿಳಿಸುತ್ತದೆ.

**ಎಡೆಮಠದ ನಾಗಿದೇವಯ್ಯಗಳ ಪುಣ್ಯಸ್ತ್ರೀ ಮಸಣಮ್ಮ**

'ನಿಜಗುಣೇಶ್ವರಾ ಲಿಂಗ' ಎಂಬ ಅಂಕಿತವನ್ನು ಇಟ್ಟುಕೊಂಡ ಮಸಣಮ್ಮಳ ಒಂದು ವಚನ ದೊರೆತಿದೆ. ಆಕೆಗೆ ಸಂಬಂಧಿಸಿದಂತಹ ವೈಯಕ್ತಿಕ

[4] ಅದೇ. ಪು.ಸಂ. 71

[5] ಅದೇ. ಪು.ಸಂ. 86

ವಿವರ ತಿಳಿದು ಬಂದಿಲ್ಲ. ಈಕೆಯ ಪತಿ ಎಡೆಮತದ ನಾಗಿದೇವ .

'ಕಾಗೆಯ ನಾಯ ತಿಂದವರಿಲ್ಲ' ಎನ್ನುವ ಮಸಣಮ್ಮ ವ್ರತಭ್ರಷ್ಟರನ್ನ ಖಂಡಿಸುತ್ತಾಳೆ. ಈ ವಚನ ಸಿದ್ಧ ಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ವಚನವನ್ನು ಹೋಲುತ್ತದೆ. 'ವ್ರತಭ್ರಷ್ಟನ ಲಿಂಗ ಬಾಹ್ಯನ ಕಂಡಡೆ ಸತ್ತ ನಾಯ ,ಕಾಗೆಯ ಕಂಡಂತೆ' ಎನ್ನುವ ಮಸಣಮ್ಮ ವ್ರತಭ್ರಷ್ಟರನ್ನು ತಿರಸ್ಕರಿಸಬೇಕೆಂದು ಎಚ್ಚರಿಸುತ್ತಾಳೆ ಹಾಗೂ ಶಿವಭಕ್ತರಲ್ಲದ ವ್ರತಭ್ರಷ್ಟರನ್ನ ಖಂಡಿಸುತ್ತಾಳೆ.

**ಕೊಟ್ಟಣದ ಸೋಮಮ್ಮ**

ಈಕೆಯ ಕಾಲ ಕ್ರಿ.ಶ.1160. ಈಕೆಯ ಒಂದು ವಚನ ದೊರೆತಿದ್ದು ವೈಯಕ್ತಿಕ ಜೀವನದ ಬಗ್ಗೆ ಹೆಚ್ಚಿನ ವಿವರಗಳು ತಿಳಿದು ಬರುವುದಿಲ್ಲ. ಸೂಳೆಸಂಕವ್ವೆ ಮತ್ತು ಕೊಟ್ಟಣದ ಸೋಮಮ್ಮ ಇಬ್ಬರು ವಚನಕಾರ್ತಿಯರು 'ನಿರ್ಲಜ್ಜೇಶ್ವರಾ' ಎಂಬ ಒಂದೇ ಅಂಕಿತದಿಂದ ವಚನಗಳನ್ನ ರಚಿಸಿದ್ದಾರೆ. ಈರ್ವರ ಕಾಯಕಗಳು ಕೂಡ ಬೇರೆಬೇರೆಯಾಗಿದೆ. ಈ ವಚನಕಾರ್ತಿಯರ ವಚನಗಳಲ್ಲಿ ಕೆಲವು ಸಮಾನ ಅಂಶಗಳಿವೆ. ಹದವರಿತು ಭತ್ತವನ್ನು ಕುಟ್ಟಿದರೆ ಮಾತ್ರ ಅಕ್ಕಿಯನ್ನು ಪಡೆಯಲು ಸಾಧ್ಯ ಹಾಗೂ ಹೆಚ್ಚು ಭತ್ತವನ್ನು ಕುಟ್ಟಿದರೆ ಅದು ನುಚ್ಚಾಗುತ್ತದೆ. ಕಡಿಮೆ ಕುಟ್ಟಿದರೆ ಅದು ಅಕ್ಕಿಯಾಗಿ ಉಳಿಯುವ ಸಾಧ್ಯತೆಯಿರುತ್ತದೆ. ಹದವರಿತು ಕುಟ್ಟುವ ಪರಿಣತಿ ಇರಬೇಕಾಗುತ್ತದೆ. ತಮಗರಿಯದೆ ವ್ರತಹೀನರೊಡನೆ ಬೆರೆತರೆ ದೋಷವಿಲ್ಲ. ಅರಿತ ಮೇಲೂ ಅವರೊಡನೆ ಬೆರೆಯುವುದು ತಪ್ಪೆನ್ನುತ್ತಾಳೆ. ಮುಂದುವರೆದು ಸೋಮಮ್ಮ ಅಂತಹ ಶರಣರಿಗೆ ಅಪರಾಧ ಕಟ್ಟಿಟ್ಟ ಬುತ್ತಿಯೆಂದು ತಾನು ಎಂದಿಗೂ ವ್ರತಹೀನರನ್ನು ಬೆರೆಯುವುದಿಲ್ಲವೆಂದು ನಿರ್ಲಜ್ಜೇಶ್ವರನ ಸಾಕ್ಷಿಯಾಗಿ ಪ್ರತಿಜ್ಞೆಗೈಯ್ಯುತ್ತಾಳೆ. ತನ್ನ ಕಾಯಕದ ಮೂಲಕ ವ್ರತಾಚಾರಣೆಯ ಮಹತ್ವವನ್ನು ತಿಳಿಸುತ್ತಾಳೆ.

ತಳವರ್ಗದ ಹಲವು ವಚನಕಾರ್ತಿಯರ ಹೆಸರುಗಳನ್ನು ಗಮನಿಸುವುದಾದರೆ, ವಿಶೇಷವಾಗಿ ಹೆಸರಿನ ನಡುವೆ 'ಪುಣ್ಯಸ್ತ್ರೀ' ಎಂದು ಸೇರಿಸಿಕೊಂಡಿರುವುದು, ಕಾಯಕ ಸೂಚಿತ, ಪತಿಯ ಹೆಸರು ಜೊತೆ ಸೇರಿಸಿ ಇಟ್ಟುಕೊಂಡಿರುವುದು ಭಾಷಿಕ ನೆಲೆಯಲ್ಲಿ ಪ್ರಾಧನ್ಯತೆಯನ್ನು ಪಡೆಯುತ್ತದೆ. 'ಪುಣ್ಯಸ್ತ್ರೀ' ಎಂದು ವಚನಕಾರ್ತಿಯರು ತಮ್ಮನ್ನು ತಾವೇ ಕರೆದುಕೊಂಡಿರುವುದು ಆತ್ಮಗೌರವದ ಸಂಕೇತವಾಗಿದೆ. ಅಲ್ಲದೇ ಸಾಂಸಾರಿಕ ಜೀವನದೊಳಗಿದ್ದು ಇಷ್ಟದೈವದ ಸಾನಿಧ್ಯ ಪಡೆಯಲು ವಚನಕಾರ್ತಿಯರು ನಡೆಸಿದ ಹೋರಾಟ ಅವರ ವಚನಗಳಲ್ಲಿ ಎದ್ದು ಕಾಣುತ್ತದೆ. ಪುರುಷ ವಚನಕಾರರ್‍ಯಾರು ತಮ್ಮ ಹೆಂಡತಿಯರ ಹೆಸರನ್ನ ತಮ್ಮ ಅಂಕಿತ ನಾಮದೊಳಗೆ ಸೇರಿಸಿರುವುದು ಕಂಡುಬರುವುದಿಲ್ಲ.(ನನ್ನ ಓದಿನ ಮಿತಿಯಲ್ಲಿ) ವೃತ್ತಿ ಮತ್ತು ಜಾತಿಯ ನೆಲೆಯಿಂದ ತಮ್ಮನ್ನು ಗುರುತಿಸಿಕೊಂಡಿರುವ ಹೆಸರುಗಳ ಉಲ್ಲೇಖ ನಮಗೆ ದೊರೆಯುತ್ತದೆ. ಉದಾಹರಣೆಗೆ:– ಅಂಬಿಗರ ಚೌಡಯ್ಯ, ಹಡಪದ ಅಪ್ಪಣ್ಣ, ಮಾದಾರ ಚೆನ್ನಯ್ಯ ಇನ್ನು ಮುಂತಾದವರು .

ಮೇಲೆ ಹೆಸರಿಸಲಾದ ತಳವರ್ಗದ ವಚನಕಾರ್ತಿಯರ ವಚನಗಳಲ್ಲಿ ವ್ರತಾಚಾರಣೆಗೆ ಸಂಬಂಧಿಸಿದಂತೆ ಹಲವು ಸಾಮ್ಯತೆಯ ವಿಚಾರಗಳು ಕಂಡುಬಂದಿರುವುದು ಗಮನಾರ್ಹ ಸಂಗತಿಯಾಗಿದೆ. ಅಲ್ಲದೇ ಕಾಯಕ ನಿಷ್ಠೆ ಮತ್ತು ವ್ರತಾಚಾರಣೆಗೆ ಸಂಬಂಧಿಸಿದಂತೆ ನಿರೂಪಿಸುವಾಗ ಬಳಸಿರುವ ಪಾರಿಭಾಷಿಕ ಪದಗಳು ಒಂದೇ ಆಗಿರುವುದು ಭಾಷಿಕ ನೆಲೆಯಲ್ಲಿ ಬಹುಮುಖ್ಯ ಸಂಗತಿಯಾಗಿದೆ. ಸಂಕವ್ವೆ ,ಕೇತಲದೇವಿ, ಸೋಮಮ್ಮ, ಪುಣ್ಯಸ್ತ್ರೀ ಕಾಳವ್ವೆ, ಕದಿರ ಕಾಯಕದ ಕಾಳವ್ವೆ, ಪುಣ್ಯಸ್ತ್ರೀ ವೀರಮ್ಮ ಮೊದಲಾದ ವಚನಕಾರ್ತಿಯರು ವ್ರತಹೀನರ ಸಂಗಡ ಬೆರೆಯಬಾರದೆಂಬ ಸಾಮ್ಯತೆಯ ಅಂಶವನ್ನು ಎತ್ತಿ ಹಿಡಿದರೂ, ಭಾಷಿಕವಾಗಿ ಭಿನ್ನತೆಯನ್ನು ಸಾಧಿಸಿದ್ದಾರೆ.

ಉದಾಹರಣೆಗೆ ಪುಣ್ಯಸ್ತ್ರೀ ಕಾಳವ್ವೆ: 'ವ್ರತಹೀನನನೆರೆಯಲು ನರಕಕ್ಕೆ ಮೂಲ'

ಸೂಳೆ ಸಂಕವ್ವೆ: 'ವ್ರತಹೀನನರಿದು ಬೆರೆದಡೆ ಕಾದ ಕತ್ತಿಯಲಿ ಕೈ ಕಿವಿ ಮೂಗ ಕೊಯ್ವರಯ್ಯ'

ಕೇತಲದೇವಿ : 'ವ್ರತಹೀನನ ಬೆರೆಯಲಾಗದು ಬೆರೆದಡೆ ನರಕ ತಪ್ಪದು'

ಕೊಟ್ಟಣದ ಸೋಮಮ್ಮ: 'ವ್ರತಹೀನನನೆರೆಯ ನರಕವಲ್ಲದೆ ಮುಕ್ತಿಯಿಲ್ಲ' ಮುಂತಾದ ಸಾಲುಗಳನ್ನು ಈ ನಿಟ್ಟಿನಲ್ಲಿ ಗಮನಿಸಬಹುದು.

ಈ ಮೇಲಿನ ವಚನಕಾರ್ತಿಯರ ವಚನಗಳ ಅಂಕಿತನಾಮವನ್ನು ನೋಡುವುದಾದರೆ ಭಿನ್ನ ಬಗೆಯಲ್ಲಿ ಪ್ರತಿಯೊಬ್ಬರು ಇಟ್ಟು ಕೊಂಡಿರುವುದು ತಿಳಿಯುತ್ತದೆ.

ಸೂಳೆ ಸಂಕವ್ವೆ – ನಿರ್ಲಜ್ಜೇಶ್ವರಾ

ಪುಣ್ಯಸ್ತ್ರೀ ಕೇತಲಾದೇವಿ – ಕುಂಭೇಶ್ವರಾ

ಬಾಚಿ ಕಾಯಕದ ಬಸವಗಳ ಪುಣ್ಯಸ್ತ್ರೀ ಕಾಳವ್ವೆ – ಕಾಳೇಶ್ವರಾ

ಸಿದ್ಧ ಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆ – ಭೀಮೇಶ್ವರಾ

ಕಾಟಕೂಟಯ್ಯಗಳ ಪುಣ್ಯಸ್ತ್ರೀ ರೇಚವ್ವೆ – ನಿಜ ಶಾಂತೇಶ್ವರಾ

ಎಡೆ ಮಠದ ನಾಗಿದೇವಯ್ಯಗಳ ಪುಣ್ಯಸ್ತ್ರೀ ಮಸಣಮ್ಮ – ನಿಜಗುಣೇಶ್ವರಾ ಲಿಂಗ

ದಸರಯ್ಯಗಳ ಪುಣ್ಯಸ್ತ್ರೀ ವೀರಮ್ಮ – ಗುರು ಶಾಂತೇಶ್ವರಾ

ಕದಿರ ಕಾಯಕದ ಕಾಳವ್ವೆ – ಗುಮ್ಮೇಶ್ವರಾ

ಈ ಮೇಲಿನ ಅಂಕಿತನಾಮಗಳನ್ನು ಗಮನಿಸಿದಾಗ ತಿಳಿದುಬರುವುದೆಂದರೆ ಕೆಲವರು ತಾವು ಮಾಡುವ ಕಾಯಕವನ್ನು ಹಿನ್ನೆಲೆಯಾಗಿಸಿಕೊಂಡು ಅಂಕಿತವನ್ನಿರಿಸಿಕೊಂಡಿರುವುದು ಇನ್ನು ಕೆಲವರು ಇಷ್ಟಲಿಂಗದ ಹೆಸರಿನಲ್ಲಿಟ್ಟು ಕೊಂಡಿರುವುದು ಕಂಡುಬರುತ್ತದೆ. ಅಂಕಿತನಾಮದ ಮುಖೇನ ವಚನಕಾರ್ತಿಯರ ವಚನಗಳನ್ನು ಸುಲಭವಾಗಿ ಗುರುತಿಸಬಹುದು. ಇವರ ವಚನಗಳಲ್ಲಿ ನಿರೂಪಣೆಗೊಂಡ ಸಾದೃಶ್ಯತೆಯೆಂದರೆ ನೇರನುಡಿ. ಭಾಷೆಯ ಹಿನ್ನೆಲೆಯಲ್ಲಿ ಇದು ಬಹಳ ಮಹತ್ವವಾದದ್ದು. ಎನಿಸುತ್ತದೆ. ಉದಾಹರಣೆಗೆ:– 'ಕಾಗೆಯ ನಾಯ ತಿಂದವರಿಲ್ಲ ವ್ರತಭ್ರಷ್ಟನ ಕೂಡಿದವರಿಲ್ಲ' ಎನ್ನುವ ಮಸಣಮ್ಮಳ ನುಡಿ ಹರಿತವಾದುದು. ಈಕೆ ವ್ರತಹೀನರ ಸಂಬಂಧ ಬೆಳೆಸಬಾರದೆಂಬುದಕ್ಕೆ ಮೇಲಿನ ಮಾತುಗಳನ್ನಾಡುತ್ತಾಳೆ. ಕಾದಕತ್ತಿಯಲಿ ಕೈ ಕಿವಿ ಮೂಗ ಕೊಯ್ವರಯ್ಯಾ ಎಂಬ ಸಂಕವ್ವೆಯ ವಚನದ ಸಾಲಿನಲ್ಲಿ 'ಕಾದಕತ್ತಿ' ಎಂಬ ಪದ ಪ್ರಯೋಗದ ಬಗ್ಗೆ ಗಮನಿಸಿದಾಗ ಅದು ಹರಿತವಾದ ಎಂಬ ಅರ್ಥದ ಜೊತೆಗೆ (ಕಾದ) ತೀವ್ರತೆಯ ಪ್ರಮಾಣವನ್ನು ಎಂಬ ಅರ್ಥವನ್ನು ಗ್ರಹಿಸಬೇಕು. ಅಲ್ಲದೇ ಶಿಕ್ಷೆಯ ಸ್ವರೂಪವನ್ನು ಅರಿಯಬಹುದು.

ಈ ಮೇಲ್ಕಂಡ ತಳವರ್ಗದ ವಚನಕಾರ್ತಿಯರು ಬೇರೆ ಬೇರೆ ಕಾಯಕ ನಿರ್ವಹಿಸುತ್ತಾ ಭಕ್ತಿಯ ಪರಾಕಾಷ್ಠತೆಯನ್ನು ತಲುಪಿದ್ದನ್ನು ಅವರ ವಚನಗಳು ಪ್ರಸ್ತುತ ಪಡಿಸುತ್ತವೆ. ಅಲ್ಲದೇ ಇವರ ವಚನಗಳು ವ್ರತನಿಷ್ಠರು ಮತ್ತು ವ್ರತಹೀನರ ಬಗ್ಗೆ ಕಾಯಕನಿಷ್ಠೆಯ ಮೂಲಕ ಇಷ್ಟಲಿಂಗವನ್ನು ಕಾಣುವ ಬಯಕೆಯನ್ನು ಮುಂದಿಡುತ್ತವೆ. "ಪುರುಷರಂತೆಯೇ ಈ ಸ್ತ್ರೀಯರು ವಚನ ರಚನೆಗೆ ಕೈ ಹಾಕಿದ್ದು ಅವರಿಗೆ ದೊರಕಿದ ಆಲೋಚನಾ ಸ್ವಾತಂತ್ರ್ಯದ ಚಿಹ್ನೆಯಾಗಿದೆ"[6] ಎಂದು ಹೇಳುವ ಎಂ.ಚಿದಾನಂದ ಮೂರ್ತಿಯವರ ಅಭಿಪ್ರಾಯ ಒಪ್ಪತಕ್ಕದ್ದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ, ತಳವರ್ಗದ (ಪ್ರಾತಿನಿಧಿಕ) ವಚನಕಾರ್ತಿಯರ ವಚನಗಳು ವ್ರತಾಚಾರಣೆಯ ಮಹತ್ವವನ್ನು ವಿಶೇಷವಾಗಿ ಪರಿಗಣಿಸಿವೆ. ಅಲ್ಲದೇ ಭಾಷಿಕ ಹಿನ್ನೆಲೆಯಲ್ಲಿ ನೋಡುವುದಾದರೆ, ಕ್ಲಿಷ್ಟವಲ್ಲದ ಪದಪ್ರಯೋಗ, ನೇರನುಡಿಯನ್ನು ಪ್ರಯೋಗಿಸಿವೆ. ವಚನಗಳನ್ನು

[6] ಎಂ. ಚಿದಾನಂದ ಮೂರ್ತಿ. ವಚನ ಸಾಹಿತ್ಯ, ಪು.ಸಂ.135

ನಿರೂಪಿಸುವ ವಿಧಾನದಲ್ಲಿ ಭಿನ್ನತೆಯಿದ್ದರೂ, ಭಾಷಿಕ ನೆಲೆಯಲ್ಲಿ ಸಾಮ್ಯತೆಯನ್ನು ಪ್ರಕಟಿಸಿವೆ. ಎಂ.ಚಿದಾನಂದ ಮೂರ್ತಿಯವರ ಪ್ರಕಾರ– "ವಚನ ಒಂದು ಪ್ರಕಾರ ಎಂದು ಭಾವಿಸಿ ಹೇಳುವುದಾದರೆ, ಪ್ರಾಚೀನ ಸಾಹಿತ್ಯದಲ್ಲಿ ಕನ್ನಡ ಭಾಷೆ ತನ್ನದು ಎಂದು ಹೇಳಿಕೊಳ್ಳಬಹುದಾದ್ದು ವಚನವೆಂದೇ ಕಾಣುತ್ತದೆ. ಇಂಥ ಪ್ರಕಾರ ಇತರ ಭಾಷೆಗಳಲ್ಲಿದ್ದಂತೆ ತೋರುವುದಿಲ್ಲ"[7] ಎನ್ನುವ ಮಾತಿನಲ್ಲಿ ಅಭಿಮಾನ ಮತ್ತು ಹೆಮ್ಮೆ ಪ್ರಕಟಗೊಂಡಿವೆ.

**ಪರಾಮರ್ಶನ ಗ್ರಂಥಗಳು**


- ಚಿದಾನಂದ ಮೂರ್ತಿ ಎಂ.. (1975). *ವಚನ ಸಾಹಿತ್ಯ.* ಬೆಂಗಳೂರು ವಿಶ್ವವಿದ್ಯಾಲಯ.
- *ಕನ್ನಡ ವಿಷಯ ವಿಶ್ವಕೋಶ–ಸಂ 2.* (2007). ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ.
- ಪುಷ್ಪ ಎಚ್.ಎಲ್. (2015). *ವಚನ ಚಿಂತನ ಮಾಲೆ.* ಶ್ರೀ ಬಸವ ಅಧ್ಯಯನ ಪೀಠ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ.
- ರಂಜಾನ್ ದರ್ಗಾ (2018). *ವಚನ ಬೆಳಕು ನೂರೊಂದು ವಚನ–ವಿಶ್ಲೇಷಣೆ.* ಲಡಾಯಿ ಪ್ರಕಾಶನ.
- ವೀರಣ್ಣದಂಡೆ. (ಸಂ.). (2007). *ವಚನ ಸಾಹಿತ್ಯ ಮೀಮಾಂಸೆ.* ಬಸವ ಸಮಿತಿ.


[7] ಕನ್ನಡ ವಿಷಯ ವಿಶ್ವಕೋಶ–ಪರಿಷ್ಕೃತ–ಸಂ.2. ಪು.ಸಂ 885

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January-February 2024, Pp. 117-120
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಸಮಾನತೆಯ ಹರಿಕಾರ ಆಧುನಿಕ ಭಾರತದ ನಿರ್ಮಾತೃ ಡಾ. ಬಿ.ಆರ್.ಅಂಬೇಡ್ಕರ್

**ಡೀನಾ ಪಿ.ಪಿ.**
ಉಪನ್ಯಾಸಕರು, ರಾಜ್ಯಶಾಸ್ತ್ರ ಅಧ್ಯಯನ ವಿಭಾಗ, ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜು, ಮಡಿಕೇರಿ.

***Abstract:***

*"I like the religion that teaches liberty, equality and fraternity" ಎಂಬ ಅರ್ಥಪೂರ್ಣ ಮಾತನ್ನು ಹೇಳಿದ ಭಾರತದ ಸಂವಿಧಾನ ಶಿಲ್ಪಿ, ಸಮಾನತೆಯ ಹರಿಕಾರ ದಲಿತರ ಆಶಾ ಜ್ಯೋತಿ, ಮಾನವೀಯ ಮೌಲ್ಯಗಳಿಗಾಗಿ ಅಹರ್ನಿಶಿ ದುಡಿದ ಪುರುಷಸಿಂಹ ಭಾರತಮಾತೆಯ ಹೆಮ್ಮೆಯ ಪುತ್ರ ಭಾರತ ರತ್ನ ಡಾ.ಭೀಮರಾವ್ ರಾಮ್‌ಜಿ ಅಂಬೇಡ್ಕರ್. ಇವರು ಭಾರತ ಕಂಡ ಅತಿಶ್ರೇಷ್ಠ ನಾಯಕ. 'ಮೂರು ಸಾಗರ, ನೂರು ಮಂದಿರ, ದೈವ ಸಾವಿರ ಇದ್ದರೆ, ಗಂಗೆ ಇದ್ದರೆ, ಸಿಂಧು ಇದ್ದರೆ ಗಿರಿಹಿಮಾಲಯವಿದ್ದರೆ ವೇದವಿದ್ದರೆ ಭೂಮಿ ಇದ್ದರೆ ಘನಪರಂಪರೆ ಇದ್ದರೆ ಏನು ಸಾರ್ಥಕ ಮನೆಯ ಮಕ್ಕಳೇ ಮಲಗಿ ನಿದ್ರಿಸುತ್ತಿದ್ದರೆ' ಎಂಬ ಸ್ವಾಮಿ ವಿವೇಕಾನಂದರ ಮಾತಿನಂತೆ ಸಹಸ್ರಾರು ವರ್ಷಗಳಿಂದ ದಬ್ಬಾಳಿಕೆ ಶೋಷಣೆಗೆ ಒಳಗಾದ ದಲಿತ ಸಮಾಜವನ್ನು ಮೇಲೆತ್ತುವ ಪ್ರಯತ್ನವನ್ನು ಯಾರೂ ಮಾಡದೇ ಇದ್ದಂತಹ ಸಮಾಜದ ನಡುವೆ ಜಾತಿ ಎಂಬ ಎರಡಕ್ಷರದ ಕಾರಣವನ್ನು ನೀಡಿ ದುರ್ಬಲರನ್ನು ಶೋಷಿಸುತ್ತಿದ್ದ ಸಮಾಜವನ್ನು ಎದುರಿಸುವಲ್ಲಿ ಏಕ ಚಿತ್ತರಾಗಿ ದೃಢಮನಸ್ಸಿನಿಂದ ಕಾರ್ಯೋನ್ಮುಖರಾದ ಮಹಾನ್ ಚೇತನ ಬಾಬಾ ಸಾಹೇಬ ಅಂಬೇಡ್ಕರ್‌ರವರು.*

***Keywords:*** *ಅಂಬೇಡ್ಕರ್, ಸಮಾನತೆ, ಶೋಷಣೆ, ಆಧುನಿಕ ಭಾರತದ ನಿರ್ಮಾತೃ.*

**ಪೀಠಿಕೆ**

ಶಿಕ್ಷಣ, ಸಂಘಟನೆ, ಹೋರಾಟ ಎಂಬ ಮಾರ್ಗೋಪಾಯದೊಂದಿಗೆ ಸಮಾಜದ ಎಲ್ಲಾ ಸಮಸ್ಯೆಗಳಿಗೂ ಶಿಕ್ಷಣವೇ ಸಂಜೀವಿನಿ ಎಂಬುದನ್ನು ತಮ್ಮ ದೂರ ದೃಷ್ಟಿಯಿಂದ ಅರಿತಿದ್ದ ಅಂಬೇಡ್ಕರ್‌ರವರು ಯಾವ ಜನಾಂಗವೇ ಆಗಲಿ ಮುಂದುವರಿಯಲು 'ಶಿಕ್ಷಣ ಎಂಬುದು ಹುಲಿಯ ಹಾಲಿದ್ದಂತೆ ಅದನ್ನು ಕುಡಿದವರು ಘರ್ಜಿಸಲೇಬೇಕು' ಎಂಬ ವಾಸ್ತವಾಂಶದ ಅರಿವನ್ನು ನೀಡುವ ಮೂಲಕ ಅಸ್ಪೃಶ್ಯತೆ ಹುಟ್ಟಿ ಬೆಳೆದಿದ್ದ ಜಾತಿಹೀನನ ಮನೆಯಲ್ಲಿ ಜ್ಯೋತಿಯಾಗಿದ್ದ ಅಂಬೇಡ್ಕರ್ ಶೋಷಿತರಿಗೆ ಶಿಕ್ಷಣದ ಸೌಲಭ್ಯವನ್ನು ಒದಗಿಸುವಲ್ಲಿ ಅಪಾರವಾಗಿ ಶ್ರಮಿಸಿದರು.

**ಅದ್ವಿತೀಯ ನಾಯಕರಾಗಿ ಡಾ. ಬಿ. ಆರ್. ಅಂಬೇಡ್ಕರ್**

ಬ್ರಿಟಿಷರ ಆಡಳಿತದ ವಿರುದ್ಧ ದೇಶದ ಉದ್ದಗಲಕ್ಕೂ ಅಸಂತುಷ್ಟಿ, ಆಕ್ರೋಶ ಭುಗಿಲೆದ್ದ ಸಂದರ್ಭ ಈ ಕಾವನ್ನು ದಮನಗೊಳಿಸುವ ಉದ್ದೇಶದಿಂದ ಬ್ರಿಟಿಷ್ ಸರ್ಕಾರ ಸೈಮನ್ ಆಯೋಗವನ್ನು ನೇಮಿಸಿತು. ಆದರೆ ಕಾಂಗ್ರೆಸ್ ಅದನ್ನು ಬಹಿಷ್ಕರಿಸಿ ಸಂವಿಧಾನವನ್ನು ರೂಪಿಸಲು ಮೋತಿಲಾಲ್ ನೆಹರು ಅಧ್ಯಕ್ಷತೆಯಲ್ಲಿ ಒಂದು

***Please cite this article as:*** ಡೀನಾ ಪಿ.ಪಿ. (2024). ಸಮಾನತೆಯ ಹರಿಕಾರ ಆಧುನಿಕ ಭಾರತದ ನಿರ್ಮಾತೃ ಡಾ. ಬಿ.ಆರ್.ಅಂಬೇಡ್ಕರ್. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 2(6), 117–120.

ಸಮಿತಿಯನ್ನು ಅದು ರಚಿಸಿತು. ಅದು ರಚಿಸಿದ ಸಂವಿಧಾನದಲ್ಲಿ ದಲಿತ ವರ್ಗಗಳಿಗೆ ಪ್ರಾತಿನಿಧ್ಯ ಕೊಡುವ ಯಾವ ಉಪಬಂಧವನ್ನು ಕಲ್ಪಿಸಿರಲಿಲ್ಲ. ಅಷ್ಟೇ ಅಲ್ಲ ಸಂವಿಧಾನ ರಚನಾ ಪೂರ್ವದಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ತಿಳಿಸುವುದಕ್ಕಾಗಿ ಮುಸ್ಲಿಂ, ಪಾರ್ಸಿ, ಕ್ರೈಸ್ತ, ಸಿಖ್, ಆಂಗ್ಲೋ ಇಂಡಿಯನ್ ಮತ್ತು ಬ್ರಾಹ್ಮಣೋತ್ತರ ಸಂಘ ಸಂಸ್ಥೆಗಳನ್ನು ಕಾಂಗ್ರೆಸ್ ಆಹ್ವಾನಿಸಿತು. ಆದರೆ ದಲಿತ ಸಂಸ್ಥೆಗಳನ್ನು ಆಹ್ವಾನಿಸಲಿಲ್ಲ. ಇದರಿಂದ ಅಂಬೇಡ್ಕರ್‌ರವರಿಗೆ ತೀವ್ರ ಅಸಮಾಧಾನವಾಯಿತು ಅಂಬೇಡ್ಕರ್ ಅವರು ಸೈಮನ್ ಆಯೋಗದೊಂದಿಗೆ ಸಂಪೂರ್ಣ ಸಹಕಾರ ನೀಡಿದರು. ಸೈಮನ್ ಆಯೋಗದೊಡನೆ ಸಹಕರಿಸಿದ್ದರಿಂದ ಕೆಲವರು ಅಂಬೇಡ್ಕರನ್ನು ದೇಶದ್ರೋಹಿ ಎಂದು ಬ್ರಿಟಿಷರ ಬಾಲ ಬಡುಕನೆಂದು ಕರೆದರು. ತಮ್ಮ ಗುರಿ ಮತ್ತು ಉದ್ದೇಶ ಸ್ಪಷ್ಟ ಮತ್ತು ಪ್ರಾಮಾಣಿಕವಾಗಿದ್ದರಿಂದ ಅವರು ಈ ಬೇಜವಾಬ್ದಾರಿ ಆರೋಪಗಳಿಂದ ಧೃತಿಗೆಡಲಿಲ್ಲ ದಲಿತ ವರ್ಗದವರ ಹಿತರಕ್ಷಣೆಗಾಗಿ ಹಲವು ಅಂಶಗಳನ್ನು ಆಯೋಗದ ಮುಂದಿರಿಸಿದರು.

ದಲಿತರನ್ನು ಹಿಂದೂ ಸಮಾಜದಿಂದ ಪ್ರತ್ಯೇಕವಾದ ವಿಶಿಷ್ಟ ಅಲ್ಪಸಂಖ್ಯಾತ ಜನಾಂಗವೆಂದು ಪರಿಗಣಿಸಬೇಕು. ದಲಿತರು ಶೈಕ್ಷಣಿಕವಾಗಿ ಹಿಂದುಳಿದವರು, ಆರ್ಥಿಕವಾಗಿ ಕಡುಬಡವರು ಸಾಮಾಜಿಕವಾಗಿ ದಾಸ್ಯಕ್ಕೊಳಗಾದವರು ಆದ್ದರಿಂದ ಅವರಿಗೆ ಹೆಚ್ಚಿನ ರಾಜಕೀಯ ರಕ್ಷಣೆ ಬೇಕು. ಅವರಿಗಾಗಿ ಚುನಾವಣೆಗಳಲ್ಲಿ ಸ್ಥಾನಗಳನ್ನು ಕಾಯ್ದಿರಿಸಬೇಕು. ಅಥವಾ ಪ್ರತ್ಯೇಕ ಚುನಾಯಿತ ಸಮುದಾಯವನ್ನು ಸೃಜಿಸಬೇಕು ತಮ್ಮ ಸಂಖ್ಯೆಗನುಗುಣವಾಗಿ ತಮಗೆ ಪ್ರಾತಿನಿಧ್ಯಬೇಕು ಎಂದು ವಾದಿಸುವ ಮೂಲಕ ಸಮಾಜದ ಧ್ವನಿಯಾಗಿ ಡಾ. ಬಿ.ಆರ್. ಅಂಬೇಡ್ಕರ್ ನಿಂತರು.

ಭೂ ರಹಿತರಿಗೆ ಭೂಮಿಯನ್ನು ಕೊಡಿಸುವುದಕ್ಕಾಗಿ, ಕಾರ್ಮಿಕರಿಗೆ ಹೆಚ್ಚು ಸೌಲಭ್ಯವನ್ನು ದೊರಕಿಸುವುದಕ್ಕಾಗಿ ಬಿಡುವಿಲ್ಲದೆ ಶ್ರಮಿಸಿದರು. ದೈಹಿಕ ಆಯಾಸ ಮಾನಸಿಕ ಶ್ರಮ ಯಾವುದನ್ನೂ ಲೆಕ್ಕಿಸಲಿಲ್ಲ. ಹಳ್ಳಿ ಹಳ್ಳಿಗಳನ್ನು ಸುತ್ತುವ ಮೂಲಕ ದಲಿತ ವಿದ್ಯಾರ್ಥಿಗಳಿಗೆ ಶಾಲೆಗಳನ್ನು, ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು.

ಸಭೆಗಳಲ್ಲಿ ಶೋಷಿತರ ಪರವಾಗಿ ಅಂಬೇಡ್ಕರ್ ಅವರು ಮಾಡುವ ಪರಿಣಾಮಕಾರಿ ಸಿಂಹನುಡಿಯ, ಭಾಷಣಗಳು ಎದುರು ನಿಂತವನ ಎದೆ ನಡಗಿಸುವಂತಿರುತ್ತಿತ್ತು ಸಾರ್ವಭೌಮ ಸರ್ಕಾರದ ಮುಂದೆ ಅಸ್ಪೃಶ್ಯರ ಬೇಡಿಕೆಗಳನ್ನು ಮುಂದಿಡಲು ಪ್ರಥಮ ಅವಕಾಶ ಸಿಕ್ಕಿದ ಸಂದರ್ಭಗಳಲ್ಲಿ ಅಂಬೇಡ್ಕರ್ ಅವರು *"ಭಾರತದಲ್ಲಿ ಗುಲಾಮರಿಗಿಂತ ನಿಕೃಷ್ಟ ಬಾಳ್ವೆಯನ್ನು ಮಾಡುತ್ತಿರುವ ದಲಿತ ಜನಾಂಗದ ಪರವಾಗಿ ನಾನು ಮಾತನಾಡುತ್ತಿದ್ದೇನೆ. ಭಾರತದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ಇಪ್ಪತ್ತು ಜನ ದಲಿತರು. ಈ ಸಂಖ್ಯೆ ಇಡೀ ಇಂಗ್ಲೆಂಡ್ ಅಥವಾ ಫ್ರಾನ್ಸಿನ ಜನಸಂಖ್ಯೆಗಿಂತ ದೊಡ್ಡದು. ಇವರೆಲ್ಲರ ಪರವಾಗಿ ನಾನು ಹೇಳುತ್ತೇನೆ. ಈಗಿರುವ ಸರ್ಕಾರ ಬದಲಾಗಿ ಜನತಾ ಸರ್ಕಾರ ಸ್ಥಾಪಿತವಾಗಬೇಕು. ಸಾವಿರಾರು ವರ್ಷಗಳಿಂದ ನಾವು ದಬ್ಬಾಳಿಕೆಗೆ ಗುರಿಯಾಗಿದ್ದೇವೆ ನಮ್ಮ ಅಧಃಪತನವಾಗಿದೆ. ಬ್ರಿಟಿಷ್ ಸರ್ಕಾರ ನೂರಾರು ವರ್ಷಗಳ ಕಾಲ ಆಡಳಿತ ನಡೆಸಿದರೂ ನಮ್ಮ ಉನ್ನತಿಗಾಗಿ ಏನು ಮಾಡಲಿಲ್ಲ, ನಮ್ಮ ಸ್ಥಿತಿ ಸುಧಾರಿಸಲಿಲ್ಲ. ಬ್ರಿಟಿಷರು ಬರುವುದಕ್ಕಿಂತ ಮುಂಚೆ ನಮಗೆ ದೇವಾಲಯಗಳಿಗೆ ಪ್ರವೇಶವಿರಲಿಲ್ಲ. ಸಾರ್ವಜನಿಕ ಜಲಾಶಯಗಳ ನೀರನ್ನು ಬಳಸುವಂತಿರಲಿಲ್ಲ. ಸೈನ್ಯಕ್ಕೆ ಸೇರಲು ಹಕ್ಕಿರಲಿಲ್ಲ. ನಮಗೆ ಬೇಕಾದ ವಿದ್ಯೆಯನ್ನು ಕಲಿಯಲು, ಇಷ್ಟವಿರುವ ವೃತ್ತಿಯನ್ನು ಕೈಗೊಳ್ಳಲು ಸ್ವಾತಂತ್ರ್ಯವಿರಲಿಲ್ಲ. ಬ್ರಿಟಿಷರು ಬಂದಮೇಲೆ ಈ ಸಮಸ್ಯೆಯನ್ನು ಪರಿಹರಿಸಿದರೆ? ಇಲ್ಲ... ಇಲ್ಲ ಬ್ರಿಟೀಷರಿಗೆ ತಮ್ಮ ಉಳಿವಿನ ಸಮಸ್ಯೆ ಮಹತ್ವದಾಗಿತ್ತೇ ಹೊರತು ಭಾರತದ ಪ್ರಜೆಗಳ ದೈನಂದಿನ ಸಮಸ್ಯೆ ಮಹತ್ವದೆನಿಸಿರಲಿಲ್ಲ".*

ನಮ್ಮ ಆರ್ಥಿಕ ರಾಜಕೀಯ ಸ್ಥಾನಮಾನಗಳು ಉತ್ತಮಗೊಂಡಿಲ್ಲ. ಉತ್ತಮಗೊಳಿಸುವ ಯಾವ ಪ್ರಯತ್ನವನ್ನು ಸರ್ಕಾರ ಮಾಡಿಲ್ಲ. ಆದ್ದರಿಂದ ಇಂತಹ ಸರ್ಕಾರದಿಂದ ನಮಗೆ ಕಿಂಚಿತ್ತೂ ಪ್ರಯೋಜನವಿಲ್ಲ ನಮ್ಮ ಹಿತ ರಕ್ಷಿಸುವ ನಮ್ಮೆಲ್ಲರ ನೋವನ್ನು ತನ್ನದೇ ನೋವೆಂದು ಅನುಭವಿಸುವ ನಮ್ಮದೇ ಆದ ಸರ್ಕಾರ ನಮಗೆ ಬೇಕು ಎಂದು ನೇರ ನುಡಿಗಳ ಮೂಲಕ ತಮ್ಮ ವಾಕ್ ಪ್ರವಾಹದ ಮೂಲಕ ಬ್ರಿಟಿಷ್ ಪ್ರತಿನಿಧಿಗಳನ್ನು ತಲ್ಲಣಗೊಳಿಸಿದರು. ದಲಿತ ನಾಯಕನ ಈ ನಿರ್ಭಯ ಅಭಿಪ್ರಾಯ ಮಂಡನೆ ಮುಂದೆ ಅನೇಕ ಶೋಷಿತರು ಈ ಸಮಾಜದಲ್ಲಿ ಮೇಲುಸ್ತರದ ಜೀವನ ನಡೆಸಲು ದಾರಿ ಮಾಡಿ ಕೊಟ್ಟಿತು.

**ಅಂಬೇಡ್ಕರ್‌ರವರ ಜೀವಮಾನ ಸಾಧನೆಗಳು**

ವಿಪರ್ಯಾಸವೆಂದರೆ, ನಾವುಗಳು ಇಂದು ಡಾ. ಬಿ.ಆರ್. ಅಂಬೇಡ್ಕರ್ ಎಂಬ ಹೆಸರನ್ನು ಕೇಳಿದ ಕೂಡಲೇ ಅವರನ್ನು ಸ್ಮರಿಸುವಾಗ "ಅವರೊಬ್ಬ ಮೀಸಲಾತಿಯ ಹರಿಕಾರ" ಸಂವಿಧಾನದ ಶಿಲ್ಪಿ ಎಂದು ಕೈ ತೊಳೆದುಕೊಂಡುಬಿಡುತ್ತೇವೆ. ಕಾರಣ, ಅವರು ಯಾವ ಹಿನ್ನೆಲೆಯಿಂದ ಬಂದಿದ್ದಾರೆ? ದೇಶಕ್ಕಾಗಿ ಅವರು ನೀಡಿದ ಕೊಡುಗೆಗಳೇನು? ಮಾಡಿದ ಮಹಾನ್ ಕಾರ್ಯಗಳೇನು? ಎಂಬುದನ್ನು ಅರಿತುಕೊಳ್ಳದಷ್ಟೂ ಮೂರ್ಖತನದ ಪರಮಾವಧಿಯಲ್ಲಿ ಸಿಲುಕಿಕೊಂಡಿದ್ದೇವೆ.

ಇವರು ಸಾಧಿಸಿದ ಮಹಾನ್ ಕಾರ್ಯಗಳನ್ನು ಅಧ್ಯಯನ ಮಾಡುತ್ತಾ ಹೋದರೆ ನಮಗೆ ಒಬ್ಬ ವ್ಯಕ್ತಿಯಿಂದ ಇಷ್ಟೆಲ್ಲಾ ಸಾಧ್ಯವೇ ಅನಿಸಿಬಿಡುತ್ತದೆ. ಅಂಬೇಡ್ಕರ್‌ರವರು ಬರೆದಿರುವ *“The Problem of Rupee: Its origin and its solution*” ಪುಸ್ತಕವನ್ನು ಆಧಾರವಾಗಿಟ್ಟುಕೊಂಡು ರಾಯಲ್ ಕಮಿಷನ್ ಅಥವಾ ಹಿಲ್ಟನ್‌ಯಂಗ್ ಕಮೀಷನ್ ಭಾರತದಲ್ಲಿ RBI ಸ್ಥಾಪಿಸಲು ಶಿಫಾರಸ್ಸು ನೀಡಿತು. ಎರಡನೇ ಮಹಾಯುದ್ಧದ ನಂತರ ಆರ್ಥಿಕ ಯೋಜನೆಗಳಿಗಾಗಿ RCC (Reconstruction committee of council) ಸ್ಥಾಪಿಸಿ ಕೃಷಿ, ಕೈಗಾರಿಕೆ, ಮತ್ತು ರಕ್ಷಣೆಗೆ ಹೆಚ್ಚು ಒತ್ತು ನೀಡಿದರು. ಬಾಬಾ ಸಾಹೇಬ್ ಡಾ.ಬಿ.ಆರ್.ಅಂಬೇಡ್ಕರ್ ರವರ ಮತ್ತೊಂದು ಕೃತಿ *“The Evolution of Provincial Finance in British India”* ಪುಸ್ತಕವನ್ನು ರಚಿಸಿದ್ದರು. ಇದರ ಆಧಾರದ ಮೇಲೆ ಭಾರತದ 13 ಹಣಕಾಸು ಆಯೋಗಗಳು ಕೆಲಸ ನಿರ್ವಹಿಸಿವೆ. ಇದಲ್ಲದೆ ಮಾನವಶಾಸ್ತ್ರ, ಪ್ರಾಣಿಶಾಸ್ತ್ರ ಮತ್ತು ಸಸ್ಯಶಾಸ್ತ್ರ ಬಗ್ಗೆ ಅಪಾರವಾದ ಜ್ಞಾನವನ್ನು ಹೊಂದಿದ್ದರು. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ “ವಿಶ್ವದ ನಿರ್ಮಾತೃಗಳು” ಎಂಬ ಶೀರ್ಷಿಕೆಯಡಿಯಲ್ಲಿ ಜಾಗತಿಕ ಸಮೀಕ್ಷೆಯನ್ನು ಮಾಡಿ 100 ಮಹಾನ್ ವ್ಯಕ್ತಿಗಳ ಪಟ್ಟಿ ಮಾಡಿತು. ಅದರಲ್ಲಿ 4ನೇ ಹೆಸರು ಅಂಬೇಡ್ಕರ್‌ರದ್ದು. ಜಗತ್ತಿನ ಅತ್ಯಂತ ಬೃಹತ್ ಖಾಸಗಿ ಗ್ರಂಥಾಲಯ ಹೊಂದಿರುವ ದಾಖಲೆ ಅಂಬೇಡ್ಕರ್‌ರವರ ಹೆಸರಿನಲ್ಲಿದೆ. ಮುಂಬಯಿಯ ರಾಜಗೃಹದಲ್ಲಿರುವ ಈ ಗ್ರಂಥಾಲಯದಲ್ಲಿ 5000ಕ್ಕಿಂತಲೂ ಹೆಚ್ಚು ಪುಸ್ತಕಗಳು ಇವೆ.

2016ರಲ್ಲಿ ವಿಶ್ವಸಂಸ್ಥೆ ಅಂಬೇಡ್ಕರ್‌ರವರ ಜನ್ಮದಿನವನ್ನು ಅವರು ಕೊಟ್ಟಿರುವ ಕೊಡುಗೆಯ ಆಧಾರದ ಮೇಲೆ ***“ವಿಶ್ವಜ್ಞಾನ ದಿನ”*** ಎಂದು ಆಚರಿಸಲು ಪ್ರಾರಂಭಿಸಿದೆ. ಅಂಬೇಡ್ಕರ್‌ರವರು ಬರೆದಿರುವ *Buddha and his Dhamma* ಕೃತಿಯು ಭಾರತೀಯ ಬೌದ್ಧರ ಧರ್ಮಗ್ರಂಥವಾಗಿದೆ. ಲಂಡನ್ ಸ್ಕೂಲ್ ಆಫ್ ಎಕಾನಾಮಿಕ್ಸ್ ನೀಡಿದ “Doctor of all science” ಪದವಿ ಪಡೆದ ಜಗತ್ತಿನ ಮೊದಲ ಮತ್ತು ಏಕೈಕ ವ್ಯಕ್ತಿ ಅಂಬೇಡ್ಕರ್ ಇಲ್ಲಿಯವರೆಗೂ ಬಹಳಷ್ಟು ವಿದ್ಯಾರ್ಥಿಗಳು ಈ ಪದವಿ ಪಡೆಯಲು ಪ್ರಯತ್ನಿಸುತ್ತಿದ್ದಾರೆ. ಆದರೆ ಅದು ಸಾಧ್ಯವಾಗಿಲ್ಲ. ಅಂಬೇಡ್ಕರ್ ಈ ಪದವಿ ಪಡೆಯಲು 8 ವರ್ಷಗಳ ಅಧ್ಯಯನವನ್ನು ಕೇವಲ 2 ವರ್ಷ 3

ತಿಂಗಳಿನಲ್ಲಿ ಮುಗಿಸಿದ್ದರು. ಜಗತ್ತಿನ ಎಲ್ಲಾ ಧರ್ಮಗಳ ತುಲನಾತ್ಮಕ ಅಧ್ಯಯನ ಮಾಡಿದ್ದರು. 64 ವಿಷಯಗಳಲ್ಲಿ ಪರಿಣತಿ ಹಾಗೂ 9 ಭಾಷೆಗಳಲ್ಲಿ ಪ್ರಭುತ್ವವಿತ್ತು.

"ಮನುಷ್ಯನಾಗಿ ಹುಟ್ಟಿದ ಬಳಿಕ ನಿನ್ನ ಹಿಂದೆ ಅಳಿಸಲಾಗದ ಒಳ್ಳೆಯ ಗುರುತುಗಳನ್ನು ಬಿಟ್ಟು ಇಲ್ಲಿಂದ ನಿರ್ಗಮಿಸು" ಎಂಬ ಸ್ವಾಮಿ ವಿವೇಕಾನಂದರ ಮಾತಿನಂತೆ, ಸ್ವಾರ್ಥರಹಿತ ಬದುಕನ್ನು ನಡೆಸಿದಂತಹ ಜ್ಞಾನಪಿಪಾಸುವಾದಂತಹ ಅಂಬೇಡ್ಕರ್‌ವರದ್ದು ಮೇರು ವ್ಯಕ್ತಿತ್ವ ಈ ಮಹಾನ್ ಚೇತನ ಆಧುನಿಕ ಭಾರತದ ಅಭಿವೃದ್ಧಿಗೆ ನೀಡಿರುವ ಕೊಡುಗೆಗಳು ಅಜರಾಮರ. ಆದುದರಿಂದಲೇ ಇವರನ್ನು 'ಆಧುನಿಕ ಭಾರತದ ನಿರ್ಮಾತೃ' ಎಂದು ಕರೆಯುತ್ತಾರೆ.

**ಪರಾಮರ್ಶನ ಗ್ರಂಥಗಳು**


- *ಡಾ.ಬಾಬಾ ಸಾಹೇಬ್‌ರವರ ಸಮಗ್ರ ಬರೆಹಗಳು ಮತ್ತು ಭಾಷಣಗಳು.* (2015). ಕನ್ನಡ ಮತ್ತು ಸಂಸ್ಕೃತಿ ಇಲಾಖೆ.
- ಕೃಷ್ಣಮೂರ್ತಿ ಸಿ.ಎನ್. (2016). *ಡಾ. ಬಿ. ಆರ್. ಅಂಬೇಡ್ಕರ್ ಮತ್ತು ಡಾ. ರಾಮಮನೋಹರ ಲೋಹಿಯಾ.* ಇಂದಿರಾ ಪ್ರಕಾಶನ.
- ಲಕ್ಕಪ್ಪ ಗೌಡ ಎಲ್ ಜೆ. (2020). *ದಲಿತ ಸೂರ್ಯ.* ತನುಮನ ಪ್ರಕಾಶನ.
- ಲಕ್ಕಪ್ಪ ಗೌಡ ಎಲ್ ಜೆ. (2003). *ದಲಿತ ಸೂರ್ಯ: ಡಾ. ಅಂಬೇಡ್ಕರ್ ಜೀವನ ಚಿತ್ರ.* ತನುಮನ ಪ್ರಕಾಶನ.
- Jaffrelot, C. (2005). *Dr. Ambedkar and Untouchability: Fighting the Indian Caste System*. http://ci.nii.ac.jp/ncid/BA86933609
- Kumar, R. (1985). Gandhi, Ambedkar and the Poona pact, 1932. *South Asia:Journal of South Asian Studies, 8*(1–2), 87–101. https://doi.org/10.1080/00856408508723068
- Zelliot, E. (1996). *From Untouchable to Dalit: Essays on the Ambedkar movement*. http://ci.nii.ac.jp/ncid/BB01201676

ಸೃಜನಿ

SRUJANI: Indian Journal of Innovative Research and Development (SIJIRD)
Volume-2 Issue 6, January - February 2024, Pp. 121-130
Bi-Monthly, Peer-Reviewed, Open Access, Indexed Journal

I S S N: 2583-3510
S I R D F
J O U R N A L S
editor@srujani.in
www.srujani.in

# HEALTH AND HEALTH SEEKING BEHAVIOUR OF TRIBAL WOMEN IN SOUTHERN PART OF KARNATAKA

**MANJUNATHA B R[1] AND SHYLAJA K[2]**
[1]Karnataka State Tribal Research Institute, Mysuru
[2]Indian Institute Multidisciplinary Research and Development, Mysuru.

***Abstract:***

*This study examines the health status and health-seeking behavior of tribal women residing in the southern region of Karnataka, India. Using anthropological research methods, data were collected through surveys and qualitative interviews with a sample of tribal women from various communities in the region. Findings reveal a complex picture of health challenges faced by tribal women, malnutrition, and infectious diseases. Despite these challenges, the study identifies resilient health-seeking behaviors among tribal women. The study underscores the importance of understanding the socio-cultural context of health among tribal communities and calls for targeted interventions to improve access to and utilization of healthcare services among tribal women in southern Karnataka.*

***Keywords:*** Tribal women, Indigenous communities, Health status, Health-seeking behavior, Traditional healers, Community health, Socio-cultural factors.

## INTRODUCTION

Tribal communities in India represent a diverse and culturally rich population, often characterized by unique social structures, beliefs, and practices. Among these communities, tribal women face particular challenges related to health and healthcare access, which are influenced by a combination of socio-economic, cultural, and geographic factors. In the southern region of Karnataka, home to numerous tribal communities, understanding the health status and health-seeking behavior of tribal women is essential for addressing health disparities and improving overall well-being.

Despite progress in healthcare delivery and infrastructure development in recent years, tribal women in southern Karnataka continue to experience disproportionate rates of maternal and child mortality,

***Please cite this article as:*** Manjunatha B R & Shylaja K. (2024). Health and health seeking behaviour of tribal women in southern part of Karnataka. *SRUJANI: Indian Journal of Innovative Research and Development.* 2(6), 121-130.

malnutrition, and infectious diseases. These disparities are exacerbated by a range of structural and systemic barriers, including geographic isolation, limited access to healthcare facilities, and socio-cultural norms that may discourage seeking formal medical care.

Moreover, the health-seeking behavior of tribal women in this region is shaped by a complex interplay of factors, including traditional healing practices, perceptions of illness and wellness, and socio-economic constraints. While some tribal communities may rely primarily on indigenous healing methods and community-based support networks, others may seek care from government health facilities or private providers, depending on factors such as proximity, affordability, and perceived effectiveness.

Given the importance of addressing health inequities among tribal populations, there is a growing need for research that explores the health status and health-seeking behavior of tribal women in southern Karnataka. By gaining insights into the unique challenges and strengths of these communities, policymakers, healthcare providers, and community leaders can develop targeted interventions and policies aimed at improving access to quality healthcare services and promoting holistic well-being among tribal women.

This study aims to contribute to this growing body of knowledge by examining the health and health-seeking behavior of tribal women in southern Karnataka. By employing a mixed-methods approach, including surveys and qualitative interviews, we seek to elucidate the socio-cultural, economic, and structural factors that shape health outcomes and healthcare utilization among tribal women in this region.

## REVIEW OF LITERATURE

The pioneering anthropological studies regarding health, disease, medicine, and treatment include the works of Rivers (1924), Clements (1932), Evans-Pritchard (1937), Field (1937), Spencer (1941), and Ackerknecht (1947). Caudill (1953) reviewed the application of anthropology in medicine, marking the beginning of significant anthropological contributions to medical issues. Following Caudill's work, Polgar (1962) and Scotch (1963) provided notable review works in this field.

Mead (1966) analyzed the impact of socio-cultural and environmental factors on health issues among pre-literate populations. Hardwood (1970) investigated the social phenomena of witchcraft and sorcery among the Safwa community. Evans-Pritchard (1937) and Bailey (1991) explored supernatural elements in disease etiology from indigenous perspectives. Anthropologists have offered various explanations for concepts like disease, illness, and sickness.

Medical anthropology in India emerged more recently, with initial studies focusing primarily on tribal health,

disease, medicine, and treatment. Naik (1972) discussed exploratory studies in their review papers. Chaudhuri (1990) addressed significant issues related to health, considering cultural and environmental dimensions. Majumdar (1933) examined indigenous perceptions of disease and illness. Srinivas (1952), Dube (1955), and Nagda (2004) researched tribal populations and health in Rajasthan.

Helman (1995) investigated culture, health, and illness, while Sharma (1991) focused on women's health problems and issues. Basu (1993) assessed the health status of tribal women in India. Misra (2000) studied ecology, culture, and health among the Saharia community in Rajasthan. Bhatia and Cleland (2008) examined gynecological diseases, health-seeking behavior, and expenditures in Karnataka. Ramakrishna (2008) conducted a prospective study on health, illness, and care during the obstetric period in rural Karnataka. Mohindra (2009) explored women's health and poverty alleviation in India. Despite these contributions, there remains a dearth of research focusing specifically on the health status of rural women, particularly those from tribal regions.

## OBJECTIVES OF THE STUDY

- Assess the Health Status of Tribal Women: This objective aims to provide a comprehensive understanding of the health challenges faced by tribal women in the region.
- Explore Health-Seeking Behaviors and Practices: The second objective is to investigate the health-seeking behaviors and practices of tribal women in response to illness, injury, or preventive care needs.
- Identify Barriers to Healthcare Access: The third objective is to identify the barriers and challenges that tribal women encounter in accessing healthcare services in southern Karnataka.

## METHODOLOGY

In an anthropological perspective, conducting research on the health and health-seeking behavior of tribal women in southern Karnataka would involve employing methodologies that prioritize understanding the socio-cultural context and lived experiences of the individuals within their communities.

***Participant Observation:*** Anthropological research often involves prolonged engagement and immersion in the community being studied. Researchers could spend time living among tribal communities in southern Karnataka to observe daily life, rituals, healthcare practices, and interactions related to health and illness. This approach allows researcher to gain firsthand insights into the cultural norms, beliefs, and behaviors related to health.

***Ethnographic Interviews:*** Ethnographic interviews are in-depth, open-ended conversations with members of the community to explore their perspectives,

experiences, and beliefs regarding health and healthcare. Researcher conducted interviews with tribal women, community leaders, traditional healers, and healthcare providers to understand their perceptions of health, illness causation, treatment preferences, and barriers to accessing healthcare services.

***Focus Group Discussions:*** Focus group discussions bring together a small group of individuals from the community to discuss specific topics related to health and healthcare. These discussions provide insights into shared beliefs, norms, and practices within the community, as well as differing perspectives and experiences among participants. Researcher organized focus groups with tribal women to explore health and health seeking behavior of tribal women.

***Surveys:*** Surveys can be used to collect quantitative data on health indicators, healthcare utilization patterns, and socio-demographic characteristics of the study population. Researcher designed surveys to gather information on key health outcomes, access to healthcare services, health-seeking behaviors, and socio-economic factors affecting health among tribal women in southern Karnataka.

***Community Engagement and Collaboration*:** Anthropological research often emphasizes collaboration and co-creation of knowledge with the community being studied. Researcher engaged community members as active participants in the research process, seeking their input and feedback at various stages of the study. Community involvement enhanced the relevance and validity of research findings and contribute to the development of culturally appropriate interventions to address health disparities.

By integrating these anthropological methodologies, researchers can gain a holistic understanding of the health and health-seeking behavior of tribal women in southern Karnataka, grounded in the cultural contexts and lived experiences of the communities being studied. This approach can help identify culturally relevant strategies for improving healthcare access, promoting health equity, and empowering tribal women to advocate for their health needs.

## SAMPLING METHOD

For the present study selected as sample 120 tribal women in southern Karnataka, a purposive sampling method adopted for this study. Collaborating with local community leaders and healthcare providers, we identified diverse participants based on criteria like age, ethnicity, and geographic location.

## STUDY AREA

The study area encompasses Hunsur and H.D. Kote Taluks in Mysore district, along with Ponnampet and Virajapet Taluks in Kodagu district. These regions represent diverse socio-cultural contexts, with significant tribal populations residing in remote and rural areas. Understanding the health dynamics within these Taluks is

essential due to their geographical isolation and limited access to healthcare resources. Research conducted here could shed light on the health challenges faced by tribal women, including issues related to maternal and child health, infectious diseases, and healthcare-seeking behavior. By focusing on these specific Taluks, the study aims to provide targeted insights that could inform policy interventions and healthcare initiatives tailored to the needs of tribal communities in southern Karnataka.

## RESULT AND DISCUSSION

Table 1: Socio-demographic Profile of study participants (n=120)

| Characteristics | Frequency | % |
|---|---|---|
| **Social Group** | | |
| Soliga | 30 | 25.0 |
| Yerava | 30 | 25.0 |
| Jenukuruba | 30 | 25.0 |
| Bettakuruba | 30 | 25.0 |
| **Type of Family** | | |
| Nuclear | 109 | 90.8 |
| Joint | 4 | 3.3 |
| Extended | 7 | 5.8 |
| **Age group in Years** | | |
| Below 24 years | 7 | 5.8 |
| 25 – 34 | 16 | 13.3 |
| 35 – 44 | 38 | 31.7 |
| 45 – 54 | 30 | 25.0 |
| 55 – 64 | 17 | 14.2 |
| Above 65 | 12 | 10.0 |
| **Marital status** | | |
| Married | 84 | 70.0 |
| Unmarried | 21 | 17.5 |
| Widow | 13 | 10.8 |
| Separate/Divorce | 2 | 1.7 |
| **Education Level** | | |
| Illiterate | 42 | 35.0 |
| Primary | 31 | 25.8 |
| Highschool | 23 | 19.2 |
| PUC | 19 | 15.8 |
| Graduate and Above | 5 | 4.2 |
| **Occupation** | | |
| Agriculture | 30 | 25.0 |
| Agriculture Labour | 59 | 49.2 |
| Collection of Minor forest product | 17 | 14.2 |
| Private Sector | 7 | 5.8 |
| Govt. Sector | 2 | 1.7 |
| Unemployed | 5 | 4.2 |
| **Family Income (Monthly)** | | |
| Below 5000 | 77 | 64.2 |
| 5000-10000 | 39 | 32.5 |
| 10000-20000 | 4 | 3.3 |
| Above 20000 | 0 | 0 |

Table 1 presents the socio-demographic characteristics of tribal women in the study area, comprising Hunsur and H.D. Kote Taluks of Mysore district, as well as Ponnampet and

Virajapet Taluks of Kodagu district, with a total sample size of 120. The table outlines the distribution of women across different social groups, revealing an equal representation of Soliga, Yerava, Jenukuruba, and Bettakuruba tribes, each constituting 25% of the sample. Regarding family structure, the majority of women belong to nuclear families (90.8%), while only a small proportion reside in joint (3.3%) or extended families (5.8%). In terms of age distribution, the highest percentage of women fall within the 35-44 age group (31.7%), followed by the 45-54 age group (25.0%). Marital status indicates that a significant portion of women are married (70.0%), while a smaller percentage are unmarried (17.5%), widowed (10.8%), or separated/divorced (1.7%). Education levels vary, with the majority being illiterate (35.0%) or having primary education (25.8%). Occupation-wise, agriculture labor (49.2%) and agriculture (25.0%) constitute the primary sources of livelihood. Family income predominantly falls below 5000 INR monthly (64.2%), highlighting the economic vulnerability of the studied population. This detailed breakdown of socio-demographic characteristics provides a comprehensive understanding of the profile of tribal women in the study area, crucial for designing targeted interventions and policies to address their unique needs and challenges.

**Table 2: Health problems of tribal women in last 6 month to the study**

| **Health problems** | **Frequency (n=120)** | **%** |
|---|---|---|
| Fever and Cold | 32 | 29.6 |
| Headache | 36 | 33.3 |
| Anemic | 16 | 14.8 |
| Bone related problems | 43 | 39.8 |
| Skin problems | 38 | 35.2 |
| Cardio Vascular related | 12 | 11.1 |
| Diabetes | 9 | 8.3 |
| Thyroid | 7 | 6.5 |
| BP | 31 | 28.7 |
| Kidney and Liver problem | 7 | 6.5 |
| Respiratory related diseases like TB, COPD, Asthma | 15 | 13.9 |
| Gastritis | 21 | 19.4 |
| Mental related problems | 3 | 2.8 |
| Dental related | 29 | 26.8 |
| Eye related problems | 12 | 11.1 |
| Reproductive health problems | 16 | 14.8 |

Table 2 presents the health problems experienced by tribal women in the six months prior to the study, based on a

sample size of 120. The most commonly reported health issues include headache (33.3%), bone-related problems (39.8%), and skin problems (35.2%). Fever and cold are also prevalent, with a frequency of 29.6%. Other notable health concerns include high blood pressure (28.7%), dental-related issues (26.8%), and respiratory-related diseases like TB, COPD, and asthma (13.9%). Anemia affects a significant portion of the population (14.8%), while cardiovascular-related problems (11.1%) and reproductive health problems (14.8%) are also reported. Less frequently reported health issues include diabetes (8.3%), thyroid problems (6.5%), kidney and liver problems (6.5%), gastritis (19.4%), eye-related problems (11.1%), and mental health problems (2.8%). This comprehensive overview of health problems highlights the diverse health challenges faced by tribal women in the study area, underscoring the need for targeted healthcare interventions to address these issues effectively.

**Table 3: Type of treatment in last six months by respondent**

| **Treatment** | **Frequency (n=120)** | **%** |
|---|---|---|
| Government hospitals | 57 | 47.5 |
| Private Hospital/Clinic | 33 | 27.5 |
| Traditional medicine | 21 | 17.5 |
| Others | 9 | 7.5 |

Table 3 displays the types of treatment sought by tribal women within the last six months prior to the study, based on a sample size of 120 respondents. The majority of respondents sought treatment at government hospitals, constituting 47.5% of the sample. Private hospitals/clinics were also commonly utilized, with 27.5% of respondents opting for this type of treatment. Traditional medicine was chosen by 17.5% of respondents, indicating a significant reliance on indigenous healing methods within the community. A smaller proportion of respondents (7.5%) reported seeking treatment from other sources not specified in the table. This distribution underscores the diverse healthcare-seeking behaviors among tribal women, reflecting a blend of modern medical practices and traditional healing approaches in addressing health issues within the community.

## DISCUSSION

The socio-demographic characteristics of the respondents, highlighting their diversity in terms of social group, family structure, age distribution, marital status, education level, occupation, and family income. The equal representation of Soliga, Yerava, Jenukuruba, and Bettakuruba tribes reflects a concerted effort to ensure a comprehensive understanding of the tribal population in the region. The predominance of nuclear families, illiteracy, agriculture-related occupations, and low family incomes underscores the socio-economic

challenges faced by tribal women, which likely influence their health outcomes and healthcare access.

The health problems experienced by tribal women in the six months preceding the study. The prevalence of headaches, bone-related problems, and skin issues suggests a high burden of musculoskeletal and dermatological conditions within the community. Additionally, the significant occurrence of fever and cold, high blood pressure, dental issues, and respiratory diseases underscores the diverse range of health challenges faced by tribal women, including communicable and non-communicable diseases. Anemia, reproductive health problems, and mental health issues also emerge as noteworthy concerns, warranting attention from healthcare providers and policymakers.

The healthcare-seeking behaviors of tribal women, revealing a mix of utilization patterns across government hospitals, private hospitals/clinics, traditional medicine, and other sources. The high utilization of government hospitals underscores the importance of public healthcare infrastructure in meeting the healthcare needs of tribal communities, potentially due to factors such as affordability and accessibility. However, the significant utilization of private healthcare facilities and traditional medicine suggests a preference for alternative treatment options, reflecting the influence of cultural beliefs and practices on healthcare decisions.

The findings from this study emphasize the complex interplay of socio-demographic factors, health issues, and healthcare-seeking behaviors among tribal women in the study area. Addressing the diverse health needs of this population requires a multifaceted approach that considers socio-economic disparities, cultural norms, and access to healthcare services. Efforts to improve healthcare delivery, promote health education, and foster community engagement are essential for enhancing the health and well-being of tribal women in the region.

## SUMMARY AND CONCLUSION

The socio-demographic characteristics of the respondents highlight the socio-economic challenges faced by tribal women, including low education levels, predominantly agricultural occupations, and low family incomes. Despite these challenges, tribal women exhibit diverse healthcare-seeking behaviors, utilizing a mix of government hospitals, private healthcare facilities, traditional medicine, and other sources for treatment. The prevalent health problems experienced by tribal women range from musculoskeletal and dermatological issues to communicable diseases, reproductive health problems, and mental health issues.

In conclusion, addressing the health needs of tribal women requires a holistic approach that acknowledges the socio-economic determinants of health, cultural beliefs, and access to healthcare services. Efforts to improve healthcare infrastructure, promote health education,

